# ವಿಷಯಾನುಕ್ರಮಣಿಕೆ

---

ಹೆಸರು

-+ ಶ್ರೀರಾಮಸಹಾಯಂ +-

# ಸುಬೋಧ ಕುಸುಮಾಂಜಲಿ ಗ್ರಂಥಮಾಲೆ

## (ಸಚಿತ್ರ ಮಾಸಪುಸ್ತಕಾವಳಿ)

### ಮುನ್ನುಡಿ:—

ಭಗವದ್ಭಕ್ತವರ್ಯನಾದ "ಕುಚೇಲ" ಎಂಬ ಶ್ರೀಕೃಷ್ಣನ ಪುಣ್ಯೋಪಾಖ್ಯಾನವು ಶ್ರೀಮನ್ಮಹಾವಿಷ್ಣುಭಾಗವತದ ದಶಮಸ್ಕಂಧದಲ್ಲಿ ಉಕ್ತವಾದುದು. ಶ್ರೀಬಾದರಾಯಣ ಮಹರ್ಷಿಪ್ರಣೀತವಾದ ಭಾಗವತ ಗ್ರಂಥರತ್ನವು ಮೋಕ್ಷಾಪೇಕ್ಷಿಯಾಗಿದ್ದ ಪರೀಕ್ಷಿನ್ಮಹಾರಾಜನಿಗೆ ಶ್ರೀಶುಕಬ್ರಹ್ಮರ್ಷಿಯಿಂದ ಏಳು ದಿನಗಳಲ್ಲಿ ಉಪದೇಶಿಸಲ್ಪಟ್ಟಿತಷ್ಟೆ! ಅದರಲ್ಲಿ ಇಂತಹ ಭಕ್ತಶಿರೋಮಣಿಗಳ ಉಪಾಖ್ಯಾನಗಳು, ಒಂದೆರಡಲ್ಲ-ಅನೇಕವಿವೆ! ಅವುಗಳಲ್ಲಿ ಒಂದೊಂದೂ ಪಠನಯೋಗ್ಯವಾಗಿವೆ, ಮನನ ಯೋಗ್ಯವಾಗಿವೆ, ಜನ್ಮಸಾರ್ಥಕ್ಯಕ್ಕಾಗಿ ಅನುಕರಣೀಯ ಯೋಗ್ಯವಾಗಿವೆ.—

ನಮ್ಮ ಪ್ರಕೃತಕಥಾನಾಯಕನು ರಾಜಾಧಿರಾಜನೆಂದು ಪ್ರಸಿದ್ಧನಾದವನಲ್ಲ; ಲಕ್ಷ್ಮೀಪುತ್ರನೆಂದು ಘನತೆಗೇರಿದವನಲ್ಲ; ವೀರಾಗ್ರೇಸರನಾದ ಯೋಧನೆಂದು ಯಶಸ್ವಿಯಾದವನಲ್ಲ! ಆತನೊಬ್ಬ ಬಡಬ್ರಾಹ್ಮಣನು, ಗರ್ಭದರಿದ್ರನು! ಆತನ ಕುಟೀರವು ದಾರಿದ್ರ್ಯಕ್ಕೆ ತೌರುಮನೆ-ಕ್ಷಾಮದೇವತೆಯ ನೆಲೆವೀಡು! ಆದರೇನು ಆತನ ಮನೋರಾಜ್ಯ ವೈಶಾಲ್ಯಕ್ಕೆ ಮೇರೆಯಿರಲಿಲ್ಲ ಪತ್ನೀಪುತ್ರಾದಿಗಳೂ ತಾನೂ ಉಡಲು ಬಟ್ಟೆಯಿಲ್ಲದೆ ತಿನ್ನಲು ತೀನಿಯಿಲ್ಲದೆ ಉಪವಾಸವಿದ್ದು ಕಳೆದ ರಾತ್ರಿಗಳಿಗೆ ಗಣನೆಯಿಲ್ಲ! ಆದರೆ ಆ ಮಹಾನುಭಾವನು ತನ್ನಾ ರಿಕ್ತತೆಗೆ ರೋಸಿ ತನ್ನ ಕರ್ಮವನ್ನು-ವಿಧಿಯನ್ನು ಎಂದೂ ನಿಂದಿಸಲಿಲ್ಲ. ನಿಷ್ಕರುಣೆಯೆಂದು ದೈವವನ್ನು ದೂಷಿಸಲಿಲ್ಲ ಯಮನಿಯಮಾಸನಾದಿ ಅಷ್ಟಾಂಗಯೋಗಗಳೆಂಬ ವೀರರನ್ನು ಸ್ನೇಹಿಸಿ, ಶ್ರವಣಮನನಾದಿಗಳೆಂಬ ದಿವ್ಯಾಯುಧಗಳ ಸಹಾಯದಿಂದ, ಕಾಮಕ್ರೋಧಾದಿಗಳೆಂಬ ಆರುಮಂದಿ ಬದ್ಧಶತ್ರುಗಳನ್ನು ಜಯಿಸಿ, ಪಂಚೇಂದ್ರಿಯಗಳೆಂಬ ಕೋಟೆಕೊತ್ತಲುಗಳನ್ನು ಸ್ವಾಧೀನಗೊಂಡು, ಹೃದಯ ಮಂದಿರದಲ್ಲಿ, ಚಿತ್ತಶುದ್ಧಿಯೆಂಬ

ಸುವರ್ಣಸೀರದಲ್ಲಿ, ಜ್ಞಾನ ಭಕ್ತಿ ವೈರಾಗ್ಯಗಳೆಂಬ ದಿವ್ಯಾಭರಣಗಳನ್ನೂ ಶಾಂತತೆಯೆಂಬ ಕಿರೀಟವನ್ನೂ ಸಂತುಷ್ಟಿಯೆಂಬ ಪದಕಯುಕ್ತವಾದ ನವರತ್ನ ಹಾರವನ್ನೂ ಧರಿಸಿ ಕುಳಿತಿದ್ದ ಪರಮಧನ್ಯನಾದ ಆ ವಿರಕ್ತ ಚಕ್ರವರ್ತಿಯು ಐಶ್ವರ್ಯಮದಗರ್ವಿತನಾದ ಯಾವನೊಬ್ಬ ಹೀನಜೀವಿಯನ್ನು 'ದೇಹಿ' ಯೆಂದು ಎಂದೂ ಯಾಚಿಸಲಿಲ್ಲ. ತೃಪ್ತಿಯೆಂಬ ಐಶ್ವರ್ಯವು ಅಕ್ಷಯವಾಗಿರಲು ಆ ನಿಯತಾತ್ಮನು ಎಂದೂ ಯಾರನ್ನೂ ನೀಡೆಂದು ಬೇಡಲಿಲ್ಲ. ಅಲ್ಲದ ಅಸಹನೀಯವಾದ 'ಷಷ್ಠಂಮಹಾಪಾತಕ' ವೆಂದು ವರ್ಣಿತವಾಗಿರುವ ದುರ್ಧರದಾರಿದ್ರ್ಯವ್ಯಾಧಿಗೆ ಬೆದರಿ ತನ್ನ ತಪೋನುಷ್ಠಾನಗಳಿಗೆ ಕುಂದನ್ನು ತರಲಿಲ್ಲ. ಭಗವದ್ಭಕ್ತಿಗೆ ಲೋಪವನ್ನುಂಟುಮಾಡಲಿಲ್ಲ

**ಶ್ಲೋಕ:—** "ಅನನ್ಯಾಶ್ಚಿಂತಯಂತೋಮಾಂ | ಯೇಜನಾಃಪರ್ಯುಪಾಸತೇ ||
ತೇಷಾಂನಿತ್ಯಾಭಿಯುಕ್ತಾನಾಂ | ಯೋಗಕ್ಷೇಮಂವಹಾಮ್ಯಹಂ ||"

ಎಂಬ ಭಗವದ್ವಾಕ್ಯದಲ್ಲಿ ವಿಶ್ವಾಸವಿಟ್ಟು, ನಿರ್ವಿಕಾರನಾಗಿ, ನಿಶ್ಚಲನಾಗಿ, ನಿರ್ಮಮನಾಗಿ ಪರಮವೈರಾಗ್ಯಸಂಪನ್ನನಾಗಿ ಆ ಮಹಾನುಭಾವನು ದಾರಿದ್ರ್ಯವನ್ನು ಎದುರಿಸಿ ನಿಶ್ಚಿಂತೆಯಿಂದ ಅನನ್ಯಶರಣನಾಗಿ ಭಗವಧ್ಯಾನತತ್ಪರನಾಗಿದ್ದನು! ಇಂತಹ ಮಹಾನುಹಿಮರ ಚರಿತ್ರೆಯು ಪೃಥ್ವಿಯ ಮತ್ತಾವ ದೇಶದಲ್ಲಿ ದೊರೆಯುವುದು?

ಆತನ ಪತ್ನಿಯಾದರೂ ಬಡತನಕ್ಕೆ ಬೇಸತ್ತು ಎಂದಾದರೂ ಪತಿಯನ್ನು ನಿಂದಿಸಿದಳೆ, ಗರ್ಭದರಿದ್ರನಾದ ಆತನ ಕೈಹಿಡಿದೆನೆಂದು ತನ್ನ ದುರ್ವಿಧಿಯನ್ನು ಬೈದುಕೊಂಡಳೆ, ಅಥವ ಆತನಿಗಿಲ್ಲದ ಐಶ್ವರ್ಯಪದವಿ-ಭೋಗಭಾಗ್ಯಗಳನ್ನು ಕೋರಿದಳೆ? ಅಷ್ಟುಮಾತ್ರವಲ್ಲ, ದರಿದ್ರನಾದ ನಿರ್ಧನನಾದ ಆ ತನ್ನ ಪತಿಯ ವಿಷಯದಲ್ಲಿ ಅಲಕ್ಷ್ಯಭಾವವನ್ನು ವಹಿಸಿದಳೆ? ಅಥವ ಆತನಿಗೆ ಅವಿಧೇಯಳಾಗಿದ್ದಳೆ? ಆಹಾ, ಅಂತಹ ಅಸಹನೀಯ ದಾರಿದ್ರ್ಯದುಃಖಾನುಭವದಲ್ಲಿಯೂ ಎಂತಹ ಶಾಂತತೆ, ಎಂತಹ ವಿನಯ ವಿಧೇಯತೆಗಳು, ಎಂತಹ ತೃಪ್ತಿ ಸೌಜನ್ಯಗಳು! ಇಂತಹ ಧನ್ಯಜೀವಿತಗಳು ಮತ್ತೆಲ್ಲಿ ದೊರೆಯುವುವು?—

ಇನ್ನು ಶ್ರೀಕೃಷ್ಣಮೂರ್ತಿ! ಅನಂತೈಶ್ವರ್ಯಗಳಿಗೆ ಸ್ವಾಮಿಯಾಗಿ, ಲಕ್ಷ್ಮೀಪತಿಯಾಗಿ, ಮೇರೆಯಿಲ್ಲದ ಭೋಗಭಾಗ್ಯಾನುಭವಕ್ಕೆ ಚ್ಯುತಿಯನ್ನು

ಕಾಣದ ಅಧಿಕಾರಿಯಾದ ಆ ಮಹಾನುಭಾವನಲ್ಲಿ ಎಂತಹ ವಿನಯ, ಸ್ವಜನ-ಸ್ವಕೀಯಾಭಿಮಾನ, ಸೌಜನ್ಯಾದಿಗಳು! ಅದೆಂತಹ ಸೌಶೀಲ್ಯ ಸರಳತೆ ವಾತ್ಸಲ್ಯಾದಿಗಳು! ಅದೆಂತಹ ಔದಾರ್ಯ, ಸ್ನೇಹ, ಆತ್ಮೀಭಾವಗಳು! ಧನ್ಯ ಧನ್ಯ ಭಾರತಮಾತೇ, ನಿನ್ನ ಪುತ್ರರಲ್ಲಿ-ಪುತ್ರಿಯರಲ್ಲಿ ಎಂತೆಂತಹ ಅಲೌಕಿಕ ಸದ್ಗುಣಗಳನ್ನು ಸಮ್ಮಿಶ್ರಣಗೊಳಿಸಿ ಪ್ರಪಂಚಕ್ಕೆ ಆದರ್ಶರತ್ನಗಳನ್ನು ಚೆಲ್ಲಿರುವೆ! ಈ ಬಗೆಯ ದಿವ್ಯರತ್ನಗಳು ಮತ್ತೆಲ್ಲಿ-ಅದಾವ ಗಣಿಗಳಲ್ಲಿ ದೊರೆಯುವವು? ಪರಸ್ಪರ ವಿರುದ್ಧಗಳಾದ ಈ ಸ್ಥಿತಿಗಳು ಒಂದಾಗಿ ಸೇರಿದ ಉದಾಹರಣೆಗಳು ಪ್ರಪಂಚದಲ್ಲಿ ವಿರಳವಲ್ಲವೆ? ಆದರೆ ಭಾರತದೇಶದಲ್ಲಿ ಅವುಗಳಿಗೆ ಕೊರತೆಯಿಲ್ಲ! ಅಲ್ಲ-ಮಿತಿಯಿಲ್ಲ! ಇಂತಹ ಆದರ್ಶರತ್ನಗಳ ಕಂಠಹಾರವನ್ನು ಕರ್ನಾಟಕ ಬಾಲಕ ಬಾಲಿಕೆಯರಿಗೆ, ಯುವಕ ಯುವತಿಯರಿಗೆ ಸಮರ್ಪಿಸಲು ಶಕ್ತ್ಯನುಸಾರ ಹೆಣಗುತ್ತಿರುವ ಗ್ರಂಥಮಾಲೆಗೆ ಕರ್ಣಾಟಕ ಮಹಾ ಜನರು ಸ್ವಹಸ್ತ ಪರಹಸ್ತಗಳಿಂದ ಸಹಕರಿಸಿ ಬೆಂಬಲವನ್ನೀಯಲಿ! ಅಷ್ಟೇ ನಮ್ಮ ಪ್ರಾರ್ಥನೆ!—

ಬೆಂಗಳೂರು ಸಿಟಿ.
೨೧—೭—೧೯೩೬

ಇತಿ ಸುಜನ ವಿಧೇಯ,
ಯಂ ರಾಮರಾವ್.

ಸುಬೋಧ ಮುದ್ರಣಾಲಯ, ಬೆಂಗಳೂರು ಸಿಟಿ —೨,೦೦೦—೧೯೩೬

# ಬ ಡ ತ ನ



**ಕಂದ ಪದ್ಯ:—**

ಬಡತನದಂತೆಪ್ರೊಲಾವುದು ।
ಪೊಡವಿಯೊಳೊದವಿಪುದು ದುಗುಡಮಂ ಮನುಜಂಗೆಂ ॥
ಪಶಬಿಡದಾಲೋಚಿಸಿ ನೋ ।
ಳ್ಪೊಡೆ ಬಡತನದಂತೆ ದುಃಖದಂ ಬಡತನಮೋ ॥

(ನೀತಿಮಂಜರಿ)



**ವೃತ್ತ:—**

ಧನಹೀನಂ ಧೃತಿಹೀನನಪ್ಪನದರಿಂದಕ್ಕುಂ ತಿರಸ್ಕಾರಮುಂ ।
ಜನರಿಂದಂ ಪರಿಭೂತನಾಗಿ ಮನದೊಳ್ ನಿರ್ವೇದಮಂ ಪೊಂದುಗುಂ ॥
ಮನಮುದ್ವಿಗ್ನಮದಾಗೆ ಶೋಕಮದರಿಂ ಬುದ್ಧಿಭ್ರಮಂ ಬುದ್ಧಿನಾ ।
ಶನದಿಂ ನಾಶಮೆ ನಿರ್ಧನಂಗಹುದಲ್ತೆ! ಶ್ರೀ ಚೆಲ್ವ ನಾರಾಯಣ ॥

(ಶ್ರೀ ಚೆಲ್ವ ನಾರಾಯಣ ಶತಕ)



ಸುಬೋಧ ಕುಸುಮಾಂಜಲಿ ಗ್ರಂಥಮಾಲೆ



# ಶ್ರೀ ವಿಷ್ಣು ಭಕ್ತಾಗ್ರಣಿ

# ಕುಚೇಲ

ಶ್ರೀರಾಮ ಸಹಾಯಂ

ಶ್ರೀ ವಿ ಷ್ಣು ಭ ಕ್ತಾ ಗ್ರ ಣಿ

# ಕು ಚೇ ಲ



**ಅಧ್ಯಾಯ ೧** "ಕು–ಚೇಲ"

ನಮ್ಮ ಮಾತೃಭೂಮಿಯಾದ ಈ ಭಾರತದೇಶವು ಸಕಲವಿಧ ಸಂಪತ್ತುಗಳಿಗೂ ಜನ್ಮಸ್ಥಾನವೆನಿಸಿಕೊಂಡಿದೆ. ಫಲವಂತವಾದ ಭೂಮಿ, ವರ್ಷದ ಎಲ್ಲಾ ಕಾಲಗಳಲ್ಲೂ ಅವಿಚ್ಛಿನ್ನವಾಗಿ ಜಲಪ್ರವಾಹಗಳಿಂದ ಶೋಭಿಸುವ ಜೀವನದಿಗಳು, ದೇಶದ ಎಲ್ಲಾ ಭಾಗದಲ್ಲೂ ನಿರ್ಮಲೋದಕದಿಂದ ತುಂಬಿ ತೋರುವ ಕೆರೆಕಟ್ಟೆಕಾಲುವೆಗಳು, ಅತಿ ಉಷ್ಣವಲ್ಲದ-ಅತಿ ಶೀತವಲ್ಲದ ದಿವ್ಯಾರೋಗ್ಯಪ್ರದಾಯಕವಾದ ಹವೆ-ವಾಯುಗುಣಗಳು, ಇವುಗಳ ಅನುಕೂಲತೆಯಿಂದ ಸಮೃದ್ಧಿಯಾಗಿ ಬೆಳೆವ ಪುಷ್ಟಿಕರಗಳಾದ ನವಧಾನ್ಯಗಳು, ವಿವಿಧ ಪುಷ್ಪಫಲಗಳು, ಬಗೆಬಗೆಯ ಕಾಯಿ-ಪಲ್ಯಗಳು! ಇಲ್ಲಿಯ ಗಣಿಗಳಲ್ಲಿ ವಿವಿಧ ಲೋಹಗಳೂ, ರತ್ನ ಕೆಂಪುಗಳೂ ದೊರೆಯುತ್ತಿವೆ. ಕಾಡುಗಳಲ್ಲಿ ಬಹು ಬೆಲೆಯ ವಿವಿಧ ವೃಕ್ಷಜಾತಿಗಳು ಬೆಳೆಯುತ್ತಿವೆ. ಬಹು ವರ್ಣವಿಚಿತ್ರವಾದ ಬಗೆಬಗೆಯ ಪಕ್ಷಿವರ್ಗಗಳೂ, ಬಹು ಉಪಯುಕ್ತವಾದ ನಾನಾ ಜಾತಿಯ ಮೃಗಗಳೂ ಇಲ್ಲಿ ಹೇರಳವಾಗಿವೆ. ಪೃಥ್ವಿಯ ಮತ್ತಾವ ದೇಶದಲ್ಲೂ ಇಷ್ಟುಮಟ್ಟಿನ ಸಸ್ಯ ಸಮೃದ್ಧಿ, ಲೋಹ ಸಮೃದ್ಧಿ, ಜಲ ಸಮೃದ್ಧಿ, ಧನಧಾನ್ಯ ಸಮೃದ್ಧಿ, ಜನ ಸಮೃದ್ಧಿ, ಪ್ರಾಣಿವರ್ಗ ಸಮೃದ್ಧಿ, ಉತ್ತಮ ವಾಯುಗುಣದ ಅನುಕೂಲ್ಯತೆ ಮುಂತಾದುವುಗಳನ್ನು ಏಕತ್ರ ಕಾಣುವುದು

ಅಸಾಧ್ಯ, ಅಪೂರ್ವ! ದಯಾಮಯನಾದ ಸರ್ವೇಶ್ವರನು, ಕೃಪಾಕಟಾಕ್ಷ ವಿಟ್ಟು ನಮ್ಮ ಮಾತೃಭೂಮಿಗೆ ಇಷ್ಟು ಬಗೆಯ ಸಂಪತ್ತು-ಸೌಭಾಗ್ಯಗಳ ನ್ನೂ ಅಕ್ಷಯವಾಗಿ ಕರುಣಿಸಿ ರಕ್ಷಿಸುತ್ತಿದ್ದಾನೆ.

ಆದರೆ, ಇಷ್ಟಿದ್ದರೂ ನಮಗೆ ನಿತ್ಯ ದಾರಿದ್ರ್ಯವೇಕೆ ತಪ್ಪಲಿಲ್ಲ? ಉಡು ವುದಕ್ಕೆ ಗೇಣು ಬಟ್ಟೆಗೆ ಗತಿಯಿಲ್ಲದೆ, ತಿನ್ನುವುದಕ್ಕೆ ಹಿಡಿ ಅನ್ನಕ್ಕೆ ಮಾರ್ಗ ಕಾಣದೆ, ಇರುವುದಕ್ಕೆ ಅಂಗೈಯಗಲ ನೆಳಲಿಲ್ಲದೆ ನರಳುತ್ತಿರುವ ಅಸಂಖ್ಯ ಜನ ಗಳಿದ್ದಾರೆಯಲ್ಲ? ಅನುಭವಿಸುವುದಕ್ಕಿಲ್ಲದ ಐಶ್ವರ್ಯವಿದ್ದರೇನು? ಎಂಬ ವಿ ಚಾರವುಂಟಾಗುವುದು ಅದು ಸಹಜವೇ! ಸದ್ಯಃ ಕಾಲಕ್ಕೆ ಅಮೃತಸರಸ್ಸಿನ ಬಳಿಯಲ್ಲಿದ್ದರೂ ಬಾಯಾರಿಕೆಯಿಂದ ಪ್ರಾಣ ಬಿಡುತ್ತಿರುವ ದುರ್ದೈವಿಯಂತಿದೆ ನಮ್ಮವರ ಸ್ಥಿತಿ! ಕಲ್ಪವೃಕ್ಷದ ಅಡಿಯಲ್ಲಿದ್ದೂ ಕ್ಷುಧೆಗೆ ಹಿಡಿ ಅನವಿಲ್ಲದೆ ಪ್ರಾಣಬಿಡುವ ಹತಭಾಗ್ಯನಂತಾಗಿದೆ ನಮ್ಮ ಬಾಳು! ನಮ್ಮಲ್ಲಿಯ ಸಕಲ ವಿಧ ಸೌಖ್ಯಗಳನ್ನೂ ಶತಾಂಶ ಅನುಭವಿಸುವವರು ಪರಕೀಯರು. ಉತ್ತ ಮವಾದ ನಿರ್ಮಲವಾದ ಸ್ಥಳದಲ್ಲಿ ವಾಸಿಸುವವರು ಅವರು; ಕೊಳಚೆಯ- ರೋಗೋಪದ್ರವ ಕಾರಕವಾದ ಅಶುದ್ಧ ಸ್ಥಳದಲ್ಲಿ ವಾಸಿಸುವವರು ನಾವು. ಪರಿಶುದ್ಧವಾದ ಗಾಳಿಬೆಳಕುಗಳ-ನೀರು ಆಹಾರಗಳ ಸೌಲಭ್ಯತೆಯು ಅವರಿಗೆ, ಕಲ್ಮಷವಾದ ಕೊಳೆತ ಹುಳಿತ ವಸ್ತುಗಳ ಅನುಭವವು ನಮಗೆ ಇದೇಕೆ? ಧಾನ್ಯ ಮತ್ತು ಫಲಗಳ ಒಳಗಿನ ಪುಷ್ಟಿಕರವಾದ ಹಿಟ್ಟು-ತಿರುಳುಗಳು ಅವರಿಗೆ ಮೇಲಿನ ಹೊಟ್ಟು-ಸಿಪ್ಪೆಗಳು ನಮಗೆ! ಹೀಗೆ ಸಕಲ ವಿಧ ಸೌಭಾಗ್ಯಗಳನ್ನೂ ಅನುಭವಿಸಿ ಮೆರೆಯುವವರು ಪರಕೀಯರು, ಅವರಿಗೆ ಆ ಎಲ್ಲಾ ವಸ್ತುಗ ಳನ್ನೂ ಒದಗಿಸಿಕೊಟ್ಟು, ಸೇವೆಮಾಡಿ, ಸಾಲದುದಕ್ಕೆ ಅವರು ಬಿಟ್ಟ ಹೊಟ್ಟು ಸಿಪ್ಪೆಗಳಿಗಾಗಿಯೂ-ಕೊಳೆತು ಹುಳಿತ ವಸ್ತುಗಳಿಗಾಗಿಯೂ ಬಡಿದಾಡಿಕೊ ಳ್ಳುತ್ತಿರುವವರು ನಾವು! ಹೀಗಿದ್ದೂ "ನಮ್ಮ ಮಾತೃಭೂಮಿಯು ಸರ್ವ ಸಂಪತ್ಪರಿಪೂರ್ಣವಾದುದು ಕಲ್ಪವೃಕ್ಷ ಸಮಾನವಾದುದು!" ಎಂದು ಹೆಮ್ಮೆ ಪಡುವುದೇಕೆ? ಎಂದಾದರೂ ವಿಚಾರವುಂಟಾಗದಿರದು! ಅದೂ ಸಹಜ ವಾದುದೇ!—

ಆದರೆ ನಾವು ಒಂದು ವಿಷಯವನ್ನು ಕುರಿತು ಯೋಚಿಸಿಕೊಳ್ಳಬೇಕು, ಪಕ್ಷಪಾತಿಯಲ್ಲದ, ಕರುಣಾಳುವಾದ ಪರಮೇಶ್ವರನು ಒದಗಿಸಿಕೊಟ್ಟ

ಈ ಎಲ್ಲಾ ಪದಾರ್ಥಗಳ ಪ್ರಯೋಜನವನ್ನೂ ಹೊಂದುವುದಕ್ಕೆ ಪ್ರಪಂಚದ ಸಮಸ್ತ ಪ್ರಾಣಿವರ್ಗಕ್ಕೂ ಸಂಪೂರ್ಣಸ್ವಾತಂತ್ರ್ಯವುಂಟು. ಅಕ್ಕಿಯಿದೆ, ಕಟ್ಟಿಗೆಯಿದೆ, ಪಾತ್ರೆಯಿದೆ, ಬೆಂಕಿ ನೀರುಗಳಿವೆ, ಅವುಗಳನ್ನು ಯೋಗ್ಯ ರೀತಿಯಿಂದ ಉಪಯೋಗಿಸಿ ಅನ್ನ ಮಾಡಿಕೊಂಡು ತಿನ್ನಲು ಬುದ್ಧಿಯಿದೆ. ಅಷ್ಟು ಮಾತ್ರ ಪ್ರಯತ್ನಮಾಡಿ ಹೊಟ್ಟೆ ತುಂಬಿಸಿಕೊಳ್ಳದಿದ್ದರೆ ಆ ತಪ್ಪು ಯಾರದು! ತಾಯಿಯ ಮೊಲೆಯಲ್ಲಿ ಹಾಲಿದೆಯೆಂದು, ಕರುವು ಗುಮ್ಮಿ ಕುಡಿಯದೆ, ಬಾಯಿ ತೆರೆದುಕೊಂಡು ನಿಂತಿದ್ದರೆ, ಮೊಲೆಯಲ್ಲಿನ ಹಾಲು ಬಾಯಿಗೆ ಸುರಿಯಲಾರದು! ಮರದ ಮೇಲೆ ಹಣ್ಣಿದೆ, ಹೊಡೆಯಲು ಕವಣೆ-ಕಲ್ಲುಗಳಿವೆ, ಹೊಡೆಯುವುದಕ್ಕೆ ದೇಹದಲ್ಲಿ ಬಲವಿದೆ ಅಷ್ಟುಮಾತ್ರ ಪ್ರಯತ್ನ ಪಡದಿದ್ದರ ಫಲವು ಹೇಗೆ ದೊರೆತೀತು! ನಮ್ಮಲ್ಲಿ ಅದೃಷ್ಟ-ಪ್ರಯತ್ನಗಳ ಬಡಿದಾಟವೊಂದಿದೆಯಲ್ಲವೆ? ಅದೂ ಒಂದು ಬಗೆಯಿಂದ ನಮ್ಮನ್ನು ಹಿಂದಕ್ಕೆ ಳೆಯುತ್ತಿದೆ ಈ ಸಂದರ್ಭದಲ್ಲಿ ಇಷ್ಟು ಮಾತ್ರ ಹೇಳಬಹುದು , ಮೇಲೆ ಹೇಳಿದ ಅಕ್ಕಿಯಿಂದ ಬುದ್ಧಿಯವರೆಗಿನ,-ಮರದ ಮೇಲಿನ ಹಣ್ಣಿನಿಂದ-ದೇಹದಲ್ಲಿನ ಬಲದವರೆಗಿನ, ಸಾಧನಗಳು ಒದಗಿರುವುದು ಅ-ದೃಷ್ಟನಾದ ಪೂರ್ವಾರ್ಜಿತ ಫಲಸ್ವರೂಪವಾಗಿ, ಅವುಗಳ ಪ್ರಾಪ್ತಿಯನ್ನೇ ಅದೃಷ ವೆನ್ನೋಣ! ಅವುಗಳನ್ನು ಹೊಂದಿಸಿ, ಅನುಭವಿಸು ವುದಕ್ಕೆ ಸಿದ್ಧನಾಗುವಂತೆ ಮಾಡಿಕೊಳ್ಳುವುದಕ್ಕಾಗಿ ಜಗತ್ತಿನಿರುವಷ್ಟಾದರೂ ಪ್ರಯತ್ನ ಮಾಡದಿದ್ದರೆ ಅದರಿಂದ ಫಲವು ಪ್ರಾಪ್ತಿಸುವುದು ಹೇಗೆ? ಅಷ್ಟುಮಾತ್ರ ಪುರುಷಪ್ರಯತ್ನ ಮಾಡಬೇಕಾದುದು ಅನಿವಾರ್ಯವು! ನಿರ್ಭೀತಿ ನಿರಲಸಿಕೆಗಳಿಂದ, ಯಾರು ಹಾಗೆ ಪ್ರಯತ್ನ ಮಾಡುವರೋ ಅವರಿಗೆ, ನಿಷ್ಪಕ್ಷಪಾತಿಗಳಾದ ಕರ್ಮಾಧಿದೇವತೆಗಳು ಅವರ ಫಲವನ್ನು ಒಪ್ಪಿಸುತ್ತಾರೆ ನಾವೂ ಹಾಗೆಯೋಗ್ಯಮಾರ್ಗದಿಂದ, ತಕ್ಕ ಪ್ರಮಾಣದಲ್ಲಿ ಪ್ರಯತ್ನ ನಡಿಸಿದರೆ ಫಲವು ಏಕೆ ಉಂಟಾಗದು?—

ಇದು ಸಮಷ್ಟಿಗೆ-ಸಮಾಜಕ್ಕೆ ಸಂಬಂಧಪಟ್ಟುದಾಯಿತು. ಇನ್ನು ವ್ಯಕ್ತಿಗೆ ದಾರಿದ್ರ್ಯವುಂಟಾಗುವುದಕ್ಕೆ ಕಾರಣವೇನು? ಎಂದರೆ, ಅದಕ್ಕೆ ಹಿರಿಯರ ಒಂದು ಮಾತಿದೆ "ಅದಾನ ದೋಷೇಣ ಭವೇದ್ದರಿದ್ರಃ" ಎಂಬಂತೆ ದಾನಮಾಡದಿರುವ ದೋಷವೇ ದಾರಿದ್ರ್ಯಕ್ಕೆ ಮೂಲಕಾರಣ! ಹಿಂದೆ ದಾನಮಾಡಲಿಲ್ಲ-ಈಗ ಇಲ್ಲ; ಈಗ ಕೊಡುವುದಕ್ಕಿಲ್ಲ-ಮುಂದಕ್ಕೆ ಪ್ರಾಪ್ತಿ

ಯಿಲ್ಲ. ಹೀಗಾಗಿ ಬಡವನು, ಪುನಃ ಪುನಃ ಅವಿರಳ ದಾರಿದ್ರ್ಯ ದೋಷ ದಿಂದ ಸಂಕಟಪಡುವುದು ತಪ್ಪದು. ಇಲ್ಲಿ ಒಂದು ವಿಷಯುವನ್ನು ಗಮನಿಸ ಬೇಕು ಪ್ರಾಪಂಚಿಕ ಪದಾರ್ಥಗಳು, ನದೀಪ್ರವಾಹದಂತೆ! ನದಿಯು ತನ್ನ ಲ್ಲಿಗೆ ಪರ್ವತಪ್ರಾಂತಗಳಿಂದ ಹರಿದು ಬಂದ ಜಲವನ್ನು ಸ್ವಾರ್ಥತೆಯಿಂದ ಉಳಿಸಿಕೊಳ್ಳಲು ಯತ್ನಿಸದೆ ಪ್ರಾಣಿವರ್ಗ ವನಸ್ಪತಿವರ್ಗಗಳಿಗೆ ಪ್ರಯೋಜನ ವಾಗಲೆಂಬ ಉದಾರಭಾವದಿಂದ ಅವಿಚ್ಛಿನ್ನವಾಗಿ ದಾನ ಮಾಡುತ್ತಿರುವುದ ರಿಂದಲೇ ಮೇಲೆ ಮೇಲೆ ಅದಕ್ಕೆ ನಿರ್ಮಲ ಜಲವೂ ಅವಿಚ್ಛಿನ್ನವಾಗಿ ಒದಗು ತ್ತಲೇ ಇರುತ್ತದೆ. ಆದರೆ ಪಕ್ಕದಲ್ಲಿರುವ ಒಂದು ಕುಂಟೆಯನ್ನು ನೋಡಿ! ಅದು, ಸ್ವಾರ್ಥತೆಯಿಂದ ಹೊರಕ್ಕೆ ಜಲವನ್ನು ಬಿಡದೆ, ತನ್ನಲ್ಲೇ ಕೂಡಿಟ್ಟು ಕೊಳ್ಳುವುದರಿಂದ ಅದರಲ್ಲಿನ ನೀರು ಕೊಳೆತು, ಕ್ರಿಮಿಗಳು ಬಿದ್ದು, ದುರ್ವಾ ಸನೆ ಹಿಡಿದು ಕೆಟ್ಟುಹೋಗುತ್ತದೆ! ಅಲ್ಲವೆ? ಅಂತೆಯೇ ಪೂರ್ವ ಪುಣ್ಯಾನುರಿ ಪಾಕದಿಂದ ಐಶ್ವರ್ಯವನ್ನು ಪಡೆದವರು ಅದನ್ನು ಮುಂದಕ್ಕೂ ಹೆಚ್ಚಿಸಿಕೊ ಳ್ಳಬೇಕಾಗಿದ್ದರೆ, ನದಿಯಂತೆ ನಿಸ್ವಾರ್ಥಿಗಳಾಗಬೇಕು. ಹಾಗಾಗದೆ ಕುಂಟ ಯಂತೆ ಸ್ವಾರ್ಥಿಗಳಾದರೆ ಆಗುವ ಪರಿಣಾಮವನ್ನು ಹೇಳಬೇಕಾದುದಿಲ್ಲವಷ್ಟೆ! ಸರಿ ಇದು ಧನವಂತರಾದ ನಿಸ್ವಾರ್ಥಿಗಳ ಮತ್ತು ಧನವಿರುವ ಜಿಪುಣರ ಗತಿಯಾಯಿತು, ಶುದ್ಧವಾಗಿ ಏನೂ ಇಲ್ಲದ ಗರ್ಭದರಿದ್ರರು, ಹಿಂದೆ ದಾನ ಕೊಟ್ಟಿಲ್ಲವಾದ್ದರಿಂದ ಈಗ ಇಲ್ಲ, ಈಗ ಕೊಡಲು ಇಲ್ಲವಾದುದರಿಂದ ಮುಂ ದಕ್ಕೆ ಇಲ್ಲವೆಂಬಂತಾದರೆ, ಅವರು ಉದ್ಧಾರವಾಗುವುದು ಹೇಗೆ? ಅವರು ಹಾಗೆಯೇ ಬೆಂಕಿಯಲ್ಲಿ ಬಿದ್ದ ಕ್ರಿಮಿಯಂತೆ ಜನ್ಮ ಜನ್ಮಕ್ಕೂ ಸಂಸಾರಸಮು ದ್ರದಲ್ಲಿ ದಾರಿದ್ರ್ಯವೆಂಬ ಬಡಬಾನಲಕ್ಕೆ ಸಿಕ್ಕು ನಾಶವಾಗುವುದೇ ಗತಿಯೇ ಎಂದರೆ, ಅದಕ್ಕೊಂದು ಮಾರ್ಗವುಂಟು! ಅವರ ಜೀವಿತವು ಮಿಟ್ಟೆ ನೆಲದಲ್ಲಿ ರುವ ಒಣಗಿ ಬತ್ತಿಹೋದ ಕುಂಟೆಯಂತಿರುವುದು ಮೇಘರಾಜನ ಪರಮಾ ನುಗ್ರಹವಿಲ್ಲದೆ ಆ ಕೆರೆಗೆ ಹೇಗೆ ನೀರು ಬರುವಂತಿಲ್ಲವೋ ಹಾಗೆಯೇ, ಸಕಲ ಐಶ್ವರ್ಯಗಳಿಗೂ ನಿಧಿಯಾದ, ಲಕ್ಷ್ಮೀಪತಿಯಾದ ಶ್ರೀ ಪರಮಪುರುಷನ ಪರಮಾನುಗ್ರಹವಿಲ್ಲದೆ, ಅವರಿಗೆ ಲಕ್ಷ್ಮೀಕಟಾಕ್ಷವುಂಟಾಗದು ಆದು ದರಿಂದ ಅವರು ಅನನ್ಯ ಶರಣರಾಗಿ ಆ ಪರಾತ್ಪರ ವಸ್ತುವನ್ನು ಶರಣು ಹೊಕ್ಕು, ನಿರ್ಮಮರಾಗಿ ಆಲಸ್ಯವನ್ನು ಬಿಟ್ಟು ಸೇವಾಮಾರ್ಗವನ್ನು ಅನು

ಸರಿಸುವುದೇ (ಕೆಲಸಮಾಡತೊಡಗುವುದೇ) ಪರಮಸಾಧನವು. ಅವರ ಮನಸ್ಸಿನಲ್ಲಿ ದೃಢನಂಬಿಕೆಯಿರಬೇಕು. ಹೃದಯದಲ್ಲಿ ನಿರ್ಭೀತಿಯಿರಬೇಕು ಕ್ರಿಯೆಯಲ್ಲಿ ವಂಚನೆಯಿಲ್ಲದಿರಬೇಕು ಅಂತಾದರೆ, ಅರ್ಥಿಜನ ಕಲ್ಪತರುವಾದ ಭಗವಂತನ ಕೃಪಾವರ್ಷವು ತಪ್ಪದೆ ಸುರಿಯುವುದು ಬಡವನಾಗಿದ್ದವನೂ ಇಲ್ಲದನಾಗುವನು!—

ಇನ್ನು, ನಮ್ಮ ಚರಿತ್ರನಾಯಕನಂತೆ ಕೇವಲ ಭಗವನ್ನಿರ್ಭರರಾದ ಮಹಾಮಹಿಮರಾದರೋ ಪ್ರಾಪಂಚಿಕರಾದ ನಾವು ಅಗಾಧವೆಂದು ಎಣಿಸಿಕೊಂಡಿರುವ ಈ ಧನಧಾನ್ಯ-ವಸ್ತ್ರವಡವ, ಭೂಮಿಕಾಣಿ, ಭೋಗಭಾಗ್ಯಗಳನ್ನು ಐಶ್ವರ್ಯವೆಂದು ಎಣಿಸುವುದೇ ಇಲ್ಲ! ಇವುಗಳನ್ನುಂಟಾಗಿರುವುದು ಸುಖ, ಇವುಗಳಿಲ್ಲದಿರುವುದು ದುಃಖ-ಕಷ್ಟ ವೆಂಬ ಭಾವನೆಯೇ ಅವರಿಗಿರುವುದಿಲ್ಲ ಅವರು ಪ್ರಪಂಚದ ಸುಖ ದುಃಖ, ಐಶ್ವರ್ಯ ದಾರಿದ್ರ್ಯ ಮುಂತಾದ ದ್ವಂದ್ವಗಳನ್ನು ದಾಟಿದ ಪುಣ್ಯಪುರುಷರು ಹೀಗಿರುವಲ್ಲಿ ಇಂತಹ ನಿರ್ಮಮರ ಉದಾಹರಣೆಯು ನಮಗೆ ಹೇಗೆ ಪ್ರಯೋಜನವಾದೀತೆಂದರೆ, ನಾವು ಅಜ್ಞಾನದಿಂದ ಮುಂಗಾಣದೆ, ಫಲಭ್ರಾಂತಿಯಿಂದ ದೀಪಕ್ಕೆರಗುವ ಶಲಭದಂತೆಯೂ, ಸುಖಾಭಿಲಾಷೆಯಿಂದ ಜೇನುತುಪ್ಪದ ಹರವಿಯಲ್ಲಿ ಬಿದ್ದು ನಾಯುವ ನೊಣದಂತೆಯೂ, ಭ್ರಾಂತರಾಗಿ ಕಣ್ಣುಕಾಣದೆ ಪ್ರಾಪಂಚಿಕ ಸುಖಭೋಗಗಳಲ್ಲಿ ಮುಳುಗಿಹೋಗದೆ ಎಚ್ಚರದಿಂದಿರುವಂತೆ ಅವರ ಪೂತ ಜೀವಿತಗಳು ಜಾಗ್ರತಗೊಳಿಸುವುವು ಪ್ರಪಂಚವೆಲ್ಲವೂ ಐಶ್ವರ್ಯವಿದ್ದರೇನೇ ಸುಖಪಡುವುದೆಂದು ತಿಳಿದಿರುವಲ್ಲಿ ಬಡತನದ ಪ್ರಭಾವವೆಂಥದು, ಅದರಿಂದಲೂ ಹೇಗೆ ಪ್ರಯೋಜನ ಹೊಂದಬಹುದು ಎಂಬುದರ ಗುಟ್ಟನ್ನು ತಿಳಿಸುವುವು ಸಮಸ್ತಕ್ಕೂ ಆಧಾರಸ್ವರೂಪನಾದ ಸರ್ವೇಶ್ವರನನ್ನು ಮಾತ್ರ ಮರೆಯದಿದ್ದರೆ ಈ ಪ್ರಾಪಂಚಿಕ ಸಂಪತ್ತಿದ್ದರೂ ಬಾಧಿಸದು ಎಂಬುದನ್ನು ತಿಳಿಯಪಡಿಸುವುವು ಆದುದರಿಂದ, ಇನ್ನು ಭಗವದ್ಭಕ್ತನಾಗಿದ್ದು ಭಾಗ್ಯವನ್ನು ಪಡೆದ ಆ ಪುಣ್ಯಶೀಲನ ಚರಿತ್ರೆಯನ್ನು ಪಠಿಸೋಣ!—

ದ್ವಾಪರಯುಗಾಂತ್ಯಭಾಗದಲ್ಲಿ ಭೂಭಾರಹರಣೋದ್ದೇಶದಿಂದ ಶ್ರೀಮನ್ಮಹಾವಿಷ್ಣುಮೂರ್ತಿಯು ಶ್ರೀಕೃಷ್ಣಾವತಾರ ಮಾಡಿದನಷ್ಟೆ! ಆಗ ಆ ಜಗತ್ಪ್ರಭುವು ಲೌಕಿಕ ನಟನೆಯನ್ನು ಅನುಸರಿಸಿ ಪತ್ನೀಪುತ್ರ ಪರಿವಾರಗಳೊಂ

ಬಳಗ ಕೂಡಿ, ದ್ವಾರಕಾಪುರಿಯಲ್ಲಿ ವಾಸಿಸಿದ್ದನು. ಶ್ರೀಕೃಷ್ಣನು ವಿಶ್ವಕರ್ಮ ನಿಂದ ದ್ವಾರಕೆಯನ್ನು ನಿರ್ಮಿಸುವುದಕ್ಕೆ ಮೊದಲು ಯಾದವರು ಮಥುರಾ ಪುರಿಯನ್ನು ರಾಜಧಾನಿಯಾಗಿ ಮಾಡಿಕೊಂಡಿದ್ದರು. ಈ ಮಥುರಾಪುರಿಗೆ ಸಮೀಪದಲ್ಲಿ ಅವಂತಿಯೆಂಬ ಪಟ್ಟಣವೊಂದಿದ್ದಿತು. ಅದು ಸುತ್ತಲೂ ಕೋಟೆಕೊತ್ತಲಗಳಿಂದ ಆವರಿಸಲ್ಪಟ್ಟು ಶತ್ರುಗಳ ಪ್ರವೇಶಕ್ಕೆ ದುರ್ಗಮ ವಾಗಿದ್ದು, ಹೂಗಿಡ ತೋಟಗಳಲ್ಲಿ, ಕೆರೆಕಟ್ಟೆ ಕಾಲುವೆಗಳ ಸಹಾಯ ದಿಂದ ಸೊಂಪಾಗಿ ಬೆಳೆದ ಮರ ಪಕ್ವ-ಫಲ ಪುಷ್ಪಗಳಿಂದ ಭರಿತವಾಗಿ ನೇ ತ್ರಾನಂದಕರವಾಗಿದ್ದಿತು. ಉನ್ನತವಾದ ಗೃಹಪಙ್ಕ್ತಿಗಳೂ, ಆರಾಮ ವಾಟಿಕೆಗಳೂ ಸತ್ರದೇವಾಲಯಗಳೂ ಆ ಪಟ್ಟಣದ ಸೌಂದರ್ಯವನ್ನು ಹೆಚ್ಚಿಸುತ್ತಿದ್ದುವು. ಅಲ್ಲಿ ಅನೇಕ ಮಂದಿ ಧನವಂತರೂ ವಾಸವಾಗಿದ್ದರು.

ನಮ್ಮ ಕಥಾನಾಯಕನೂ ಆ ಅವಂತಿ ಪುರೀ ವಾಸವಾಗಿದ್ದನು. ಆತನ ಮನೆಯು ಅತಿಯಾಗಿ ಜೀರ್ಣವಾಗಿ ಹೋಗಿದ್ದಿತು. ಆ ಮನೆಯ ಮೇಲ್ಛಾ ವಣಿಯು ಸೂರ್ಯ ಚಂದ್ರರ ಪ್ರವೇಶಕ್ಕೆ ಯಾವ ಬಗೆಯಿಂದಲೂ ತಡೆಯ ನ್ನುಂಟುಮಾಡಲು ಶಕ್ತವಾಗಿರಲಿಲ್ಲ. ಮೇಘರಂಜನ ದಯಾವರ್ಷವಂತೂ ಅದರ ಮೇಲೆ ಯಥೇಷ್ಟ ಪ್ರವಹಿಸಲು ಯಾವ ಪ್ರತಿಬಂಧಕವೂ ಇರಲೇ ಇಲ್ಲ. ಗೋಡೆಗಳೂ ಅಲ್ಲಲ್ಲಿ ಬಿರುಕು ಬಿದ್ದು ಡೊಳ್ಳಾಗಿ, ಬಾಗಿಲುಗಳ ಕೀಲುಗಳು ತಪ್ಪಿ, ಸರ್ವವೂ ಅವ್ಯವಸ್ಥೆಯಲ್ಲಿದ್ದಿತು. ಗೃಹಸ್ವಾಮಿಯಾ ಗಿದ್ದ ಸುದಾಮನು ಕೇವಲ ಭಗವದ್ಭಕ್ತನು. ಆತನನ್ನು ಯಾವ ಬಗೆಯ ಪ್ರಾಪಂಚಿಕ ವಿಷಯ ವಿಚಾರಗಳೂ ಆಕರ್ಷಿಸುವಂತಿರಲಿಲ್ಲ. ಆತನು, ದರಿ ದ್ರರಾದ, ಆದರೂ ವ್ರತನಿಷ್ಠರಾದ ಭಗವದ್ಭಕ್ತರಾದ ಮಾತಾಪಿತೃಗಳಿಂದ ಜನನ ಹೊಂದಿ, ಬಾಲ್ಯದಲ್ಲಿ ಉತ್ತಮರ ಸಹವಾಸದಲ್ಲೇ ಬೆಳೆದನು. ಸಾಂ ದೀಪಿನಿ ಯೆಂಬ ಗುರುವರ್ಯನನ್ನು ಆಶ್ರಯಿಸಿ ವೇದವೇದಾಂಗ-ಧರ್ಮಶಾ ಸ್ತ್ರಾದಿಗಳನ್ನು ಅಭ್ಯಸಿಸಿದನು. ಸಕಲ ವಿದ್ಯಾಪಾರಂಗತನಾದನು. ಯಾ ದವಾಗ್ರೇಸರರಾದ ಬಲರಾಮನೂ ಶ್ರೀಕೃಷ್ಣನೂ ಸಹಾಧ್ಯಾಯಿಗಳಾಗಿ ದ್ದರು. ಸುದಾಮನು ನಿಶ್ಚಲ ಬ್ರಹ್ಮಚರ್ಯವ್ರತವನ್ನು ಸಾಂಗವಾಗಿ ಪಾಲಿಸಿ ಗುರುಕುಲವಾಸವನ್ನು ಮುಗಿಸಿದನು. ತರುವಾಯ ಸನಾತನ ಧರ್ಮಮಾ ರ್ಗಾನುವರ್ತಿಯಾದ ಆತನು ಗೃಹಸ್ಥಧರ್ಮಪಾಲನೆಗಾಗಿ ಉತ್ತಮ ಕುಲ

ಸಂಭೂತಳೂ, ಶೀಲವತಿಯೂ ವಿನಯ ಗಾಂಭೀರ್ಯ ಗುಣೋಪೇತಳೂ ಆದ ಒಬ್ಬ ಕನ್ಯಾಮಣಿಯನ್ನು ವರಿಸಿ ವಿವಾಹ ಮಾಡಿಕೊಂಡನು

ಸುದಾಮನು ಸ್ನಾನಸಂಧ್ಯಾದಿ ನಿತ್ಯಕರ್ಮಾನುಷ್ಠಾನಗಳಿಗೆ ಎಂದೂ ಲೋಪವನ್ನುಂಟುಮಾಡದೆ ಅತ್ಯಂತನಿಷ್ಠನಾಗಿದ್ದನು. ಜಿತೇಂದ್ರಿಯನಾಗಿದ್ದನು ತತ್ವವಿಚಾರ ತತ್ಪರನಾಗಿದ್ದನು ಆತನು ಬಡವನಾದರೂ ಮಾನಧನನು ದರಿದ್ರನಾದರೂ ಸಂತುಷ್ಟಾಂತರಂಗನು ಭಾರ್ಯಾಯುಕ್ತನಾಗಿ ಸಂಸಾರ ನಿರ್ವಹಣ ಭಾರವು ತನ್ನ ಮೇಲೆ ಹೊತ್ತಿದ್ದರೂ, ಕೇವಲ ಭಗವನ್ನಿರ್ಭರನಾದ್ದರಿಂದ ಯಾರನ್ನೂ, ಎಂದೂ, ಏತಕ್ಕಾಗಿಯೂ ಯಾಚಿಸದೆ, ತಾನಾಗಿ ದೊರೆತುದು ಎಷ್ಟು ಅಲ್ಪವಾದರೂ ಅಷ್ಟರಲ್ಲೇ ಪರಿಸಂತುಷ್ಟನಾಗಿ ಕಾಲಹರಣ ಮಾಡುತ್ತಿದ್ದನು. ಕಾಲಕ್ರಮದಲ್ಲಿ ಆತನಿಗೆ ಅನೇಕ ಮಂದಿ ಮಕ್ಕಳಾದರು ಸಂಸಾರವು ದಿನದಿನಕ್ಕೆ ಬೆಳೆಯಿತು ಆದರೂ ಸುದಾಮನ ತತ್ವ ಚಿಂತಾಪರವಾದ ಮನಸ್ಸು ಬೇರೆ ಕಡೆಗೆ ತಿರುಗಲಿಲ್ಲ ಸಕಲ ಜಗತ್ಸಂರಕ್ಷಕನಾದ ಸರ್ವೇಶ್ವರನೇ ಅವರನ್ನೂ ಕಾಪಾಡುವನೆಂದು ನಿಶ್ಚಿಂತನಾಗಿದ್ದುಬಿಟ್ಟನಲ್ಲದೆ ಧನಾರ್ಜನಾ ಕಾರ್ಯದಲ್ಲಿ ತೊಡಗಲೇ ಇಲ್ಲ ದಿನಗಳು ಕಳೆದಂತೆಲ್ಲ ದಾರಿದ್ರ್ಯವು ಅಸಹನೀಯವಾಗತೊಡಗಿತು ಒಂದೊಂದು ಹೊತ್ತು ಕಳೆಯುವುದೇ ಕಷ್ಟವಾಗುತ್ತಿದ್ದಿತು ಹೊಟ್ಟೆಗೇ ಇಲ್ಲವಾದ ಮೇಲೆ ಇನ್ನು ಬಟ್ಟೆಗೆಲ್ಲಿಂದ ಬರಬೇಕು! ಉಡಲು ಗಟ್ಟಿಯಾದ ಒಂದು ಬಟ್ಟೆಗೂ ಮಾರ್ಗವಿರಲಿಲ್ಲ. ಇದ್ದ ಒಂದೆರಡು ವಸ್ತ್ರಗಳೂ ನೂರಾರು ಛಿದ್ರಗಳಿಂದ ಕೂಡಿ, ಆತನ ದಾರಿದ್ರ್ಯ ಸಾಮ್ರಾಜ್ಯ ಚಕ್ರವರ್ತಿತ್ವದ ಧ್ವಜಚಿಹ್ನೆಗಳೋ ಎಂಬಂತಿದ್ದುವು. ಕ್ರಮಕ್ರಮವಾಗಿ ಆತನ ನಿಜನಾಮವೇ ಜನಗಳಿಗೆ ಮರೆತುಹೋಯಿತು ಎಲ್ಲರೂ, ಜೀರ್ಣವಸ್ತ್ರಧಾರಿ ಎಂಬರ್ಥ ಕೊಡುವ "ಕು-ಚೇಲ" ಎಂಬ ಹೆಸರಿನಿಂದಲೇ ಆತನನ್ನು ಕರೆಯುವರಾಗಿದ್ದರು ದಿನಕ್ರಮದಲ್ಲಿ ಅದೇ ಆತನಿಗೆ ನಿಜನಾಮವೋ ಎಂಬಂತೆ ರೂಢಿಗೆ ಬಂದುಹೋಯಿತು



## ಅಧ್ಯಾಯ ೨ "ಸತಿಪತಿಯರು"

ವಿಪ್ರಶ್ರೇಷ್ಠನಾದ ಕುಚೇಲನು ನಿತ್ಯದಲ್ಲೂ ಬ್ರಾಹ್ಮೀಮುಹೂರ್ತಕ್ಕೆ ಸರಿಯಾಗಿ ಎಚ್ಚತ್ತು, ಶೌಚಾಚಾರವು ತೀರಿದನಂತರ ಸ್ನಾನಮಾಡಿ ಭಗವತ್ಪೂಜಾಸಕ್ತನಾಗುವನು ಭಗವಂತನು ನಿಷ್ಕಲ್ಮಷವಾದ ಭಕ್ತಿಗೆ ವಶನಾಗಿ, ತನ್ನ ಭಕ್ತರು ಪ್ರೀತಿಪೂರ್ವಕವಾಗಿ ಸಮರ್ಪಿಸುವ ಪತ್ರವನ್ನಾಗಲೀ ಪುಷ್ಪವನ್ನಾಗಲೀ ಫಲವನ್ನಾಗಲೀ, ಯಾವುದಿಲ್ಲದಿದ್ದರೂ ಕೊನೆಗೆ ನೀರನ್ನೇ ಆಗಲಿ ಅನಂತವೆಂದು ಭಾವಿಸಿ ಸ್ವೀಕರಿಸತಕ್ಕ ಪರಮೋದಾರಿಯೆಂಬ ತತ್ವವನ್ನು ತಿಳಿದವನಾದುದರಿಂದ, ಭಗವದರ್ಪಣೆಗೆಂದಾದರೂ ಅವರಿವರಲ್ಲಿ ಕಾಡಿ ಬೇಡುವ ಹವ್ಯಾಸಕ್ಕೆ ಮನಗೊಡದೆ ಆ ದ್ವಿಜವರ್ಯನು ನಿಶ್ಚಲಮತಿಯಾಗಿ ಪರಿಶುದ್ಧ ಜಲವನ್ನೇ ಆ ಪರಮಪುರುಷನಿಗೆ ಸಮರ್ಪಿಸುವನು ಆ ದೇವದೇವನ ಅನಂತಗುಣಗಳನ್ನು ವೇದೋಕ್ತ ಸ್ತೋತ್ರಮಾಲೆಗಳಿಂದ ಕೀರ್ತಿಸುವನು ಆ ಸರ್ವಜ್ಞನ ವಿಚಿತ್ರ ಸೃಷ್ಟಿರಚನಾ ನೈಪುಣ್ಯವನ್ನು ಹೊಗಳುವನು ಆ ಸರ್ವಶಕ್ತನ ಅನಂತ ಬ್ರಹ್ಮಾಂಡ ಪರಿಪಾಲನಾ ಸಾಮರ್ಥ್ಯವನ್ನು ಮನದಣಿಗೆ ವರ್ಣಿಸುವನು ಆತನ ಕಲ್ಯಾಣಗುಣಗಳೆಂಬ ಸುಗಂಧ ಪುಷ್ಪಗಳ ಪರಿಮಳವೇ ಕುಚೇಲನ ಹೃದಯ ಸಂಪುಟವನ್ನೆಲ್ಲ ತುಂಬಿ ವ್ಯಾಪಿಸಿರಲು ಆ ಭಕ್ತಶ್ರೇಷ್ಠನು ಮತ್ತಾವ ಚಿಂತೆಗೂ ಮನಸ್ಸಿನಲ್ಲಿ ಎಡೆಗೊಡದೆ, ಆನಂದ ಬಾಷ್ಪಗಳನ್ನು ಅವಿರಳವಾಗಿ ಸುರಿಸುತ್ತಾ, ಆ ಭಕ್ತವತ್ಸಲನ ಧ್ಯಾನಾರ್ಣವದಲ್ಲೇ ಮಗ್ನನಾಗಿ ಎಷ್ಟೋ ಹೊತ್ತು ಇದ್ದು ಬಿಡುವನು.

ಕುಚೇಲನ ಪತ್ನಿಯಾದರೂ ಸ್ತ್ರೀಕುಲಭೂಷಣಳಾಗಿದ್ದಳು. ಪ್ರಾತಃಕಾಲ ಪತಿಗೆ ಮುಂಚಿತವಾಗಿಯೇ ಎದ್ದು ಮುಖ ಮಜ್ಜನಾದಿಗಳಿಂದ ಶುಚಿಯಾಗಿ ಮುತ್ತೈದೆ ಮರಿಗೆ ಅನಿವಾರ್ಯಭೂಷಣವಾದ ಕುಂಕುಮವನ್ನು ಹಣೆಗಿಟ್ಟುಕೊಂಡು ಪತಿಯ ಪಾದಗಳನ್ನು ಮನಸ್ಸಿನಲ್ಲಿ ಸ್ಮರಿಸಿಕೊಳ್ಳುತ್ತಾ ಮನೆಗೆಲಸಗಳಲ್ಲ ತೊಡಗುವಳು ತುಲಸೀವೃಂದಾವನದ ಸುತ್ತಲೂ ಗುಡಿಸಿ ಸಾರಿಸಿ ರಂಗವಲ್ಲಿಗಳಿಂದ ಅಲಂಕರಿಸುವಳು ಮನೆಯು ಕಟ್ಟೋಣವು (ಕಟ್ಟಡವು) ಎಷ್ಟು ಹೀನಸ್ಥಿತಿಯಲ್ಲಿದ್ದರೂ, ಆ ಸಾಧ್ವಿಯು ಅದನ್ನು ಕುರಿತು ಚಿಂತಿಸದೆ, ನೆಲವನ್ನು ಬಳಿದು, ಗುಡಿಸಿ ಎಲ್ಲೂ ಸ್ವಲ್ಪ ಕೊಳೆಯೂ ಸೇರಲು ಆಸ್ಪ

ದವಿಲ್ಲದಂತೆ ಶುಚಿಯಾಗಿಟ್ಟುಕೊಂಡಿರುವಳು. ಪತಿಯು ದೇವಪೂಜಾ ವೇಳೆಗೆ ಪೂಜಾಸ್ಥಾನವನ್ನು ಶುದ್ಧಿಗೊಳಿಸಿಕೊಟ್ಟು ಪೂಜೋಪಕರಣಗಳು ಏನೂ ಇಲ್ಲದಿದ್ದರೂ, ಇದ್ದ ಒಂದೆರಡನ್ನೇ ಶುಚಿಗೊಳಿಸಿಟ್ಟು, ಶ್ರದ್ಧಾಭಕ್ತಿಗಳಿಂದ ನಡೆದುಕೊಳ್ಳುವಳು. ಆಹ್ನಿಕವು ಮುಗಿದನಂತರ ಕುಚೇಲನು ಅಯಾಚಕ ವ್ರತವನ್ನು ಹಿಡಿದವನಾದುದರಿಂದ ಯಾರನ್ನೂ ಬೇಡದೆ, ನೇರವಾಗಿ ಹೊಲಗದ್ದೆಗಳ ಪ್ರಾಂತಕ್ಕೆ ಹೋಗುವನು. ಅಲ್ಲಿ ರೈತರು ಪೈರನ್ನು ಕೊಯ್ಯುವಾಗ, ಹೇರುವಾಗ, ಒಕ್ಕುವಾಗ ಕೆಳಕ್ಕೆ ಉದುರಿದ್ದ ಬತ್ತ ಅಥವ ಮಿಕ್ಕ ವಿವಿಧ ಧಾನ್ಯಗಳನ್ನು ಬಳಿದುಕೊಂಡು ಬಂದು, ತನ್ನ ಪತ್ನಿಯ ವಶಕ್ಕೆ ಕೊಡುವನು. ಆಕೆಯೂ ಪತಿಯು ತನ್ನ ಕೈಗೆ ತಂದು ಕೊಟ್ಟ ಆ ಸ್ವಲ್ಪವನ್ನೇ ಶ್ರದ್ಧಾಭಕ್ತಿಗಳಿಂದ ತೆಗೆದುಕೊಂಡು, ಆ ಬರಿಯ ಧಾನ್ಯದ ಕಾಳುಗಳನ್ನೇ ಸರ್ವೈಶ್ವರ್ಯವೋ ಎಂಬಂತಹ ತೃಪ್ತಿಯನ್ನು ಮುಖಭಾವದಿಂದ ತೋರಿಸುತ್ತಾ, ಕುಟೆ, ಕೇರಿ, ಹೊಟ್ಟು ಕಾಳುಗಳನ್ನು ಬೇರ್ಪಡಿಸುವಳು. ತರುವಾಯ ಮೈತೊಳೆದು, ಇದ್ದ ಒಂದು ಕೋರಿಬಟ್ಟೆಯನ್ನೇ ಮಡಿಯನ್ನಾಗಿಸಿ ಉಟ್ಟುಕೊಂಡು ಆ ಅಕ್ಕಿಯನ್ನು ಬೇಯಿಸಿ ಅಡಿಗೆ ಮಾಡುವಳು. ಕುಚೇಲ ಬ್ರಾಹ್ಮಣನು, ಅದನ್ನು ಶ್ರೀಪರಮೇಶ್ವರನಿಗೆ ನಿವೇದಿಸುವನು. ಅದರಲ್ಲೇ ಅತಿಥಿ ಅಭ್ಯಾಗತರಿದ್ದರೆ ಅವರಿಗೂ, ಪತಿಗೂ, ಮಕ್ಕಳಿಗೂ ಬಡಿಸಿ ಮಿಕ್ಕುದನ್ನು ತಾನು ಊಟ ಮಾಡುವಳು. ಎಷ್ಟೋ ದಿನಗಳಲ್ಲಿ ಆಕೆಗೆ ಏನೂ ಮಿಗುತ್ತಿರಲಿಲ್ಲ. ಮಿಕ್ಕ ದಿನಗಳಲ್ಲೂ ಹೊಟ್ಟೆ ತುಂಬುವಷ್ಟಿರುತ್ತಿರಲಿಲ್ಲ. ಎಂಟು ಹತ್ತು ದಿನಗಳಿಗೊಮ್ಮೆ ಪೂರ್ಣಗ್ರಾಸವಾದರೂ ಅದೂ ಒಂದು ಹೊತ್ತು ಮಾತ್ರ! ಹೀಗಾಗಿ ಆಕೆಯ ದೇಹಪುಷ್ಟಿಯು ಕಡಮೆಯಾಯಿತು ದೇಹದ ರಕ್ತಮಾಂಸಗಳು ದಿನದಿನಕ್ಕೆ ಕ್ಷೀಣಿಸಿದುವು. ಕೇವಲ ಎಲುಬು ಚರ್ಮಗಳು ಮಾತ್ರ ನಿಂತುವು. ಸಾಲದುದಕ್ಕೆ ಮಕ್ಕಳ ಕಾಟವೂ ದಿನದಿನಕ್ಕೆ ಅಧಿಕರಿಸುತ್ತಿದ್ದಿತು. ಅದಾವ ಜನ್ಮದ ಸುಕೃತವೋ (ಅಥವ ದುಷ್ಕೃತವೋ) ಆ ದಂಪತಿಗಳ ಉದರದಲ್ಲಿ ಇಪ್ಪತ್ತೇಳು ಮಂದಿ ಮಕ್ಕಳು ಜನಿಸಿದರು. ಪ್ರತಿದಿನವೂ ಬೆಳಗಾಯಿತೆಂದರೆ, ಅನ್ನ-ಅನ್ನ, ತಿಂಡಿ-ತಿಂಡಿ ಎಂದು ಬಟ್ಟೆಯನ್ನು ಹಿಡಿದು ಕಾಡಿ ಬೇಡುವ, ಕ್ಷಾಮದೇವತೆಯ ಪ್ರತಿರೂಪವೋ ಎಂಬಂತೆ ಅಸ್ಥಿ ಚರ್ಮಗಳ ಮೂರ್ತಿಗಳಾಗಿದ ಆ ಮಕ್ಕಳಿಗೆ ಆ ಸಾಧ್ವಿಯು

ಏನನ್ನು ಕೊಡಬಲ್ಲಳು? ಮನೆಯಲ್ಲಿ ಯಾವ ಮೂಲೆಯೂ ಶೂನ್ಯವೇ, ಯಾವ ಪಾತ್ರೆಯೂ ಬರಿದೇ! ಮತ್ತು ಮಕ್ಕಳನ್ನು ಸಮಾಧಾನವಾಗಿಸುವ ಮಾರ್ಗವಾವುದು! ಆದರೂ ಆ ಪತಿವ್ರತಾಶಿರೋಮಣಿಯು ಹಸಿವಿನಿಂದ ಕಾಡಿ ಪೀಡಿಸುವ ಮಕ್ಕಳ ಕಾಟವನ್ನು ಕುರಿತು ಎಂದೂ ಪತಿಯೊಂದಿಗೆ ಮೊರೆಯಿಟ್ಟುಕೊಂಡವಳಲ್ಲ ತನ್ನಾ ಕಷ್ಟವನ್ನು ಗಮನಿಸುವುದಿಲ್ಲವೆಂದು ಮನದಲ್ಲಿ ನೊಂದುಕೊಂಡು ಪತಿಯನ್ನು ನಿಂದಿಸಿದವಳಲ್ಲ ಈ ಆಸಹನೀಯ ದುಃಖವನ್ನು ನುಂಗಿಕೊಂಡು-ಸಹಿಸಿಸಹಿಸಿ, ಆಕೆಯ ದೇಹವು ಕರಗಿ ಶುಷ್ಕವಾಗಿ ಕೇವಲ ದೇಹದ ಆಕಾರ ಮಾತ್ರ ನಿಂತಿರಲು, ಆಕೆಯು ಕ್ಷಾಮಕಾಲದ ಮನುಷ್ಯಪ್ರತಿಮೆಯಂತೆಯೇ ತೋರುತ್ತಿದ್ದಳು ಕ್ರಮಕ್ರಮವಾಗಿ ಆಕೆಯ ಹೆಸರೇನೆಂಬುದೇ ಎಲ್ಲರಿಗೂ ಮರೆತು ಹೋಗಿ ಆಕೆಯನ್ನು ಕ್ಷುತ್‌ಕ್ಷಾಮೆಯೆಂದೇ ಎಲ್ಲರೂ ಕರೆಯತೊಡಗಿದರು ಆ ಹೆಸರು ಆಕೆಗೆ ಅನ್ವರ್ಥನಾಮವಾಗಿ, ಆಕೆಯ ಸ್ಥಿತಿಗೆ ಶತಾಂಶ ಒಪ್ಪುವಂತಿದ್ದಿತು!

ಇದು ಕೇವಲ ಉತ್ಪ್ರೇಕ್ಷೆಯೆಂದು ಪಾಠಕರು ಭಾವಿಸಬಹುದು! ಆದರೆ ಇಷ್ಟು ಮಾತ್ರವಲ್ಲದೆ ಮತ್ತು ಇದಕ್ಕಿಂತಲೂ ಹೆಚ್ಚಾದ ದಾರಿದ್ರ್ಯವ್ಯಾಧಿಗೆ ಒಳಪಟ್ಟು ನರಳುವವರು ಈಗಲೂ ನಮ್ಮಲ್ಲಿ ಒಬ್ಬರಿಬ್ಬರಲ್ಲ-ನೂರಾರಲ್ಲ, ಸಹಸ್ರಾವಧಿ-ಲಕ್ಷಾವಧಿ ಜನಗಳಿದ್ದಾರೆ ಅದನ್ನು, ಜನಾಂಗದ ನಿಜಸ್ಥಿತಿಯನ್ನು ಕಣ್ಣಿಟ್ಟು ನೋಡಿ ವಿಚಾರಿಸುವುದರಿಂದ ತಿಳಿಯಬಹುದು ಮತ್ತು ಅಂತಹ ದಾರಿದ್ರ್ಯದಲ್ಲೂ, ಸಹನೆ ಸತ್ಯ-ನಿಷ್ಠೆ ಶಾಂತತೆಗಳು ಉಳಿದಿರುವುವೇ ಎಂಬ ಸಂದೇಹವೂಂದಿರಬಹುದು ಹಾಗಿದ್ದರೆ ಅದೊಂದು ಅಲೌಕಿಕ ಸದ್ಗುಣವೇ ಆಗಿರುವುದಲ್ಲವೆ? ಅಂತಹ ಅನನ್ಯ ಸಾಧಾರಣವಾದ ಸದ್ಗುಣಾಭರಣದಿಂದ ವಿಭೂಷಿತರಾಗಿದ್ದರೆಂದೇ ನಮ್ಮಾ ದಂಪತಿಗಳು ಪ್ರಪಂಚದಲ್ಲಿ ಸಕಲರ ಹೊಗಳಿಕೆಗೂ ಪಾತ್ರರಾಗಿದ್ದಾರೆ! ಹಾಗಲ್ಲದೆ, ಅವರೂ ಬಡತನಕ್ಕೆ ಬೆದರಿ ಮರುಗಿ, ಪರರನ್ನು ಕಾಡಿ ಬೇಡುವಂತಿದ್ದರೆ ಅವರನ್ನು ಹೊಗಳುತ್ತಿದ್ದವರಾರು?—

ಈ ದಾರಿದ್ರ್ಯ ದುಃಖವನ್ನು ಆ ವಿಪ್ರವರ್ಯನು ಯಾವ ಬಗೆಯಿಂದಲೂ ಮನಸ್ಸಿಗೆ ತಂದುಕೊಳ್ಳಲಿಲ್ಲ; ಅದು ತನ್ನ ದುರ್ವಿಧಿಯೆಂದುಕೊಳಲಿಲ್ಲ; ಮರುಗಲಿಲ್ಲ. ತನ್ನ ಪೂರ್ವಾರ್ಜಿತ ಕರ್ಮಫಲವಾಗಿ ಪ್ರಾಪ್ತವಾ

ಗಿರುವುದಾದುದರಿಂದ ಆ ಬಡತನವನ್ನು ಸಮಾಧಾನದಿಂದ ಅನುಭವಿಸಿದಲ್ಲದೆ ಬೇರೇ ಮಾರ್ಗವಿಲ್ಲವೆಂದು ಚಿತ್ತಶಾಂತಿಯನ್ನು ತಳೆದಿದ್ದನು. ಹೆಂಡತಿಗೂ, ಹಾಗೆಯೇ ಸಹಿಸಿಕೊಂಡು ಮನೋನೈರ್ಮಲ್ಯಕ್ಕ ಕುಂದು ತಂದುಕೊಳ್ಳದಂತೆ ಬೋಧಿಸುತ್ತಿದ್ದನು

"ಲಕ್ಷ್ಮಿ ಸರಸ್ವತಿಯರು ಅತ್ತೆ ಸೊಸೆಯರು, ಅವರು ಒಬ್ಬರಿದ್ದಲ್ಲಿ ಮತ್ತೊಬ್ಬರಿರುವುದಿಲ್ಲ, ಇರಲು ಇಬ್ಬರಿಗೂ ಸಹನೆಯಿಲ್ಲ! ಆದುದರಿಂದಲೇ ಸರಸ್ವತೀ ಪುತ್ರರಾದ ವಿದ್ವಾಂಸರಲ್ಲಿ ಅನೇಕಾನೇಕರು ಬಡತನಕ್ಕೆ ಒಳಗಾಗಿರುವರು" ಎಂಬ ಹೇಳಿಕೆಯು, ಸರ್ವತ್ರ ಮೇಲೆ ಮೇಲೆ ಕಿವಿಗೆ ಬೀಳುತ್ತಿರುತ್ತದೆಯಲ್ಲವೆ? ಲಕ್ಷ್ಮೀಸರಸ್ವತಿಯರು ಅತ್ತೆ ಸೊಸೆಯರಿರಬಹುದು! ಅತ್ತೆ ಸೊಸೆಯರಾದ ಮಾತ್ರಕ್ಕೇ ಸೌಜನ್ಯವಿರಕೂಡದೇಕೆ? ಅತ್ತೆ ಸೊಸೆಯರು ಹೊಡೆದಾಡಲೇ ಬೇಕೆಂಬುದು ಶಾಸ್ತ್ರವಿಧಿಯೋ? ಅದು ಹಾಗಲ್ಲ, ಪ್ರಾಪಂಚಿಕವಾದ ವಸ್ತುಗಳನ್ನು ಸಂಗ್ರಹಿಸುವುದರಲ್ಲಿ ಒಂದು ನಿಯಮವುಂಟು! ಯಾವ ವಸ್ತುವೂ ಆ ನಿಯಮಕ್ಕೊಳಪಟ್ಟು ಅದಕ್ಕೆ ಸ್ವಾಭಾವಿಕವಾದ ಗುಣವುಳ್ಳ ವಸ್ತುವಿನಿಂದಲ್ಲದೆ ಅನ್ಯಥಾ ಆಕರ್ಷಿಸಲ್ಪಡಲಾರದು ಧನವನ್ನೂ, ವಸ್ತ್ರಗಳನ್ನೂ, ಭೂಮಿಯನ್ನೂ, ಮುತ್ತು ರತ್ನ, ವೃತ್ತಿ ಕ್ಷೇತ್ರಗಳನ್ನೂ ಗಳಿಸಬೇಕಾಗಿದ್ದವನಿಗೆ ಮೊದಲು ಅವುಗಳ ಸಂಗ್ರಹಣ ವಿಷಯದಲ್ಲಿ ಅಚಂಚಲ ಅಭಿಲಾಷೆಯಿರಬೇಕು! ಆಕಾಂಕ್ಷೆಯಿರಬೇಕು. ಅವುಗಳ ಪ್ರಾಪ್ತಿಯ ವಿಷಯದಲ್ಲಿ ಅವನು ಯೋಗ್ಯರೀತಿಯಿಂದ ಪರಿಶ್ರಮಮಾಡಬೇಕು ಮತ್ತು ಅವು ಪ್ರಾಪ್ತವಾದ ಮೇಲೆ ಅವುಗಳ ರಕ್ಷಣೆಯ ವಿಷಯದಲ್ಲೂ ಅಧಿಕ ಶ್ರದ್ಧೆ ವಹಿಸಿರಬೇಕು ಅವುಗಳು ಕ್ಷೀಣಿಸದಂತೆ, ಒಂದೊಂದು ಕಾಸನ್ನೂ ಎಣಿಸಿ, ಒಂದರೊಡನೊಂದನ್ನು ಸೇರಿಸಿ ವೃದ್ಧಿಗೊಳಿಸುತ್ತಿರಬೇಕು. ಪರರು ಅಪಹರಿಸದಂತೆ ಕಣ್ಣೇ ಕಾವಲಾಗಿ ತನ್ನ ಹೃದಯವೋ ಎಂಬಂತೆ ಅಷ್ಟ ಲೋಭದಿಂದ ಅವುಗಳನ್ನು ಕಾಪಾಡಿಕೊಂಡಿರಬೇಕು ಹಾಗೆ ರಕ್ಷಿಸದ ಅಶ್ರದ್ಧೆಯಿಂದ ಹೇಗೆ ಬಂದುದನ್ನು ಹಾಗೆಯೇ ವ್ಯಯಗೊಳಿಸುತ್ತಿರುವವರಲ್ಲಿ ಲಕ್ಷ್ಮಿಯು ಅರ್ಥಾತ್ ಐಶ್ವರ್ಯವು ನಿಲ್ಲುವ ಬಗೆಯಾವುದು! ಉನ್ನತ ವಿಚಾರಗಳಲ್ಲೂ-ಅಧ್ಯಾತ್ಮ ವಿಷಯಗಳಲ್ಲೂ ಪ್ರವೇಶವಿದ್ದ ವಿದ್ಯಾವಂತರಿಗೂ, ಪಂಡಿತರಿಗೂ, ಕವಿಗಳಿಗೂ ಪ್ರಾಪಂಚಿಕ ಸಂಪತ್ತುಗಳೆಂಬ ಈ ಧನಕನಕ

ವೃತ್ತಿಕ್ಷೇತ್ರಾದಿಗಳು, ಮಕ್ಕಳ ಆಟದ ವಸ್ತುಗಳೆಂಬಂತೆ ತೋರುವುವು. ಅವುಗಳ ವಿಷಯದಲ್ಲೇ ಅಮೌಲ್ಯವಾದ ಕಾಲವನ್ನೆಲ್ಲಾ ವ್ಯಯಗೊಳಿಸಿ ಸಂಪಾದಿಸಲು ಅವು ಅನರ್ಹವಾದುವುಗಳು-ಅನಿತ್ಯವಾದುವುಗಳು ಎಂದರೆ ಶಾಶ್ವತವಲ್ಲದುವುಗಳು ಎಂದು ಅವರು ಯೋಚಿಸುವರು ಆದುದರಿಂದಲೇ ಅವುಗಳ ಪ್ರಾಪ್ತಿಯ ವಿಷಯದಲ್ಲಿ ಪ್ರಾಜ್ಞರಾದವರು ಹೆಚ್ಚುಶ್ರದ್ಧೆ ವಹಿಸರು. ಮತ್ತು ಒಂದು ವೇಳೆ ಪ್ರಾಪ್ತವಾದ ಅಲ್ಪಸ್ವಲ್ಪವನ್ನೂ, ಅವುಗಳಿಗಿಂತಲೂ ಶಾಶ್ವತ ಪದಾರ್ಥಗಳೆಂದು ಅವರು ತಿಳಿದಿರುವ ದಾನಧರ್ಮ ಪರೋಪಕಾರಾದಿ ಕಾರ್ಯಗಳಲ್ಲಿ ಧಾರಾಳವಾಗಿ ವ್ಯಯಗೊಳಿಸುವರು ಹೀಗಾದರೆ ಶ್ರದ್ಧೆಯಿಲ್ಲದ ಸ್ಥಳಕ್ಕೆ ಧನವು ಬರುವುದೆಂತು? ಬಂದರೂ ತಕ್ಕಂತೆ ರಕ್ಷಣೆಯಿಲ್ಲದ ಸ್ಥಳದಲ್ಲಿ ಅದು ನಿಲ್ಲುವುದೆಂತು! ಆದುದರಿಂದಲೇ ವಿದ್ವಾಂಸರು, ಜ್ಞಾನಿಗಳು, ಕವಿಗಳು ಮುಂತಾದ ಸರಸ್ವತಿಯ ಉಪಾಸಕರು ಪ್ರಾಯಶಃ ನಿರ್ಧನರಾಗಿರುವರು. ಅವರಲ್ಲೂ ಬಹು ಅಪೂರ್ವವಾಗಿ ಎಲ್ಲೋ ಒಬ್ಬಿಬ್ಬರು ಆಯಾ ವಸ್ತುಗಳನ್ನು ಅವವುಗಳ ಯುಕ್ತಸ್ಥಾನದಲ್ಲಿಟ್ಟು ಉಪಯೋಗಿಸಿಕೊಳ್ಳುವಂತಹ ವಿಚಾರ ಮನಸ್ಕತೆಯುಳ್ಳವರಾಗಿರಬಹುದು. ಹಾಗೆ ಲಕ್ಷ್ಮೀ ಸರಸ್ವತಿಯರಿಬ್ಬರ ಪರಮಾನುಗ್ರಹಕ್ಕೂ ಪಾತ್ರರಾಗಿರುವವರು, ಎಂದರೆ ವಿದ್ಯಾವಂತರೂ-ತತ್ವದರ್ಶಿಗಳೂ ಆಗಿದ್ದೂ ಧನವಂತರಾಗಿರುವರು ಕೇವಲ ವಿರಳರು!—

ವಿಪ್ರೋತ್ತಮನಾದ ಕುಚೇಲನೂ, ಸತೀಶಿರೋಮಣಿಯಾದ ಕ್ಷುತ್‌ಕ್ಷಾಮೆಯೂ ಬಹು ದಿನಗಳವರೆಗ ಹಾಗೆಯೇ ಕಾಲಯಾಪನೆ ಮಾಡಿದರು. ಕುಚೇಲನು ಅಯಾಚಕನಿಯಮವನ್ನು ಹಿಡಿದಿದ್ದಂತೆಯೇ, ಪರಾನ್ನನಿಯಮವನ್ನೂ ಕೈಕೊಂಡು ತನ್ನ ತಪಸ್ಸು ಧ್ಯಾನಾದಿಗಳ ಸತ್ವವನ್ನು ಕಾಯ್ದುಕೊಳ್ಳುವ ವಿಷಯದಲ್ಲಿ ಅತ್ಯಂತ ಜಾಗರೂಕನಾಗಿದ್ದನು. ಆತನು ಮಿತಭಾಷಿಯು, ಮೃದುಭಾಷಿಯು, ಹಿತಭಾಷಿಯು! ಆತನ ಮನವಚನಕಾಯಗಳಿಂದ ಹಿಂಸೆಪಟ್ಟ ಪ್ರಾಣಿಯೇ ಪ್ರಪಂಚದಲ್ಲಿ ಒಂದೂ ಇರಲಿಲ್ಲ ಅಜಾತಶತ್ರುವೋ ಎಂಬಂತೆ ಆ ವಿಪ್ರವರ್ಯನು, ಪರಮ ಸಾಧುವಾಗಿ ಯಾರಗೊಡವೆಗೂ ಹೋಗದೆ, ತನ್ನ ಸ್ವನಿಯಮನಿಷ್ಠೆ ಧ್ಯಾನ ಪರಾಯಣಾದಿ ಕಾರ್ಯಗಳಲ್ಲೇ ಸದಾ ಮಗ್ನನಾಗಿ ಇರುತ್ತಿದ್ದನು. ಆತನ ಪೂರ್ವಾರ್ಜಿತ ಸುಕೃತ ಫಲವೇ ಮೂರ್ತೀಭವಿಸಿ ಬಂದಿದ್ದಿತೋ ಎಂಬಂತೆ ಸಕಲ ವಿಧಗಳಿಂದಲೂ

ಅನುಕೂಲಳಾಗಿದ್ದ ಭಾರ್ಯಾರತ್ನವು ಆ ವಿಪ್ರೋತ್ತಮನ ಜೀರ್ಣಗೃಹ ವನ್ನು ಅಲಂಕರಿಸಿದ್ದಳು. ಆಕೆಯು ಎಂದೂ ಆತನಿಗೆ ಎದುರು ಮಾತನಾಡಿ ದವಳಲ್ಲ, ಬಡತನಕ್ಕೆ ಬೇಸತ್ತು ಪ್ರತಿಭಟಿಸಿದವಳಲ್ಲ, ನಿರ್ಧನನೂ ಆದುದ ರಿಂದ ಅರಸಿಕನೂ ಆದ ಆತನ ವಿಷಯದಲ್ಲಿ ಆ ಪುಣ್ಯಾತ್ಮಳು ಎಂದೂ ಅಲ ಕ್ಷ್ಯಮಾಡಿದವಳಲ್ಲ. ತನ್ನ ದುಃಖಸಂಕಟಗಳನ್ನು ಗಮನಿಸುವವನಲ್ಲವೆಂದು ಎಂದೂ ಆತನದುರಿಗೆ ಬಿರುನುಡಿಗಳನ್ನು ನುಡಿದು ಮನಸ್ಸು ನೋಯಿಸಿದವ ಳಲ್ಲ. ಬರವಣಿಗೆಗೆ-ವಾಕ್ಯರಚನೆಗೆ ಮಾತ್ರ ಸುಲಭವೆಂದೆನಿಸುವ ಈ ವರ್ಣ ನೆಯು ನಿತ್ಯಜೀವಿತದಲ್ಲಿ ಸಾಧ್ಯವೇ! ಎಂದು ವಾಚಕರಿಗೆ ಸಂದೇಹವುಂಟಾಗ ಬಹುದು! ಆದರೆ ಅನೇಕ ಅಸಾಧ್ಯವೆಂಬಂತಹ ಮಹತ್ಕಷ್ಟಗಳನ್ನೇ ಅನುಭವ ಸಿದ ಜಿತಮನಸ್ಕರು ನಮ್ಮಲ್ಲಿರಲಿಲ್ಲವೇನು? ಇದಾವ ಘನವಾದ ಕಾರ್ಯವು? ಆಕೆಯ ವಿನಯ ಶಾಂತತೆಗಳೇ ಆ ಮನೆಯ ಮಾನರಕ್ಷಣೆಗೆ ಮುಖ್ಯಾಧಾರ ವಸ್ತುಗಳಾಗಿದ್ದುವು ಆಕೆಯ ತೃಪ್ತಿಯೇ ಆ ಮನೆಯಲ್ಲಿ ಸಕಲ ವಸ್ತುಗ ಳನ್ನೂ ತುಂಬಿಸಿದ್ದಿತು ಆಕೆಯ ಮನಸ್ಸೊಂದೇ ಆ ಮನೆಗೆ ಸಕಲ ವಿಧ ಸೌ ಭಾಗ್ಯಗಳನ್ನೂ ಒದಗಿಸಿ ಮಂಗಳವನ್ನುಂಟುಮಾಡುತ್ತಿದ್ದಿತು ಹೀಗೆ ಆ ಪ ತಿಪತ್ನಿಯರು ಬಡವರಾಗಿದ್ದರೂ ಮರ್ಯಾದಸ್ಥರಾಗಿ, ನಿರ್ಧನರಾಗಿದ್ದರೂ ಮಾನಧನರಾಗಿ, ನಿರ್ಗತಿಕರಾಗಿದ್ದರೂ ಸಂತುಷ್ಟಾಂತರಂಗವುಳ್ಳವರಾಗಿ ಜಿ ತೇಂದ್ರಿಯರಾಗಿ ಶಾಂತರಾಗಿ ಲೋಕಯಾತ್ರೆಯನ್ನು ನಡೆಸುತ್ತಿದ್ದರು.



**ಅಧ್ಯಾಯ ೩** **"ಅವಲಕ್ಕಿ"**

ದ್ವಿಜಶ್ರೇಷ್ಠನಾದ ಕುಚೇಲನು ಒಂದಾನೊಂದುದಿನ ಎಂದಿನಂತೆ ಸ್ನಾನ ಸಂಧ್ಯಾದಿ ನಿತ್ಯಕರ್ಮಗಳನ್ನು ಮುಗಿಸಿಕೊಂಡು, ಜಪಸಮಾಧಿಯಲ್ಲಿ ಮಗ್ನ ನಾಗುವುದರಲ್ಲಿದ್ದನು ಅಷ್ಟರಲ್ಲಿ ಇತ್ತ ಹೊರಮನೆಯಲ್ಲಿ ಹಸಿವೆಯಾಗಿ ಬಳ ಯನ್ನು ಹಿಡಿದೆಳೆದು ಕಾಡುತ್ತಿದ್ದ ಮಕ್ಕಳ ಕಾಟವು ಕ್ಷುತ್ಕ್ಷಾಮೆಗೆ ಸಹಿ ಸಲಸಾಧ್ಯವೆನ್ನಿಸಿತು ಅವರೆಗೆ ಆಕೆಯು ಹೊಟ್ಟೆ ತುಂಬ ಊಟಮಾಡಿ

ಎಂಟು ದಿನಗಳಿಗೆ ಮೇಲೆ ಆಗಿದ್ದಿತು. ಅರ್ಧ ಗ್ರಾಸವಾದರೂ ಲಭಿಸಿ ಎರಡು ದಿನಗಳಾಗಿದ್ದುವು. ಆದರೂ ಉಪವಾಸಾದಿಗಳಲ್ಲಿ ಬಹುಮಟ್ಟಿಗೆ ಅನುಭವವುಳ್ಳವಳಾಗಿದ್ದ ಆ ಸಾಧ್ವಿಗೆ ಅದು ಹೆಚ್ಚಿನದಾಗಿರಲಿಲ್ಲ. ಆದರೆ, ಹಿಂದಿನ ದಿನವೆಲ್ಲಾ ಒಂದು ತುತ್ತಾದರೂ ಅನ್ನವನ್ನು ತಿಂದರಿಯದಿದ್ದ ಮಕ್ಕಳು, ಕ್ಷುದ್ಬಾಧೆಯನ್ನು ತಾಳಲಾರದೆ, 'ಅನ್ನ-ತಿಂಡಿ' ಎಂದು ಕೊಡುತ್ತಿದ್ದ ಹಿಂಸೆಯನ್ನು ಸಹಿಸಿಕೊಳ್ಳುವುದು ಈಸಾರಿ ಮಾತ್ರ ಆಕೆಗೆ ಅಸಾಧ್ಯವಾಯಿತು. ಏನು ಮಾಡಬೇಕೆಂಬುದು ತೋರದಾಯಿತು. ಮನೆಯಲ್ಲಾದರೆ ಒಂದು ಕಾಳು ಧಾನ್ಯವಿಲ್ಲ. ಎಲ್ಲಾ ಪಾತ್ರೆಗಳೂ ಬರಿಯವು, ಮನೆಯ ಎಲ್ಲಾ ಭಾಗವೂ ಶೂನ್ಯ! ಅಷ್ಟು ಸಣ್ಣ ಮಕ್ಕಳಿಗೆ ಏನು ಕೊಟ್ಟು ಕ್ಷುದ್ಬಾಧೆಯನ್ನು ನೀಗಿಸಲು ಸಾಧ್ಯವುಂಟು? ಜಠರಾಗ್ನಿಯಿಂದ ದಹಿಸಲ್ಪಟ್ಟು, 'ಹಸಿವು-ಹಸಿವೆಂ'ದು ಮರುಗಿ ಬಾಯ್ಬಿಡುತ್ತಿರುವ ಆ ತನ್ನ ಮಕ್ಕಳನ್ನು ಆ ಸಾಧ್ವೀಮಣಿಯು ಹೇಗೆ ಗಮನಿಸುವಳು? ಹೇಗೆ ಒಯ್ಯುವಳು? ಏನೊಂದೂ ತೋರದಿರಲು, ಕಣ್ಣುಗಳಿಂದ ಅವಿರಳ ಅಶ್ರುಧಾರೆಗಳನ್ನು ಸುರಿಸುತ್ತಾ, ತನ್ನ ಸ್ಥಿತಿಯನ್ನೇ ಯೋಚಿಸುತ್ತಕೊಂಡು ಅಳುತ್ತಾ ಕುಳಿತಳು! 'ಹೇ ದಯಾಘನ, ಇದೆಲ್ಲವೂ ನಿನ್ನ ಲೀಲೆಯು' ಲೋಕದಲ್ಲಿ ಕೋಟ್ಯಾಂತರ ದ್ರವ್ಯಕ್ಕೆ ಒಡೆಯರಾಗಿರುವವರೂ ರಾಜಾಧಿರಾಜರಾಗಿರುವವರೂ ಬೇಕುಬೇಕೆಂದು ಹಲುಬಿ ಹಂಬಲಿಸಿ, ಕಂಡಕಂಡ ದ್ರವ್ಯಕ್ಕೆಲ್ಲಾ ಕೈ ಮುಗಿದು ಸೇವಿಸುತ್ತಿದ್ದರೂ, ಕುಲಕ್ಕೊಂದು ಕಂದನನ್ನು ಕರುಣಿಸದೆ, ನಮ್ಮಂತಹ ನಿರ್ಗತಿಕರಿಗೆ ಇಷ್ಟು ಸಣ್ಣ ಮಕ್ಕಳನ್ನು ಯಾವ ಸುಖಾನುಭವಪಡಲೆಂದು ಕರುಣಿಸಿರುವೆ? ಏನೋ! ಪರಮದಯಾಳುವಾದ ನೀನೂ ದೀನರಾದ ನಮ್ಮನ್ನು ಹೀಗೆ ಪರೀಕ್ಷಿಸಬಹುದೇ? ನಿನ್ನೀ ಪರೀಕ್ಷೆಯನ್ನು ಅಶಕ್ತರಾದ ನಾವು ತಾಳಿಕೊಳ್ಳಬಲ್ಲೆವೇ? ಅಕ್ಕಟಾ, ಎರಡು ದಿನಗಳಿಂದಲೂ ಕೂಳಿಲ್ಲದೆ ಸಂಕಟಪಡುತ್ತಿರುವ ಈ ಹಸುಕಂದಗಳ ವೇದನೆಯನ್ನು ಹೇಗೆ ನೋಡಲಿ! ನೋಡಿ ಹೇಗೆ ಸುಮ್ಮನಿರಲಿ! ಏನು ಮಾಡಿ ಇವರ ಈ ಕ್ಷುದ್ಬಾಧೆಯನ್ನು ನೀಗಿಸಲಿ? ಮತ್ತೇನುಮಾಡಲಿ! ಅಕ್ಕಟಾ, ಧ್ಯಾನ ಮಗ್ನರಾಗಿ ಕುಳಿತಿರುವ ಯಜಮಾನರಲ್ಲಿ ಈ ಕ್ಷುದ್ರಸಂಕಟವನ್ನು ಏನೆಂದು ವಿಜ್ಞಾಪಿಸಿ ಅವರ ಮನಸ್ಸಿಗೆ ವಿಚಾರವನ್ನುಂಟುಮಾಡಲಿ?" ಎಂದು ಬಹುಬಗೆಯಿಂದ ಯೋಚಿಸಿ, ತವರ್ಮ್ಮ ದಾರಿದ್ರ್ಯವು ಹತವಾಗುವುದಕ್ಕೆ

ಏನಾದರೂ ಮಾರ್ಗವುಂಟೇ ಎಂದು ಯೋಚಿಸತೊಡಗಿದಳು. ತಾವು ಕೊಟ್ಟ ಬಾಧೆಯಿಂದ ತಮ್ಮ ತಾಯಿಗೆ ಮಹಾ ವ್ಯಸನವುಂಟಾಗಿ ಆಕೆಯು ಕಣ್ಣೀರು ಸುರಿಸುತ್ತಿದ್ದುದನ್ನು ಕಂಡ ಆ ಬಾಲಕರು, ತಮ್ಮ ಕಾಟವನ್ನು ಸಾಕುಮಾಡಿ, ಆಕೆಯನ್ನು ಬಿಟ್ಟು ನಡೆದರು. ಹಸಿವೆಯಿಂದ ಅಲ್ಲಲ್ಲಿ ಮೂಲೆಮೂಲೆಗಳಲ್ಲಿ ಬಿದ್ದುಕೊಂಡರು ಕೆಲವರಿಗೆ ಹಾಗೇ ನಿದ್ರೆ ಬಂದುಬಿಟ್ಟಿತು!

ಇತ್ತ ತಮ್ಮ ದಾರಿದ್ರ್ಯವಿಚ್ಛೇದನ ಮಾರ್ಗವನ್ನು ಕುರಿತು ಯೋಚಿಸತೊಡಗಿದ ಕ್ಷುತ್‌ಕ್ಷಾಮೆಯ ದೃಷ್ಟಿಪಥಕ್ಕೆ, ಹಿಂದೆ ಆಕೆಯ ಪತಿಯು ಒಂದಾನೊಂದುಸಾರಿ ನುಡಿದಿದ್ದ ಒಂದು ವಿಷಯವು ಹೊಳೆಯಿತು! ದ್ವಾರಕಾಧಿಪತಿಯೂ, ಯಾದವಾಗ್ರೇಸರನೂ ಆದ ಶ್ರೀಕೃಷ್ಣಮೂರ್ತಿಯು ತನ್ನ ಪತಿಯ ಸಹಾಧ್ಯಾಯಿಯಾದ ಮೇಲೆ, ಆತನಲ್ಲಾದರೂ ತಮ್ಮ ವಿಷಯವನ್ನು ತಿಳಿಸಿ, ಆ ದಾರಿದ್ರ್ಯವ್ಯಾಧಿಯನ್ನು ಹತಗೊಳಿಸಲು ಏಕೆ ಪ್ರಯತ್ನಿಸಬಾರದೆಂದು ಯೋಚಿಸಿಕೊಂಡಳು ಹಾಗೆ ಮಾಡುವುದು ಸಾಧುವೆಂದು ಮೇಲೆ ಮೇಲೆ ಮನಸ್ಸಿನಲ್ಲಿ ದೃಢಪಡತೊಡಗಿತು ಒಡನೆ ಸ್ವಲ್ಪ ಧೈರ್ಯಬಂದಂತಾಗಿ ಮೇಲಕ್ಕೆದ್ದಳು ಒಳಕ್ಕೆ ಬಂದು ಮೆಲ್ಲನೆ ಬಗ್ಗಿ ನೋಡಿದಳು ಕುಚೇಲನು, ಜಪಯಜ್ಞವನ್ನು ಮುಗಿಸಿ ಆಗತಾನೆ ಅಂತ್ಯಾಚಮನ ಮಾಡುತ್ತಿದ್ದನು ಆ ವಿಷಯವನ್ನು ವಿಜ್ಞಾಪಿಸಿಕೊಳ್ಳಬೇಕೆಂದು ಧೈರ್ಯಮಾಡಿಕೊಂಡಳು ಒಂದೆರಡು ಹೆಜ್ಜೆ ಮುಂದಕ್ಕಿಟ್ಟಳು ಹುಡುಗರ ಎಳೆದಾಟದಿಂದ ಅಸ್ತವ್ಯಸ್ತವಾಗಿ, ಹರಿದು ಜೂಲುಜೂಲಾದ ತಾನುಟ್ಟಿದ್ದ ಆ ಸೀರೆಯ ನೆರಿಗೆ-ಸೆರಗುಗಳನ್ನೇ ಸರಿಗೊಳಿಸಿಕೊಂಡಳು ಮುಂದಲೆಯನ್ನು ಉಗುರಿನಿಂದ ನೇವರಿಸಿಕೊಂಡಳು. ಧ್ವನಿಯನ್ನು ಸರಿಪಡಿಸಿಕೊಂಡಳು. ಮಹಾಮತಿಯಾದ ಕುಚೇಲನಿಗೆ, ತನ್ನ ಪತ್ನಿಯು ಎಂದೂ ಇಲ್ಲದೆ ಈ ದಿನ ಆರೀತಿ ಸಿದ್ಧಪಡಿಸಿಕೊಳ್ಳುತ್ತಿದ್ದುದರ ಕಾರಣವು ಮನಸ್ಸಿಗೆ ಹೊಳೆಯದಿರಲಿಲ್ಲ. ಮಕ್ಕಳು ಹಸಿವೆಯಿಂದ ಕೊಡುತ್ತಿದ್ದ ಬಾಧೆಯ ಅರಿವೂ ಆತನಿಗಿದ್ದಿತು ಆ ಹೊತ್ತಿಗೆ ತನ್ನ ಆಹ್ನಿಕ ಕ್ರಿಯೆಗಳೆಲ್ಲವೂ ಮುಗಿದಿರಲು, ಆಕೆಯ ಬಿನ್ನಪವನ್ನು ಕೇಳಲು ಸಿದ್ಧನಾಗಿರುವಿಕೆಯನ್ನು ಸೂಚಿಸುವಂತೆ, ಆಕೆಯ ಕಡೆಗೆ ಒಂದು ಸಾರಿ ತಿರುಗಿ ನೋಡಿದನು ಅದನ್ನೇ ಕಾಯ್ದುಕೊಂಡಿದ್ದ ಕ್ಷುತ್‌ಕ್ಷಾಮೆಯು ಆ ಸಂದರ್ಭವನ್ನೇ ಸಾಧಿಸಿ ಒಳಬಾಗಿಲಲ್ಲಿ ಕಾಲಿಟ್ಟು ಗೋಡೆಯ

ಮಗ್ಗುಲಲ್ಲಿ ನಿಂತುಕೊಂಡಳು ಮತ್ತು ಕೈಮುಗಿದುಕೊಂಡು —"ಪ್ರಭುವೇ, ಜಿಹ್ವೇಂದ್ರಿಯ, ತ್ವಗಿಂದ್ರಿಯಾದಿಗಳ ಚಾಪಲ್ಯವನ್ನು ಸಂಪೂರ್ಣವಾಗಿ ಅಡಗಿಸಿ, ಕಾಮಕ್ರೋಧ-ಮದಮಾತ್ಸರ್ಯಾದಿ ಅಂತಶ್ಶತ್ರುಗಳ ಉಲ್ಬಣತೆಯನ್ನು ತಲೆಯೆತ್ತದಂತೆ ಮಾಡಿ, ಸ್ನಾನಸಂಧ್ಯಾ ಜಪತಪಾದಿಗಳಿಂದ ಮನಸ್ಸನ್ನು ಜಿತಪಡಿಸಿಕೊಂಡು, ಪರ್ಣಜಲವಾಯುಗಳನ್ನಾದರೂ ಆಹಾರ ಮಾಡಿಕೊಂಡಿರಲು ಸಿದ್ಧರಾಗಿ, ವಿಷಯಾಭಿಲಾಷೆಯು ಇಣಿಕಿ ನೋಡದಂತೆ ತನುಮನಗಳನ್ನು ದಂಡಿಸಿ, ಕೇವಲ ಅಲ್ಪಮಾತ್ರವಾದರೂ ಲಕ್ಷ್ಯವಿಲ್ಲದ, ಶ್ರೀಹರಿಪದಧ್ಯಾನಾಸಕ್ತರಾಗಿರುವ ತಮ್ಮ ಮನಸ್ಸಿಗೆ ಸಂಸಾರ ವಿಚಾರವು ಎಂದೂ ತಗುಲದು. ದಾರಾಪುತ್ರಾದಿಗಳಲ್ಲಿ ಅಭಿಲಾಷೆಯುಂಟಾಗದು ದೇವಾ, ತಾವು ಅಯಾಚಕ-ವ್ರತಾನುಷ್ಠಾನನಿಯಮಗಳನ್ನು ಕೈಕೊಂಡು ತಪೋನಿರತರಾಗಿರುವಿರೆಂಬ ತಮ್ಮ ಪುಣ್ಯಚಾರಿತ್ರ್ಯವು ನನಗೆ ತಿಳಿವುದಾದರೂ ಈಗ ವಿಧಿಯಿಲ್ಲದೆ ವಿಜ್ಞಾಪಿಸಿಕೊಳ್ಳುತ್ತಿರುವ ನನ್ನೀ ಪ್ರಾರ್ಥನೆಗಾಗಿ ನನ್ನನ್ನು ಮನ್ನಿಸಬೇಕು. ಪ್ರಾಣನಾಯಕರೇ, ನಮ್ಮ ಮಕ್ಕಳು ಅಶನವಸನಗಳನ್ನು ಕಾಣದೆ ಕ್ಷಾಮದೇವತೆಗೆ ಬಲಿ ಬಿದ್ದವರಂತೆ ಇರುವ ಸ್ಥಿತಿಯು ತಮ್ಮ ದಯಾರ್ದ್ರ ಹೃದಯಕ್ಕೆ ಬೋಧವಾಗುವುದಿಲ್ಲವೆ? ನೆರೆಹೊರೆಯ ಬಾಲಕರು, ತಿನ್ನುವ ತಿಂಡಿಪದಾರ್ಥಗಳನ್ನು ಕಂಡು ತಮಗೂ ಬೇಕೆಂದು ಕಾಡುತ್ತಿರುವರಲ್ಲಾ! ನಾನೆಲ್ಲಿಂದ ತಂದುಕೊಡಲಿ? 'ಸರ್ವೇಜನಾಸ್ಸುಖಿನೋಭವಂತು' ಎಂಬ ಉಕ್ತಿಯು ತಾವು ಅರಿಯದುದಲ್ಲವಷ್ಟೆ! ಹಾಗಿರುವಲ್ಲಿ ದಯಾಘನಾ, ತಮ್ಮ ಉದರ ಸಂಭೂತರಾದ ಈ ಮಕ್ಕಳನ್ನು ಸುಖಪಡಿಸುವುದಲ್ಲ-ದೇಹ ಪ್ರಾಣಗಳೊಂದಾಗಿರುವಂತೆಯಾದರೂ ಕಾಪಾಡುವುದು ಗೃಹಸ್ಥಧರ್ಮಾವಲಂಬಿಗಳಾದ ನಮ್ಮ ಕರ್ತವ್ಯವಲ್ಲವೆ? ಈ ವಿಷಯದಲ್ಲಿ ಧರ್ಮವಿರುದ್ಧವಲ್ಲದ ಯಾವುದಾದರೊಂದು ಉಪಾಯದಿಂದ ಧನಸಂಗ್ರಹಣ ಮಾಡುವ, ಕಾರ್ಯಪ್ರವೃತ್ತರಾಗಿ ಈ ದುಸ್ಥಿತಿಯನ್ನು ನೀಗಿಸಲು ಯೋಚಿಸಲಾಗದೆ ದಯೆ ಬಾರದ?" ಎಂದು ನುಡಿದಳು.

ಕುಚೇಲನು ಪತ್ನಿಯಾಡಿದ ಆ ಮಾತು ಸತ್ಯವೆಂದು ಮನಗಂಡನು. ಆದರೆ ಒಡನೆಯೇ ಯಾವುದಾದರೊಂದು ವೃತ್ತಿಯನ್ನು ಅವಲಂಬಿಸಿ ಧನಸಂಪಾದನೆಗೆ ತೊಡಗಲು ಸಾಧ್ಯವುಂಟೆ? ಅಥವಾ ಯಾರನ್ನಾದರೂ ಯಾಚಿಸಿ

ತರಲು ಆತನ ಮನಸ್ಸೊಪ್ಪುವುದೇ? ಹಾಗೆಯೇ ಕೆಲಹೊತ್ತು ಸುಮ್ಮನಿದ್ದು ತರುವಾಯ ಪತ್ನಿಯನ್ನು ಕುರಿತು, "ಓ ಕಲ್ಯಾಣೀ, ನಿನ್ನ ಮಾತು ವಾಸ್ತವ. ಆದರೆ ಯೋಚಿಸು ಮನುಷ್ಯನಿಗೆ ಅವನವನ ಪೂರ್ವಕರ್ಮಾನುಸಾರವಾಗಿ ಲಭ್ಯವಿದ್ದಷ್ಟು ಮಾತ್ರವಲ್ಲದೆ, ಕನಕಪರ್ವತದ ಶಿಖರವನ್ನೇರಿದರೂ, ರತ್ನಾಕರದ ಅಡಿಯನ್ನು ಸೇರಿದರೂ ಹೆಚ್ಚು ದೊರೆಯಲಾರದೆಂಬುದು ನಿನಗೆ ತಿಳಿಯದೇ? ಸಮಸ್ತಕ್ಕೂ ಕಾರಣಕರ್ತನಾದ ಶ್ರೀವಿಷ್ಣುಮೂರ್ತಿಯು ಸರ್ವಲೋಕರಕ್ಷಕನಾಗಿರುವಾಗ ನಮ್ಮನ್ನು ಮರೆಯುವನೆಂದು ಎಣಿಸುವೆಯಾ? ಬೆಟ್ಟದ ತುದಿಯಲ್ಲಿ ಬೆಳೆದ ಮರಗಳಿಗೂ, ನಟ್ಟಡವಿಯಲ್ಲಿನ ಮೃಗಗಳಿಗೂ, ಕಲ್ಲು ಬಂಡೆಯಲ್ಲಿರುವ ಕಪ್ಪೆಗೂ ಆಹಾರವನ್ನೊದಗಿಸಿ ರಕ್ಷಿಸುವ ಆ ಜಗತ್ಪ್ರಭುವಿನ ದೃಷ್ಟಿಗೆ ನಾವು ಅಗೋಚರರಾಗುವೆವೇ! ಆ ದೃಢನಂಬಿಕೆಯು ನಿನಗೇಕೆ ಕಡಮೆಯಾಯಿತು? 'ಈ ಮಕ್ಕಳು ನನ್ನವರು, ನಾನು ಇವರನ್ನು ಪೋಷಿಸಬೇಕು' ಎಂಬ ಭ್ರಾಂತಿಯು ನಿನಗೆಲ್ಲಿಂದ ಬಂತು? ನಾನಾರು, ನೀನಾರು, ಇವರಾರು ಎಂಬ ವಿಚಾರವನ್ನು ಮರೆತು ನೀನೂ ಹೀಗೆ ಚಿಂತಾಕ್ರಾಂತಳಾಗಬಹುದೇ! ಐಶ್ವರ್ಯವಾಗಲಿ, ದಾರಿದ್ರ್ಯವಾಗಲಿ ಶಾಶ್ವತವಾದುವಲ್ಲ. ಐಶ್ವರ್ಯದಿಂದ ಸುಖವೂ ದಾರಿದ್ರ್ಯದಿಂದ ದುಃಖವೂ ಉಂಟಾಗುವುದೆಂಬುದಕ್ಕೆ ನಮ್ಮ ಮನಸ್ಸಿನ ಭಾವನೆಯೇ ಕಾರಣವು! ಮನಸ್ಸಿನಲ್ಲಿ ತೃಪ್ತಿಯೆಂಬ ಪದಾರ್ಥವನ್ನು ಮಾತ್ರ ಶೇಖರಿಸಿಕೊಂಡರೆ, ಐಶ್ವರ್ಯವೆಂಬ ಕಸದ ಭಾರವನ್ನು ಹೊರದೆಯೇ ಮನುಷ್ಯನು ಸುಖವಾಗಿರಬಹುದು! ಆ ಸಂತುಷ್ಟಭಾವವು ನಿನ್ನಲ್ಲಿ ಕಡಮೆಯಾಗಲು ಕಾರಣವೇನು? ಭಾಮಿನೀ, ಅವರವರು ಪಡೆದು ಬಂದಷ್ಟನ್ನಲ್ಲದೆ ಯಾರೂ, ಹೆಚ್ಚು ಅನ್ನವಸ್ತ್ರ ಧನಧಾನ್ಯಗಳನ್ನು ಹೊಂದಲಾರರೆಂಬ ದೈವನಿಯಾಮಕವು ನಿನಗೆ ತಿಳಿಯದೇ! ಹೀಗಿರುವಲ್ಲಿ ನಮ್ಮ ಅನ್ನವಸ್ತ್ರಗಳ ವಿಚಾರದಲ್ಲಾಗಲೀ, ಈ ಮಕ್ಕಳ ಪೋಷಣೆಯ ವಿಷಯದಲ್ಲಾಗಲೀ ಏಕೆ ಚಿಂತಿಸುವೆ! ಶ್ರೀಹರಿಯನ್ನು ನಂಬಿ ನಿಶ್ಚಿಂತಳಾಗಿರು" ಎಂದನು ಭರ್ತನ ಪ್ರತ್ಯುತ್ತರವು ಆ ಸಾಧ್ವೀಮಣಿಯನ್ನು ತೃಪ್ತಿಗೊಳಿಸಲಿಲ್ಲ.—"ಪ್ರಭೋ, ತಮ್ಮ ವಿಚಾರವು ಸಾಧುವಾದುದೇ! ಆದರೆ, ಸಂಸಾರಿಗಳು, ಸಂತುಷ್ಟಿ ಎಂಬ ಪದಕ್ಕೆ, ಪತ್ನೀಪುತ್ರಾದಿಗಳು ಉಪವಾಸ ಕೊರಗುತ್ತಿದ್ದರೂ ಆವಶ್ಯಕವಿರುವಷ್ಟನ್ನಾದರೂ ಸಂಪಾದಿಸುವ ವಿಷಯದಲ್ಲಿ

ಪ್ರಯತ್ನಿಸದೆ ತಟಸ್ಥರಾಗಿರತಕ್ಕುದೆಂದು ಅರ್ಥಮಾಡಬಾರದು. ಪರದ್ರವ್ಯವನ್ನು ಅಪಹರಿಸದೆ, ಪರಸೇವೆಗೆ ತೊಡಗದೆ, ನೀಚಜನರನ್ನು ಆಶ್ರಯಿಸದೆ, ದುಷ್ಕರ್ಮಿಗಳನ್ನು ಯಾಚಿಸದೆ, ದುರಾಸೆಗೆ ಒಳಗಾಗದೆ ಯೋಗ್ಯ ಕುಲ ವೃತ್ತಿಯಿಂದ ದೊರೆತಷ್ಟರಲ್ಲಿ ತೃಪ್ತನಾಗಿ ಸಂಸಾರವನ್ನು ಪೋಷಿಸುವ ಗೃಹಸ್ಥನಿಗೆ ಅಸಂತುಷ್ಟನೆಂಬ ಅಪವಾದವಾಗಲೀ, ಮತ್ತಾವ ಒಗೆಯ ಪಾಪವಾಗಲೀ ಸಂಭವಿಸದು. ವಿಶ್ವಕುಟುಂಬಿಯಾದ ಪರಮಾತ್ಮನು ನಮ್ಮ ಪೋಷಣೆಗೆಂದು ವಹಿಸಿಕೊಟ್ಟಿರುವ ನಮ್ಮ ಪುತ್ರಸ್ವರೂಪಿಗಳಾದ ಇಷ್ಟು ಜೀವಿಗಳನ್ನು ಶಕ್ತಿವಂಚನೆಯಿಲ್ಲದೆ ಪ್ರಯತ್ನಿಸಿ ಪೋಷಿಸತಕ್ಕುದು, ಕುಟುಂಬಿಗಳಾದ ನಮ್ಮ ಕರ್ತವ್ಯವೆಂಬುದಾದರೂ, ಪ್ರಾಣೇಶಾ-ತಮ್ಮ ಚಿತ್ತಕ್ಕೆ ವೇದ್ಯವಿಲ್ಲವೆ? ಹೆಚ್ಚು ನಿರ್ಬಂಧಿಸಲು ಭಯಪಡುತ್ತೇನೆ ಮನ್ನಿಸಿರಿ'' ಎಂದು ನುಡಿದು, ಪುನಃ ವಂದಿಸಿದಳು. ಕುಚೇಲನು ತನ್ನ ಪತ್ನಿಯ ಯುಕ್ತಿಯುಕ್ತವಾದ ವಾದವನ್ನು ಒಪ್ಪಿದನು. ಅದಕ್ಕೆ 'ಅಲ್ಲ' ವೆಂದು ಪ್ರತಿಹೇಳಲು ತೋರಲಿಲ್ಲ. ಆಗ ಪುನಃ ಆಕೆಯನ್ನು ಕುರಿತು,—''ಸಾಧ್ವೀಮಣಿ ನಿನ್ನೀವಾದವು ಒಪ್ಪತಕ್ಕದಾಗಿದೆ ಆದರೆ, ಜನ್ಮಾರಭ್ಯ ಇದುವರೆಗೂ ಕೇವಲ ಸ್ನಾನಸಂಧ್ಯ ಜಪತಪಾದಿ ವೈದಿಕ ಕ್ರಿಯೆಗಳಲ್ಲೇ ಮಗ್ನನಾಗಿದ್ದ ನಾನು ಈಗ ಯಾವುದೊಂದು ಪ್ರಾಪಂಚಿಕ ವೃತ್ತಿಯಲ್ಲೂ ಪ್ರವೇಶಿಸಲು ಅಸಮರ್ಥನಾಗಿರುವೆನು. ಅಲ್ಲದೆ ಜೀವನಕ್ಕೆಂಬ ಕಾರಣದಿಂದ ಯಾರನ್ನೂ ಯಾಚಿಸಲಾರೆನು ಪರಸೇವೆಗೆ ಮನಸ್ಸೊಪ್ಪದು ಮತ್ತಾವ ಒಗೆಯಿಂದ ಧನಾರ್ಜನೆಗೆ ಅವಕಾಶವಿರುವುದು ಯೋಚಿಸಿ ಹೇಳುವೆಯಾ?'' ಎಂದು ನುಡಿದನು.

ಆಗಲಾ ಸಾಧ್ವಿಯು, ''ದೇವಾ ಬ್ರಾಹ್ಮಣನಿಗೆ ಯಜನ ಯಾಜನ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹಗಳೆಂಬ ಷಟ್ಕರ್ಮಗಳು ಶಾಸ್ತ್ರೋಕ್ತವಾಗಿ ವಿಧಿಸಲ್ಪಟ್ಟಿವೆಯಲ್ಲವೆ? ಅವುಗಳಲ್ಲಿ ಯಾಜನ (ಯಜ್ಞ ಮಾಡಿಸುವಿಕೆ) ಅಧ್ಯಾಪನ (ವಿದ್ಯೆ ಕಲಿಸುವಿಕೆ) ಪ್ರತಿಗ್ರಹ (ದಾನ ಪಡೆಯುವಿಕೆ) ಗಳಿಂದ ದ್ರವ್ಯವನ್ನು ಸಂಪಾದಿಸಬಹುದಷ್ಟೆ! ಅದಕ್ಕೆ ತಡೆಯೇನು?'' ಎಂದಳು. ಪತ್ನಿಯ ಸಮಂಜಸವಾದ ಆ ಸಲಹೆಯೂ ಕುಚೇಲನಿಗೆ ಯುಕ್ತವೆಂದು ತೋರಿತು. ಆದರೂ, ಪ್ರಾರಂಭದಿಂದಲೂ ಕೇವಲ ನಿಸ್ಪೃಹನಾಗಿ, ಯಾರೊಂದಿಗೂ ಬೆರೆಯದೆ ಒಂಟಿಗನಾಗಿ ವಾಸಿಸಿದ ಕುಚೇಲನು, ಅಂದು ಒಡನೆಯೇ,

ಯಾರಿಗೆ ಯಾಗಮಾಡಿಸಿ ಸಂಪಾದಿಸಲು ಸಾಧ್ಯವಿದ್ದೀತು! ಮತ್ತಾರಿಗೆ ಪಾರ ಪೇಳುವನು? ಏನೂ ತೋರದೆ, ಸ್ವಲ್ಪ ಹೊತ್ತು ಯೋಚಿಸುತ್ತಾ ಕುಳಿತಿದ್ದು ತರುವಾಯ—"ಭದ್ರೇ ನಿನ್ನ ಸಲಹೆಯನ್ನು ಕೇಳಿ ಅತ್ಯಂತ ತೃಪ್ತನಾದೆನು. ಆದರೆ ಕೇಳು, ಯಾಜನ ಅಧ್ಯಾಪನಗಳಲ್ಲೂ ಪರರ ಮನೋವೃತ್ತಿಯನ್ನು ಅನುಸರಿಸಿ ಕೆಲಮಟ್ಟಿಗೆ ನಡೆಯಬೇಕಾದ ಸಂದರ್ಭವುಂಟು ಅಲ್ಲದೆ ಅದೂ ಒಂದೆರಡು ದಿನಗಳಲ್ಲೇ ಒದಗತಕ್ಕ ಪ್ರತಿಫಲವೂ ಅಲ್ಲ ಮತ್ತು ಅದರಿಂದ, ನಾವು ಕೈಕೊಂಡು ನಡೆಯಿಸುತ್ತಿರುವ ನಿಯಮ ನಿಷ್ಠೆ ನಿತ್ಯಕರ್ಮಾದಿಗಳಿಗೂ ಕುಂದುಂಟಾಗದಿರದು! ಇನ್ನು ಪ್ರತಿಗ್ರಹವೋ ಎಂದರೆ, ಈಗ ಉತ್ತಮನೂ, ಸತ್ವಗುಣಪ್ರಧಾನನೂ ಆಗಿ, ನಮ್ಮ ಆವಶ್ಯಕತೆಯನ್ನು ಅನುಸರಿಸಿ ಯೋಗ್ಯದಾನಮಾಡಿ, ನಮ್ಮ ಸ್ಥಿತಿಯನ್ನು ಉತ್ತಮಗೊಳಿಸುವನು ಯಾವನಿರುವನು? ಹಾಗಿಲ್ಲದಿರುವಲ್ಲಿ ನೀಚರನ್ನು ಯಾಚಿಸಿ, ಅವರಿಂದ ಲಭ್ಯವಾಗುವ ಅಲ್ಪಸ್ವಲ್ಪವನ್ನು ಪಡೆದರಾದರೂ ಪ್ರಯೋಜನವೇನು? ಅದಕ್ಕೆ ನನ್ನ ಮನಸ್ಸೊಪ್ಪದು!" ಎಂದನು ಆಗಲಾ ಸಾಧ್ವಿಯು, "ಪ್ರಾಣಪ್ರಭೋ, ಯೋಚಿಸುವುದೇಕೆ? ಚಿಕ್ಕತನದಲ್ಲಿ ತಾವು ದ್ವಾರಕಾಧಿಪತಿಯಾದ ಶ್ರೀಕೃಷ್ಣಮೂರ್ತಿಯೊಂದಿಗೆ ಗುರುಕುಲವಾಸದಲ್ಲಿದ್ದು ವಿದ್ಯಾಭ್ಯಾಸ ಮಾಡಿದ್ದೇನೆಂದು, ಒಂದು ಸಾರಿ ಅಪ್ಪಣೆಕೊಡಿಸಿದ್ದಿರಿ ಈಗಲೂ ಆತನನ್ನು ದರ್ಶಿಸಿ ಬರಬಾರದೇಕೆ? ಸರ್ವಲೋಕಸಂರಕ್ಷಕನೂ, ಲಕ್ಷ್ಮೀಪತಿಯೂ ಆದ ಆ ದೀನಜನವತ್ಸಲನು, ಯಾಚಕರು ಅಪೇಕ್ಷಿಸುವುದಾದರೆ, ತನ್ನನ್ನೇ ಆದರೂ ತೆತ್ತುಬಿಡುವಷ್ಟು ಉದಾರಿಯಾಗಿರುವನೆಂದು ಕೇಳಿದ್ದೇವೆಯಲ್ಲವೆ? ಆತನಿಗೆ ವೃಷ್ಣಿ, ಭೋಜ, ಅಂಧಕವಂಶಗಳ ಅನೇಕ ಮಂದಿ ರಾಜರು ಆಜ್ಞಾಧಾರಕರಾಗಿದ್ದಾರೆಯಂತೆ? ಆತನು ಕೃಪಾಕಟಾಕ್ಷವಿಡುವುದಾದರೆ, ನಮ್ಮ ದಾರಿದ್ರ್ಯವು ಹತವಾಗಲಾರದೆ? ಅದು ನೀಚಾಶ್ರಯವಲ್ಲವಷ್ಟೆ! ಆತನು ದಾನಮಾಡುವುದನ್ನು ಪಡೆಯುವುದಾದರೂ ನಮ್ಮ ವೃತ್ತಿಧರ್ಮಕ್ಕೆ ಒಪ್ಪದ ಕಾರ್ಯವಲ್ಲವಷ್ಟೆ! ಈ ಕಾರ್ಯವನ್ನು, ಪ್ರಭೋ, ತಮ್ಮ ಈ ಮಕ್ಕಳ ಯೋಗಕ್ಷೇಮವನ್ನು ನೋಡಿ, ಕೈಕೊಂಡು ನೆರವೇರಿಸಬೇಕೆಂದು ಪ್ರಾರ್ಥಿಸುತ್ತೇನೆ" ಎಂದು ಬೇಡಿಕೊಂಡಳು.

ಧಾರ್ಮಿಕನಾದ ಕುಚೇಲನು ತನ್ನ ಪತ್ನಿಯ ಧರ್ಮಮಯವಾದ ಆ

ವಾಕ್ಯಗಳಿಂದ ಕಟ್ಟುಬಿದ್ದು, ಶ್ರೀಕೃಷ್ಣದರ್ಶನಕ್ಕೆ ಹೋಗಲೊಪ್ಪಿದನು. ಆದರೆ ಆತನನ್ನು ಒಂದು ಯೋಚನೆಯು ಬಾಧಿಸತೊಡಗಿತು "ವೈಭವಶಿಖರದ ಕೋಡುಗಲ್ಲಿನಮೇಲೆ ಕುಳಿತಿರುವ ಆ ಮಹಾನುಭಾವನೆಲ್ಲಿ? ದಾರಿದ್ರ್ಯ ಶರಧಿಯ ಅಡಿಯಲ್ಲಿ ಬಿದ್ದಿರುವ ನಾನೆಲ್ಲಿ? ನನ್ನ ಈ ರಿಕ್ತದೆಸೆಯಲ್ಲಿ ನಾನು ಆತನನ್ನು ನೋಡಹೋಗುವುದು ಸಮಂಜಸವಾದೀತೆ?" ಎಂದುಕೊಂಡು, ಸ್ವಲ್ಪ ಹೊತ್ತು ಸಮಾಧಾನದಿಂದ ಹಾಗೇ ತಡೆದು, "ಇದಕ್ಕೇಕೆ ಯೋಚನೆಯು, ಶ್ರೀಕೃಷ್ಣಮೂರ್ತಿಯು ನಿರಹಂಕಾರಿಯು. ಸದ್ಗುಣಸಮೂಹವೇ ಮೂರ್ತಿವೆತ್ತಂತೆ ತೋರುವ ಆ ದಯಾಮಯನು ನನ್ನನ್ನು ಅಲಕ್ಷ್ಯಮಾಡಲಾರನು" ಎಂದು ಕೊಂಡು, ಮತ್ತು ಪತ್ನಿಯನ್ನು ಕುರಿತು—"ಓ ನಾಧ್ವೀಮಣಿ ನಿನ್ನ ಅಪೇಕ್ಷೆಯಂತೆ ನಾನು, ಆ ಪುರುಷೋತ್ತಮನನ್ನು ಸಂದರ್ಶಿಸಿ ಬರುವೆನು ಜಯಾಪಜಯಗಳು ಮಾತ್ರ ನಿಮ್ಮ ಭಾಗ್ಯವಿದ್ದಂತಾಗುವುವು! ಆದರೆ ಪ್ರಭುಗಳ, ಬಾಲಕರ, ಗರ್ಭಿಣಿ ಸ್ತ್ರೀಯರ ಮತ್ತು, ದೇವಸ್ಥಾನದಲ್ಲಿ ಸ್ವಾಮಿಯ ಸಂದರ್ಶನಕ್ಕೆ ರಿಕ್ತಹಸ್ತದಿಂದ ಹೋಗಬಾರದೆಂಬ ಒಂದು ಲೌಕಿಕ ನೀತಿ ವಾಕ್ಯವಿದೆ. ಲಕ್ಷ್ಮೀಪತಿಯಾದ ಆ ಮಹಾಮಹಿಮನಲ್ಲಿಗೆ ಜ್ಯೇಷ್ಠಾದೇವಿಯ ಔರಸಪುತ್ರನಾದ ನಾನು ಏನು ಕಾಣಿಕೆಯನ್ನು ತೆಗೆದುಕೊಂಡು ಹೋಗಲಿ?" ಎಂದು ಚಿಂತಾಕ್ರಾಂತನಾದನು ಭರ್ತನ ಆ ಮಾತನ್ನು ಕೇಳಿದ ಕ್ಷುತ್ ಕ್ಷಾಮೆಯು ಸ್ವಲ್ಪ ಹೊತ್ತು ಯೋಚಿಸಿ, ಒಡನೆ ಬರುವೆನೆಂದು ಹೊರಕ್ಕೆ ನಡೆದಳು. ಮತ್ತು ಪಕ್ಕದ ಮನೆಗೆ ನಡೆದು ನಾಲ್ಕು ಹಿಡಿ ಅವಲಕ್ಕಿಯನ್ನು ಕೊಡಿರೆಂದು ಅಪೇಕ್ಷಿಸಿದಳು. ತನ್ನ ಮನೆಯಲ್ಲಿ ಅಷ್ಟು ತಾಪತ್ರಯಗಳಿದ್ದರೂ, ಎಂದೂ ತನ್ನ ಕಷ್ಟಗಳಿಂಥವೆಂದು ಬಾಯ್ಬಿಟ್ಟು ನುಡಿಯದೆ, ಯಾವುದೊಂದು ಪದಾರ್ಥವನ್ನೂ ಯಾಚಿಸದೆ ಇದ್ದ ಮಹಾಗಾಂಭೀರ್ಯಶಾಲಿನಿಯಾದ ಕುಚೇಲ ಪತ್ನಿಯು ಆ ದಿನ ಬಂದು ತನ್ನನ್ನು ಅವಲಕ್ಕಿಯನ್ನು ಬೇಡಿದುದೇ ತನಗೊಂದು ಗೌರವವೆಂದು ಭಾವಿಸಿ, ಆ ನೆರೆಮನೆಯ ಮುತ್ತೈದೆಯು ಒಡನೆ ಪ್ರತಿಹೇಳದೆ, ನಾಲ್ಕು ಹಿಡಿ ಅವಲಕ್ಕಿಯನ್ನು ತಂದು ಆಕೆಯ ಉಡಿಯಲ್ಲಿ ಹಾಕಿದಳು. ಕ್ಷುತ್ ಕ್ಷಾಮೆಯು ಲೇಶವೂ ಸಾವಕಾಶಮಾಡದೆ ಮನೆಗೆ ಬಂದು, ಅದನ್ನು ಶತಚ್ಛಿದ್ರಗಳಿಂದ ಒಪ್ಪುತ್ತಿದ್ದ ಆತನ ಅಂಗವಸ್ತ್ರದ ಒಂದು ನೆರಗಿನಲ್ಲಿ ನಾಲ್ಕೈದು ಮುಡಿಕೆಗಳನ್ನು ಮಾಡಿ ಕಟ್ಟಿ "ಪ್ರಾಣೇಶಾ,

ಯಾದವೇಶನಾದ ಶ್ರೀಕೃಷ್ಣಮೂರ್ತಿಯ ಯೋಗ್ಯತೆಗೆ ತಕ್ಕಂತೆ ಕಾಣಿಕೆ ಯನ್ನು ಕೊಡುವ ಸಾಮರ್ಥ್ಯವಿದ್ದರೆ ನಾವು ಈಗ ಆತನನ್ನು ಹೋಗಿ ನೋಡಬೇಕಾದ ಕರ್ತವ್ಯವಾದರೂ ಏನಿದ್ದಿತು? ಅದನ್ನು ಕುರಿತು ಈಗ ಯೋಚಿಸಬೇಕಾದುದಿಲ್ಲ. ನಮ್ಮ ಯೋಗ್ಯತೆಗೆ ತಕ್ಕಂತಹ ಕಾಣಿಕೆಯನ್ನು ಅರ್ಪಿಸಿ ಅದರಿಂದಲೇ ತೃಪ್ತರಾಗೋಣ! ಭಕ್ತರು ಪ್ರೀತಿಪೂರ್ವಕವಾಗಿ ಸಮರ್ಪಿಸಿದ ಪತ್ರ ಪುಷ್ಪ ಫಲ ತೋಯ (ನೀರು) ಗಳನ್ನಾದರೂ ಕೈಕೊಳ್ಳುವಂತಹ ದಯಾಮಯನಲ್ಲವೆ ಆ ಶ್ರೀಕೃಷ್ಣಮೂರ್ತಿಯು!'' ಎಂದು ನುಡಿದಳು ಕುಚೇಲನು, ಸದ್ಗುಣಮಣಿಯಾದ ತನ್ನಾ ಪತ್ನಿಯ ಮೃದುಮಧುರವಚನಗಳಿಂದ ಸಂತುಷ್ಟಮಾನಸನಾಗಿ, ಎದ್ದು ಬೇರೊಂದು ಅಂಗವಸ್ತ್ರವಿಲ್ಲದುದರಿಂದ ಅವಲಕ್ಕಿಯನ್ನು ಕಟ್ಟಿದ್ದ ಆ ವಸ್ತ್ರವನ್ನೇ ಹೊದೆದು, ಮಿತ್ರದರ್ಶನ ಮಾಡಬೇಕೆಂಬ ಅಪೇಕ್ಷೆಯು ಮೇಲ ಮೇಲೆ ಹೆಚ್ಚುತ್ತಿರಲು, ದ್ವಾರಕಾಭಿಮುಖವಾಗಿ ಪ್ರಯಾಣಮಾಡಿದನು



## ಅಧ್ಯಾಯ ೪ "ಅವಂತಿಯಿಂದ-ದ್ವಾರಕೆಗೆ"

ಭೂಸುರೋತ್ತಮನಾದ ಕುಚೇಲನು, ಮೇಲ್ಕಂಡಂತೆ ಶ್ರೀಕೃಷ್ಣ ದರ್ಶನಾಪೇಕ್ಷಿಯಾಗಿ ದ್ವಾರಕಾಪುರಿಯನ್ನು ಕುರಿತು ಪ್ರಯಾಣಮಾಡಿದನಷ್ಟೆ! ಆತನು ಮನೆಯಿಂದ ಹೊರಟೊಡನೆಯೇ ಎದುರಿಗೆ ಮಂಗಳದ್ರವ್ಯಗಳನ್ನು ಹಿಡಿದು ಬರುತ್ತಿದ್ದ ನಾಲ್ಕು ಮಂದಿ ಸುವಾಸಿನಿಯರನ್ನು ಕಂಡನು. ಮತ್ತೊಂದು ಕಡೆಯಿಂದ ಕೆಲಮಂದಿ ಮುತ್ತೈದೆಯರು, ಪೂರ್ಣ ಜಲ ಕುಂಭಗಳನ್ನು ಹೊತ್ತು, ಎದುರಿಗೆ ಬಂದರು ನಾಲ್ಕು ಹಜ್ಜೆ ನಡೆದು ಮುಂದಕ್ಕೆ ಬರಲು, ವೋಲಗ ತಾಳಮೇಳಗಳಿಂದ ಕೂಡಿದ ಮೆರೆವಣಿಗೆಯವರು ಆತನಿಗೆ ಎದುರಾದರು ಆರೀತಿ ಆಗುತ್ತಿದ್ದ ಶುಭಶಕುನಗಳನ್ನು ಕಂಡು ಆ ವಿಪ್ರಶ್ರೇಷ್ಠನು, ಸಂತೋಷದಿಂದ,—"ಶುಭಶಕುನಗಳಾಗುತ್ತಿವೆ ಕ್ಷುದ್ರನಾದ ನನಗೆ, ರಾಜಧಾನಿನಗರವಾದ ಆ ದ್ವಾರಕಾಪುರಿಯಲ್ಲಿ ಪ್ರವೇಶವುಂಟಾಗಿ,

ರಾಜಾಧಿರಾಜರಿಗೇ ಅಲಭ್ಯವಾದ ಶ್ರೀಕೃಷ್ಣಮೂರ್ತಿಯ ದರ್ಶನವು ಸಿಕ್ಕುವುದೋ ಇಲ್ಲವೋ ಎಂಬ ಸಂದೇಹವಿತ್ತು, ಈಗ ಶಕುನಗಳೇನೋ ಶುಭಸೂಚನೆಯನ್ನು ತೋರಿಸುತ್ತಿವೆ ಭಕ್ತವತ್ಸಲನಾದ ಶ್ರೀವರನು ನನ್ನನ್ನೇಕೆ ಮರೆತಾನು- ದರ್ಶನಲಾಭವು ದೊರೆತೀತು! ಸಾಕು, ಆ ಪುರುಷೋತ್ತಮನ ದರ್ಶನ ಭಾಗ್ಯವು ಲಭಿಸಿದರೆ ಸಾಕು'' ಎಂದುಕೊಂಡು ಮುಂದ ಮುಂದ ನಡೆದುಹೋದನು ಮುಂದೂ ಒಂದೊಂದಾಗಿ ಶುಭಶಕುನಗಳು ಆಗುತ್ತಲೇ ಇದ್ದುವು ಗಿಳಿಪಕ್ಷಿಯು "ಕೃಷ್ಣಾ ಕೃಷ್ಣಾ" ಎಂದು ಅವ್ಯಕ್ತವಾಗಿ ಕೃಷ್ಣ ನಾಮವನ್ನು ಉಚ್ಚರಿಸುತ್ತಾ, ಬಲದಿಂದ ಎಡಕ್ಕೆ ಹಾರಿಬಂದಿತು ವಾಯಸಗಳು ದಾರಿಯ ಎಡದಿಂದ ಬಲಕ್ಕೆ ಹಾರಿಬಂದುವು. ಪಕ್ಕದ ಹೂಗಳಲ್ಲಿ ಜೇನ್ನೊಣಗಳು ಗುಂಪುಗುಂಪಾಗಿ ಸಂಚರಿಸುತ್ತಿದ್ದುದನ್ನೂ ಆ ವಿಪ್ರೋತ್ತಮನು ಕಂಡನು ಸಾಯಂಕಾಲದಲ್ಲಿ ಬೀಸುತ್ತಿದ್ದ ಮನೋಹರ ಮಂದಮಾರುತವೂ, ಆತನಿಗೆ ಸುಖಾಗಮನವನ್ನು ಬಯಸುವಂತಿದ್ದಿತು. ಕುಚೇಲನೂ ಬೇಗಬೇಗನೆ ನಡೆದು ಮುಂದೆ ಮುಂದೆ ಪ್ರಯಾಣಮಾಡಿದನು

ಮಾರ್ಗದಲ್ಲಿ ಕುಚೇಲನ ಮನಸ್ಸಿನಲ್ಲಿ ಅನೇಕ ಯೋಚನೆಗಳುಂಟಾದುವು ಅವುಗಳಲ್ಲಿ ತನ್ನ ಪತ್ನಿಯ ಕಷ್ಟವೂ ಅದನ್ನು ಸಹಿಸಿಕೊಂಡಿದ್ದ ಆ ಸಾಧ್ವಿಯ ತಾಳ್ಮೆಯೂ ಆತನಿಗೆ ಅದ್ಭುತವೆನಿಸಿತು "ಆಹಾ ಆಕೆಯ ಸಮಾಧಾನಕ್ಕೆ ಮಿತಿಯಿಲ್ಲವಲ್ಲಾ! ಅಳತೆಯಿಲ್ಲದ ದಾರಿದ್ರ್ಯದ ಕಷ್ಟಸಂಕಟಗಳನ್ನು ಒಂದು ಬಿಡುನುಡಿಯನ್ನು ನುಡಿಯದೆ ಆ ಸ್ತ್ರೀಶಿರೋಮಣಿಯು ಸಹಿಸಿಕೊಂಡಿರುವಳಲ್ಲಾ! ಲೋಕದಲ್ಲಿ ತಮ್ಮ ಪತಿಗಳು ಅನುಭವಿಸಲಾಗದ ಕಷ್ಟಗಳನ್ನು ಅನುಭವಿಸಿ, ಪರರ-ನೀಚರ ಸೇವೆಯನ್ನಾದರೂ ಮಾಡಿ, ಆತ್ಮಗೌರವವನ್ನೂ ನೀಗಿಕೊಂಡು, ಹಣಕಾಸುಗಳನ್ನು ಸಂಪಾದಿಸಿ, ವಸ್ತ್ರವಡವೆಗಳನ್ನು ತಂದು ಕೊಟ್ಟರೂ ಇನ್ನೂ ತಮಗೆ "ಅದು ಬೇಕಿತ್ತು ಇದು ಬೇಕಿತ್ತು''ಎಂದ ಕಾಡಿ ಬೇಡಿ ಅಸಮಾಧಾನದಿಂದ-ದುಗುಡದಿಂದ ಇರುವ ಸ್ತ್ರೀಯರು ಅನೇಕರಿರುವರು ಹೀಗಿರುವಲ್ಲಿ ನನ್ನ ಈ ಗೃಹಿಣಿಯು ಎಂತಹ ಸುಶೀಲೆಯು! ತಿನ್ನುವುದಕ್ಕೆ ಹೊಟ್ಟೆ ತುಂಬುವಷ್ಟು ಅನ್ನಕ್ಕೆ ಮಾರ್ಗವಿಲ್ಲ! ಉಡುವುದಕ್ಕೆ ಗಟ್ಟಿಯಾದ ಒಂದು ಒಟ್ಟಿಗೆ ಗತಿಯಿಲ್ಲ, ಮಿಕ್ಕ ಬೆಲೆಯುಳ್ಳ ಒಡವೆವಸ್ತ್ರಗಳನ್ನಂತೂ ಸ್ವಪ್ನದಲ್ಲೂ ಕಾಣುವಂತಿಲ್ಲ! ಸಾಲದುದಕ್ಕೆ ಇಷ್ಟು

ತ್ತೇಳು ಮಂದಿ ಮಕ್ಕಳ ಅಸಹನೀಯ ಕಾಟ ಬೇರೆ ಆದರೂ ಒಂದು ದಿನ ವಾದರೂ ಆ ಸಾಧ್ವೀಮಣಿಯು ಅಸಮಾಧಾನಪಟ್ಟುಕೊಳ್ಳಲಿಲ್ಲವಲ್ಲ! ತನ್ನ ಮತ್ತು ಮಕ್ಕಳ ಕ್ಷೇಮಚಿಂತನೆಯನ್ನು ಗಮನಿಸುವವನಲ್ಲವೆಂದು ನನ್ನ ವಿಷಯದಲ್ಲಿ ಅಲಕ್ಷ್ಯಮಾಡಲಿಲ್ಲವಲ್ಲ! ಹುಟ್ಟುದರಿದ್ರನಾದ ನನ್ನನ್ನು ಕೈಹಿಡಿದಮೇಲೆ ಸಮಾಧಾನದಿಂದಿರಲಿ-ಸಿಟ್ಟುಮಾಡಿಕೊಳಲಿ, ಏನೂ ದೊರೆಯಲಾರದೆಂದು ನಿರಾಶಳಾಗಿ ಹಾಗಿರುವಳೆಂದು ಭಾವಿಸುವ ಹಾಗೆಯೂ ಇಲ್ಲ. ಭಯ ಭಕ್ತಿಯುಕ್ತಳಾಗಿರುವಳು. ಯುಕ್ತಸ್ತ್ರೀಧರ್ಮ-ಗೃಹಿಣೀಧರ್ಮಕ್ಕೆ ಲೋಪವಾಗುವಂದನ್ನು ತರುತ್ತಲಿಲ್ಲ ಅಂತಹ ಒಡತನವನ್ನು ಸಹಿಸಿಕೊಂಡು, ಯಾವಾಗಲೂ ಹಸನ್ಮುಖವನ್ನೇ ತೋರಿಸುತ್ತಿರುವಳು, ಮುಂಗೋಪ ಅಸಹನೆ ನಿಷ್ಠುರವಚನ ಅಜಾಗ್ರತೆ ಅವಿಧೇಯತೆ ಮುಂತಾದವುಗಳನ್ನು ಆ ಪುಣ್ಯವಂತಳಲ್ಲಿ ಎಂದೂ ಕಂಡುದಿಲ್ಲ. ಲೋಕದಲ್ಲಿ ತಮ್ಮ ಪುರುಷರು, ತಮ್ಮ ಅಪೇಕ್ಷೆ ತೀರುವಂತೆ ಧನಕನಕ ವಸ್ತ್ರ ಭೂಷಣ ತಿಂಡಿತೀರ್ಥಗಳನ್ನು ತಂದು ಒದಗಿಸುತ್ತಿದ್ದರೆ ಮಾತ್ರ, ಅವುಗಳ ಅಪೇಕ್ಷೆಯಿಂದ, ಅವರನ್ನು ಅನುಸರಿಸಿಕೊಂಡು ನಯವಿನಯಗಳಿಂದ ಇರುವಂತೆ, ಅಣಗಿ ಇರುವ ಸ್ತ್ರೀಯರುಂಟು ಆದರೆ ಈ ಸ್ತ್ರೀರತ್ನವು ನನ್ನಿಂದ ಯಾವ ವಿಧವಾದ ಆದರೋಪಚಾರವನ್ನೂ ಹೊಂದಲಪೇಕ್ಷಿಸದೆ, ತಿನ್ನಲು ಅನ್ನ ಉಡಲು ಬಟ್ಟೆಗಳು ಸಹ ಇಲ್ಲದಿದ್ದರೂ ಮಹಾ ಸಾಗರದಂತೆ ಶಾಂತತೆಯನ್ನು ತೋರ್ಪಡಿಸುತ್ತಿರುವಳಲ್ಲ! ಇಂತಹ ಧರ್ಮಪತ್ನಿಯು ದೊರೆತುದೂ ನನ್ನ ಸುಕೃತ ವಿಶೇಷವೆಂದೇ ಎಣಿಸಬೇಕು ಅಷ್ಟಲ್ಲದೆ, ಆಕೆಯಿಂದ ನನಗಾದ ಮತ್ತೊಂದುಪಕಾರವುಂಟು! ಆಕೆಯೂ ನನ್ನಂತೆಯೇ ಲೌಕಿಕ ಭೋಗಭಾಗ್ಯಗಳಲ್ಲಿ ವಿರಕ್ತಳಾಗಿರುವುದರಿಂದ ಮಾತ್ರ ನಾನು ನನ್ನ ಧರ್ಮದಲ್ಲಿ ನಿಲ್ಲಲು ಅವಕಾಶವಾಯಿತು ಇಲ್ಲದೆ, ಹಟಮಾರಿಯಾಗಿ ಕುಳಿತಿದ್ದರೆ, ನಾನು ಧರ್ಮಚ್ಯುತನಾಗಿ ಧನಾರ್ಜನೆಗಾಗಿ ಏನೇನು ದುರಿತಕಾರ್ಯಗಳಲ್ಲಿ ಬೀಳಬೇಕಾಗಿತ್ತೋ ತಿಳಿಯಲಸಾಧ್ಯ! ಅವುಗಳಲ್ಲಿಕಷ್ಟೆ ಹೋಯ್ತಾಗಿ, ಈಗ ಆಕೆಯ ಬಲೋದ್ಬಂಧನದಿಂದಲೇ ಶ್ರೀಕೃಷ್ಣನ ಪಾದಗಳ ದರ್ಶನಕ್ಕೂ ಹೊರಟಿದ್ದೇನಷ್ಟೆ! ಆಕೆಯು ದಾರಿದ್ರ್ಯಕಾರಣದಿಂದ ನನ್ನನ್ನು ದ್ವಾರಕಾವತಿಗೆ ಪ್ರಯಾಣಮಾಡಿಸದಿದ್ದರೆ, ನಾನೂ ನನ್ನ ದಾರಿದ್ರ್ಯದಲ್ಲೇ ಮುಳುಗಿದ್ದು ಆ ಮಹಾನುಭಾವನನ್ನು ಕಂಡು ಬರುವ ಯೋಚನೆಯನ್ನೇ

ಮಾಡುತ್ತಿರಲಿಲ್ಲ ನನಗೆ ಆ ಪರಮಪುರುಷನ ದರ್ಶನ ಭಾಗ್ಯವು ಲಭಿಸಿದರೆ ಅದಕ್ಕೂ ಆ ಪತಿವ್ರತೆಯೇ ಕಾರಣಕರ್ತಳು! ಎಂತಾದರಾಗಲಿ! ಐಶ್ವರ್ಯವು ಲಭಿಸಲಿ-ಲಭಿಸದಿರಲಿ! ನಮ್ಮ ದಾರಿದ್ರ್ಯವು ಹತವಾಗಲಿ-ಅಥವ ಎಂದೆಂಗೂ ಈಗಿನಂತೆಯೇ ಇರಲಿ! ಆತನ ದರ್ಶನಭಾಗ್ಯವೊಂದು ಲಭಿಸಿದರ ಸಾಕು' ಎಂದು ಮುಂತಾಗಿ ಯೋಚಿಸುತ್ತಾ, ಗುಣಗ್ರಹಣಶೀಲನಾದ ಆ ವಿಪ್ರೋತ್ತಮನು ತನ್ನ ಸತ್ನಿಯ ಸದ್ಗುಣಗಳಿಗಾಗಿ ಹೆಚ್ಚಾಳಪಟ್ಟು ಆಕೆಯನ್ನು ಅಭಿನಂದಿಸುತ್ತಾ ಮುಂದ ಮುಂದ ನಡೆದುಹೋದನು

ಮತ್ತು ಕೇವಲ ಭಗವನ್ನಿರ್ಭರನಾದ ಆ ಪುಣ್ಯಶೀಲನಿಗೆ ಮಾರ್ಗದಲ್ಲಿ ಸುತ್ತುಮುತ್ತಲಿನ ಅನೇಕ ಗಿಡಮರಗಳ-ಸುನೀಲ ಅಂತರಿಕ್ಷದ-ಮಂದಮಾರುತನ-ಸ್ವೇಚ್ಛೆಯಾಗಿ ಹಾರಾಡುತ್ತಿದ್ದ ಚಿತ್ರವಿಚಿತ್ರವರ್ಣರಂಜಿತವಾದ ಪಕ್ಷಿಗಳ ಹೀಗೆ ಪ್ರಕೃತಿಯಾಸಿಕಚಸಂಬಂಧದಿಂದ ಆನಂದವು ಉಕ್ಕೇರುತ್ತಿದ್ದಿತು. ಲೋಕದ ಅಕ್ಕ್ಯವಸ್ತುಗಳನ್ನೂ ಸೃಷ್ಟಿಸಿ ಸ್ವಲ್ಪವೂ ನ್ಯೂನತೆಗೆ ಅವಕಾಶವಿಲ್ಲದಂತೆ ರಕ್ಷಿಸಿಕೊಂಡು ಬರುತ್ತಿರುವ ಆ ದಯಾನಿಧಿಯ ಅನುಪಮ ಮಹಿಮೆಯನ್ನು ಮನಸ್ಸಿನಲ್ಲಿ ಪರಿಭಾವಿಸಿಕೊಳುತ್ತಾ, ಆನಂದಬಾಷ್ಪಗಳನ್ನು ಸುರಿಸುವನು ಪಕ್ಷಿಗಳ ಮೃದುಮಧುರಗಾಯನದಿಂದ-ಅರಣ್ಯಪುಷ್ಪಗಳ ಸುವಾಸನೆಯಿಂದ ಪ್ರಕೃತಿಯ ಸುಂದರತರ ವಸ್ತುಗಳ ನೋಟದಿಂದ, ಮಧುರತರ ಮಂದಮಾರುತದ ಸ್ಪರ್ಶದಿಂದ ತನ್ನ ಶ್ರೋತ್ರ-ಘ್ರಾಣ,-ಚಕ್ಷು,-ಸ್ಪರ್ಶೇಂದ್ರಿಯಗಳಿಗೆ ಉಂಟಾಗುತ್ತಿದ್ದ ಸುಖವನ್ನೂ ಸರ್ವೇಂದ್ರಿಯ ನಿಯಾಮಕನಾದ ಶ್ರೀಕೃಷ್ಣಮೂರ್ತಿಗೇ ಪ್ರಿಯವಾಗಲೆಂದು ಅರ್ಪಿಸಿದನು ಮಾರ್ಗದ ಎಡಬಲದ ತೋಪೋಟಗಳಲ್ಲಿದ್ದ ದಿವ್ಯಸುಪುಷ್ಪಗಳನ್ನೂ-ಮರಗಳಲ್ಲಿದ್ದ ಮಧುರರಸಪೂರಿತ ಫಲಗಳನ್ನೂ ಶ್ರೀಕೃಷ್ಣಾರ್ಪಿತವಾಗಲೆಂದು ಅರ್ಪಿಸಿದನು ತಿಳಿಗೊಳಗಳಲ್ಲಿನ ನಿರ್ಮಲ ಜಲವನ್ನೂ ಆ ಲೋಕರಕ್ಷಕನಿಗೇ ಸಮರ್ಪಿಸಿದನು. ಹೀಗೆ ಭಗವತ್ಸಂಬಂಧವಾದ ಯೋಚನೆಗಳೇ ಮನಸ್ಸಿನಲ್ಲಿ ತುಂಬಿರಲು, ಆ ವಿಪ್ರವರ್ಯನು ಪ್ರಯಾಣಮಾಡಿ ದ್ವಾರಕಾಪುರಿಯ ಸಮೀಪಕ್ಕೆ ಬರುತ್ತಿದ್ದನು

ದ್ವಾರಕಾವತಿಯ ಗಗನಚುಂಬಿತಗಳಾದ ದಿವ್ಯಸೌಧಗಳ-ಗುಡಿಗೋಪುರಗಳ ಸುವರ್ಣಕಲಶಗಳು ಕುಚೇಲನಿಗೆ ಗೋಚರವಾದುವು. ಅವುಗಳನ್ನು ನೋಡಿದೊಡನೆಯೇ ಆತನ ಮೈ 'ಜುಮ್' ಎಂದಿತು. ರೋಮಾಂಚಿತವಾ

ಯಿತು. ಆನಂದಬಾಷ್ಪಗಳು ಉಕ್ಕಿ ಹರಿದುವು ಕಾಲ್ನಡಿಗೆಯೂ ಆತನ ಸ್ವಾತಂತ್ರ್ಯವಿಲ್ಲದೆಯೇ ಶೀಘ್ರವಾಗತೊಡಗಿತು. ಬಹು ಸ್ವಲ್ಪ ಕಾಲದಲ್ಲೇ ಒಂದೆರಡು ಕ್ರೋಶಗಳ ಮಾರ್ಗವನ್ನು ಕಳೆದು ದ್ವಾರಕಾಪುರಿಯನ್ನು ಸುತ್ತುವರಿದಿದ್ದ ಸಮುದ್ರಶಾಖೆಯ ಬಳಿಗೆ ಬಂದನು. ಆವರೆಗೆ ಪರಾತಂಕವಿಲ್ಲದೆ ಭೂಪ್ರಯಾಣಮಾಡಿದ ಆತನು, ಆಗ ಆ ಶಾಖೆಯನ್ನು ದಾಟಲು ಪರಾಪೇಕ್ಷೆಯನ್ನು ಕೋರುವಂತಾಯಿತು ಆತನಲ್ಲಿ, ದೋಣಿಯವನಿಗೆ ಕೊಟ್ಟು ದಾಟಲು ಒಂದು ಕಾಸೂ ಸಹ ಇರಲಿಲ್ಲ! ಏನು ಮಾಡಲಾದೀತು? ಆಗ ಆ ವಿಪ್ರೋತ್ತಮನು, "ಭವಸಾಗರವನ್ನೇ ದಾಟಿಸಲು ಸಮರ್ಥನಾಗಿರುವ ಶ್ರೀಪರನಿಗೆ ಈ ಗೋಷ್ಪಾದದಷ್ಟಿರುವ ಜಲಪ್ರವಾಹವನ್ನು ದಾಟಿಸುವುದು ಯಾವ ಅಗಾಧ ಕಾರ್ಯವು! ಯಾವ ಸಹಾಯವನ್ನು ಒದಗಿಸುವನೋ ನೋಡೋಣ" ಎಂದುಕೊಂಡು ಅಲ್ಲೇ ಸ್ವಲ್ಪ ಹೊತ್ತು ನಿಂತಿದ್ದನು ಅಷ್ಟರಲ್ಲಿ ದೋಣಿಯವನೊಬ್ಬನು ಬಂದು, ಆತನ ಮುಖದಲ್ಲಿ ಕಂಡು ಬರುತ್ತಿದ್ದ ದಿವ್ಯತೇಜಸ್ಸನ್ನು ಕಂಡು ಚಕಿತನಾಗಿ ವಂದಿಸಿ "ವಿಪ್ರೋತ್ತಮರೇ ತಾವು ಎಲ್ಲಿಗೆ ದಯೆಮಾಡಿಸಬೇಕು" ಎಂದು ಪ್ರಶ್ನಿಸಿದನು ಕುಚೇಲನು ದ್ವಾರಕಾಧೀಶನಾದ ಶ್ರೀಕೃಷ್ಣದರ್ಶನಕ್ಕೆಂದು ಅವನಿಗೆ ಪ್ರತ್ಯುತ್ತರವನ್ನು ಕೊಡಲು, ಆ ದೋಣಿಯವನು ಲೇಶವೂ ಸಾವಕಾಶಮಾಡದೆ ಒಡನೆ ಆತನನ್ನು ಆ ಜಲಪ್ರವಾಹವನ್ನು ದಾಟಿಸಿ, ಆಚೆಯ ದಂಡೆಗೆ ಬಿಟ್ಟನು

ಕುಚೇಲನು ಭಗವದನುಗ್ರಹದಿಂದಲೋ ಎಂಬಂತೆ ತನಗೆ ಮೇಲೆ ಮೇಲೆ ಒದಗುತ್ತಿದ್ದ ಶುಭಸೂಚನೆಗಳಿಗಾಗಿಯೂ ಅನುಕೂಲಗಳಿಗಾಗಿಯೂ ಆ ವ್ಯಾಜಕೃಪಾಪರಿಪೂರ್ಣನಾದ ಶ್ರೀದ್ವಾರಕೇಶನನ್ನು ಧ್ಯಾನಿಸಿ, ಕೃತಜ್ಞತೆಯಿಂದ ಮನಸ್ಸಿನಲ್ಲೇ ವಂದಿಸುತ್ತಾ, ನಡೆದು, ದ್ವಾರಕಾನಗರಿಯ ಕೊನೆಯ ಸುತ್ತಿನ ಕೋಟೆಯ ಮಹಾದ್ವಾರದಲ್ಲಿಗೆ ಬಂದನು. ಆ ವೇಳೆಗೆ ಸಾಯಂಕಾಲವಾಗಿ ಆ ನಗರಿಯಲ್ಲಿದ್ದ ಮಂಗಳಕರಗಳಾದ ಗೋಪುರಗಳೂ ಮುಂದೆ ಮುಂದೆಯಾಗಿ ಮನೆಯನ್ನು ಕುರಿತು, ಕೋಟೆಯ ಬಾಗಿಲ ಬಳಿಗೆ ಬರುತ್ತಿದ್ದುವು ಕುಚೇಲನು ಒಳಹೊಗಲು ಪ್ರಯತ್ನಿಸಿದನು. ಆದರೆ ಅಲ್ಲೇ ಇದ್ದ ದ್ವಾರರಕ್ಷಕರು, ಆತನನ್ನು ತಡೆದು "ಯಾರು? ಎಲ್ಲಿಗೆ ಹೋಗುವುದು? ನಗರದಲ್ಲಿ ಕೆಲಸವೇನು?" ಎಂದು ಮುಂತಾಗಿ ಪ್ರಶ್ನಿಸಲು, ಎಂದೂ ಆ

ಬಗೆಯ ರಾಜಕರ್ಮಚಾರಿಗಳ ಪ್ರಶ್ನಗಳನ್ನು ಕೇಳಿ ಅರಿಯದ ಪರಮಸಾಧು ವಾದ ಆ ವಿಪ್ರೋತ್ತಮನು ಆಶ್ಚರ್ಯಕ್ಕೇ ಬೆದರಿ ತತ್ತರಿಸಿ ಕೊನೆಗೆ ಧೈರ್ಯ ಗೊಂಡು "ಅಯ್ಯಾ ಸಜ್ಜನರೇ ನಾನೊಬ್ಬ ಬಡಬ್ರಾಹ್ಮಣನು. ಅವಂತಿ ಯಿಂದ ಬಂದಿದ್ದೇನೆ. ಶ್ರೀಕೃಷ್ಣನು ನನ್ನ ಬಾಲ್ಯಮಿತ್ರನು. ನನ್ನ ಸಹಪಾ ಠಿಯು, ಆತನನ್ನು ಕಂಡು ಹೋಗೋಣವೆಂದು ಬಂದಿದ್ದೇನೆ ನನ್ನನ್ನು ಏಕೆ ತಡೆದು ತೊಂದರೆ ಪಡಿಸುವಿರಿ" ಎಂದು ತನ್ನ ವಿಚಾರವನ್ನೆಲ್ಲಾ ಅವರಿಗೆ ತಿಳಿಯುವಂತೆ ಹೇಳಿದನು. ಆತನ ಆ ಮಾತನ್ನು ಕೇಳಿದ ಆ ದ್ವಾರಪಾಲಕ ರಲ್ಲಿ ಅಲ್ಪವಯಸ್ಕರೂ ಅನನುಭವಿಗಳೂ ಆದ ಕೆಲವರು ಧೂರ್ತರು 'ಓಹೋ!' ಎಂದು ಚಪ್ಪಾಳೆ ತಟ್ಟಿ ನಕ್ಕು,—"ಈ ಚಿಂದಿವಸ್ತ್ರದ ಬಡಬ್ರಾಹ್ಮಣನು ರಮಾ ವಲ್ಲಭನಾದ ಶ್ರೀಕೃಷ್ಣಸ್ವಾಮಿಯನ್ನು ದರ್ಶಿಸಬೇಕೋ! ದೇಶದೇಶಗಳಿಂದ ಬಂದ ರಾಜಾಧಿರಾಜರಿಗೇ ಲಭಿಸಲು ಅಸಾಧ್ಯವಾಗಿರುವ ಶ್ರೀಕೃಷ್ಣದರ್ಶನವು, ಕೋರಿಬಟ್ಟೆಯ ಈ ಹಾರುವನಿಗೆ ಸಾಧ್ಯವೇ!" ಎಂದು ಅಪಹಾಸ್ಯಮಾಡಿ ನಕ್ಕರು ಅದನ್ನು ಕೇಳಿದ ಕೆಲಮಂದಿ ವೃದ್ಧ ಸೇವಕರು ಅವರನ್ನು ನಿವಾ ರಿಸಿ,—"ಎಲೋ ಏನೆನ್ನುವಿರಿ? ಸಾಧುಜನ ಸುಲಭನಾದ ನಮ್ಮ ಕೃಷ್ಣಮೂ ರ್ತಿಯ ಪವಿತ್ರನಾಮಕ್ಕೆ ಕಳಂಕವನ್ನು ತರುವ ಎಂತಹ ಮಾತನ್ನಾಡುವಿರಿ? ಯಾದವೇಂದ್ರನು, ಮದಾಂಧರಾದ, ಗರ್ವೋದ್ಧತರಾದ ರಾಜಕನ್ಯೆಗಳಿಗೆ ದುರ್ಲಭನಲ್ಲದೆ, ಬ್ರಹ್ಮತೇಜೋವಿರಾಜಮಾನರಾದ, ಸತ್ವಗುಣ ಪ್ರಧಾನ ರಾದ ಇಂತಹ ಬ್ರಾಹ್ಮಣೋತ್ತಮರಿಗೆ ಅಸಾಧ್ಯನಲ್ಲ! ವಿಪ್ರೋತ್ತಮಾ, ಮುಂದೆ ನಡೆಯಿರಿ, ಮಧ್ಯದಲ್ಲಿರುವ ಈ ಪ್ರಾಕಾರಗಳನ್ನು ದಾಟಿ ಮುಂದೆ ಹೋದರೆ, ಅಲ್ಲಿ ಶ್ರೀಕೃಷ್ಣಸ್ವಾಮಿಯ ಅರಮನೆಯ ಪ್ರಾಕಾರವು ದೊರೆಯು ವುದು ಚಿಂತಿಸದಿರಿ. ಕೃಷ್ಣಮೂರ್ತಿಯು ಭಕ್ತವತ್ಸಲನು" ಎಂದು ನು ಡಿದು, ಮುಂದಕ್ಕೆ ಕಳುಹಿಸಿಕೊಟ್ಟನು.

ಕುಚೇಲನು ವೃದ್ಧಸೇವಕನ ಆ ಬಗೆಯ ಪ್ರೋತ್ಸಾಹವಚನಗಳಿಂದ ಧೈರ್ಯಗೊಂಡು, ಮುಂದೆ ಮುಂದೆ ನಡೆದು, ಅಗಣಿತ ಯಾದವಸೇವೆಗೆ ನಿವಾಸಸ್ಥಾನವಾದ ಮೂರು ಪ್ರಾಕಾರಗಳನ್ನೂ ದಾಟಿದನು ತರುವಾಯ, ಬ್ರಹ್ಮಕ್ಷತ್ರಿಯ ವೈಶ್ಯಶೂದ್ರರಿಗಾಗಿ ಏರ್ಪಟ್ಟ ಬೇರೆ ಬೇರೆ ಭಾಗಗಳನ್ನೂ ನೋ ಡಿದನು. ಮುತ್ತು ರತ್ನಾದಿಗಳು, ಚಿನ್ನ ಬೆಳ್ಳಿಯ ಆಭರಣಗಳು, ಬೆಲೆಯು

ಳ್ಳ ನಾನಾಬಗೆಯ ವಸ್ತ್ರಗಳು, ದವಸಧಾನ್ಯಗಳು, ಫಲಪುಷ್ಪಗಳು, ಕಾಯಿ ಪಲ್ಯಗಳು ಮುಂತಾದುವುಗಳನ್ನು ಮಾರುತ್ತಿದ್ದ ಅಂಗಡಿಕಾರರ ಬೀದಿಗಳನ್ನೂ ದಾಟಿ ಮುಂದೆ ನಡೆದನು. ಅಲ್ಲಿ ವೃಷ್ಣಿ, ಭೋಜ, ಅಂಧಕ, ಉಗ್ರಸೇನಾದಿ ರಾಜರ ಮತ್ತು ಇತರ ಅನೇಕ ಮಂದಿ ರಾಜಪುತ್ರರ ಅರಮನೆಯ ಸಾಲುಗಳು ಕಾಣಿಸಿದುವು. ಅವುಗಳ ಸೌಂದರ್ಯವನ್ನು ವರ್ಣಿಸಲು ಯಾರಿಗಳವು' ತನ್ನ ಮುರುಕು ಮನೆಯಲ್ಲಿ ತನ್ನ ಸ್ನಾನಸಂಧ್ಯಾ ಜಪತಪಾದಿಗಳನ್ನು ಬಿಟ್ಟು ಹೊರಕ್ಕೆ ನಡೆದು, ಪಟ್ಟಣವಾಸದ ಸೊಬಗನ್ನು ಎಂದೂ ಕಂಡರಿಯದಿದ್ದ ಆ ವಿಪ್ರೋತ್ತಮನಿಗೆ ಅವುಗಳ ನೋಟವು ಒಂದು ಬಗೆಯಿಂದ ಭ್ರಾಂತಿಯ ನ್ನುಂಟುಮಾಡುವಂತಿದ್ದಿತು. ಯದುವೀರರ ಆ ಅರಮನೆಗಳನ್ನೂ ದಾಟಿ ಮುಂದೆ ನಡೆದನು. ಅಲ್ಲಿ ಶ್ರೀಕೃಷ್ಣ ಪತ್ನಿಯರಾದ ಹದಿನಾರು ಸಹಸ್ರ ಮಂದಿ ಸ್ತ್ರೀಯರ ದಿವ್ಯಭವನಗಳು ಕಂಗೊಳಿಸಿದುವು. ಅವುಗಳಲ್ಲಿ ಒಂದೊಂ ದೂ ಶ್ವೇತಶಿಲೆಯ-ಕೃಷ್ಣಶಿಲೆಯ ಕಂಭಗಳಿಂದಲೂ, ಚಿನ್ನದಿಂದ ಮಾಡಿಸಿ ಕಟ್ಟಿಸಿದ ಮಾವಿನೆಲೆಯ ತೋರಣಗಳಿಂದಲೂ, ಮುತ್ತಿನ ಸರಗಳ ಮೇಲ್ಕ ಟ್ಟುಗಳು,-ನಿಲುವುಗನ್ನಡಿ,-ಕಲಶಗಳಿಂದಲೂ, ನೋಡಿದರೆ ಮುಖವು ಪ್ರತಿ ಬಿಂಬಿಸುವಂತೆ ನಯಗೊಳಿಸಿದ ನೆಲದಿಂದಲೂ ಇಂದ್ರಭವನಗಳಂತೆ ಮನೋ ಹರವಾಗಿದ್ದುವು. ಕುಚೇಲನು, ತಾನೇನು ಇಂದ್ರನ ಅಮರಾವತಿಗೆ ಬಂ ದೆನೋ ಅಥವಾ ಇದೇನು ಆದಿಶೇಷನ ಭೋಗವತಿಯೋ ಎಂದು ಆಶ್ಚರ್ಯ ಪಡುತ್ತಾ, ಅವುಗಳನ್ನೂ ದಾಟಿ, ಮುಂದಕ್ಕೆ ಹೋದನು. ಅಲ್ಲಿ ಅವೆಲ್ಲವು ಗಳಿಗಿಂತಲೂ, ಅತಿಶಯ ಸೌಂದರ್ಯವುಳ್ಳುದಾಗಿ ಗಗನವನ್ನು ಮುಟ್ಟುವಂತೆ ಏರಿಸಿದ್ದ ಸಹಸ್ರ ಸುವರ್ಣಕಲಶಗಳಿಂದ ಧಳಧಳಿಸಿಂದು ಹೊಳೆಯುತ್ತಾ, ಶ್ವೇ ತಶಿಲೆಯ ಗೋಪುರಗಳಿಂದ-ಕಪ್ಪಾದ ಮೇಘಮಾಲೆಯನ್ನೂ ಬೆಳಗುಗೊಳಿ ಸುತ್ತಾ, ನೇತ್ರಾನಂದಕರವಾಗಿ ಕಂಗೊಳಿಸುತ್ತಿದ್ದ ಜಗಜ್ಜನನಿಯಾದ ಶ್ರೀ ರುಕ್ಮಿಣೀದೇವಿಯ ನಿವಾಸಸ್ಥಾನವಾದ ಅರಮನೆಯೊಂದನ್ನು ಕಂಡನು ಅದರ ಸುತ್ತಲೂ ಬಹುಬಲವಾದ ಪ್ರಾಕಾರ ಮಹಾದ್ವಾರಗಳೂ, ಅವುಗಳ ಒಳಿಯಲ್ಲೂ ಶುಭ್ರವಸ್ತ್ರಧಾರಿಗಳಾದ ದ್ವಾರಪಾಲಕರೂ ಇದ್ದರು. ಅವರ ಮುಖದಲ್ಲಿ ಸೌಮ್ಯಕಳೆಯೂ, ವಿನಯವಿಧೇಯತೆಗಳೂ ತುಂಬಿ ತುಳುಕುತ್ತಿ ದ್ದುವು ಅವರಲ್ಲೊಬ್ಬನು ಕುಚೇಲನನ್ನು ಕಂಡೊಡನೆಯೇ, ನೆಲಮುಟ್ಟಿ

ನಮಸ್ಕಾರಮಾಡಿ, ಕೈಜೋಡಿಸಿಕೊಂಡು, "ಭೂಸುರೋತ್ತಮರೇ! ಶ್ರೀಕೃಷ್ಣಸ್ವಾಮಿಯು, ಲೋಕಮಾತೆಯಾದ ರುಕ್ಮಿಣೀದೇವಿಯೊಂದಿಗೆ ವಾಸಿಸುತ್ತಿರುವ ಅರಮನೆ ಇದು. ಇಲ್ಲಿಗೆ ತಾವು ಬಂದುದರ ಉದ್ದೇಶವೇನು?" ಎಂದು ಪ್ರಶ್ನಿಸಿದನು. ಕುಚೇಲನು ಆ ಸೇವಕನ ನಯನಡತೆಗಳಿಗಾಗಿ ಸಂತೋಷಪಟ್ಟು, "ಆಹಾ, ಪ್ರಭುಗಳ ಬಳಿಯಲ್ಲಿ ಇಂತಹ ಸೇವಕರಿದ್ದರಲ್ಲವೆ, ಅವರ ಸ್ಥಾನ ಬೆಲೆ ಯೋಗ್ಯತೆಗಳ ರಕ್ಷಣೆಯಾಗುವುದು" ಎಂದುಕೊಂಡು, ಅವನನ್ನು ಕುರಿತು,—"ಅಯ್ಯಾ ನಾನು ಶ್ರೀಕೃಷ್ಣದರ್ಶನಕ್ಕಾಗಿಯೇ ಬಂದೆನು ಆತನು ನನ್ನ ಬಾಲ್ಯಸ್ನೇಹಿತನು ನನಗೆ ಕುಚೇಲನೆಂದು ಹೆಸರ ಸುದಾಮನೆಂಬ ನಾಮಾಂತರವೂ ಉಂಟು ನಾನು ದರ್ಶನಾರ್ಥಿಯಾಗಿ ಬಂದಿರುವ ಈ ವೃತ್ತಾಂತವನ್ನು ಆ ಯದುನಾಥನಲ್ಲಿ ತಿಳಿಸಿದರೆ ನನಗೆ ಮಹೋಪಕಾರ ಮಾಡಿದಂತಾಗುವುದು" ಎಂದನು.

ಕುಚೇಲನ ಆ ಮಾತುಗಳನ್ನು ಕೇಳಿದ ಆ ಸೇವಕನು ಪ್ರತಿಮಾತನ್ನಾಡದೆ ಒಳಕ್ಕೆ ನಡೆದು, ಶ್ರೀರುಕ್ಮಿಣೀದೇವಿಯೊಂದಿಗೆ ತೂಗುಮಂಚದಲ್ಲಿ, ಇತರ ಅನೇಕ ಮಂದಿ ಸ್ತ್ರೀಯರು ಸುತ್ತಿಕೊಂಡು ಚಾಮರಾದಿಗಳಿಂದ ಬೀಸುತ್ತಿರಲು, ವಿನೋದದಿಂದ ಕುಳಿತಿದ್ದ ಶ್ರೀಯಾದವೇಂದ್ರನನ್ನು ಕಂಡು ದೂರದಿಂದಲೇ ನಮಸ್ಕರಿಸಿ,—"ಪ್ರಭೋ, ಅವಂತೀಪಟ್ಟಣದಿಂದ ಒಬ್ಬ ವಿಪ್ರೋತ್ತಮನು ಪ್ರಭುದರ್ಶನಕ್ಕಾಗಿ ಬಂದು ದ್ವಾರಪ್ರದೇಶದಲ್ಲಿ ನಿಂತಿದ್ದಾರೆ ಅವರ ಹೆಸರು 'ಕುಚೇಲ' ರಂತೆ! 'ಸುದಾಮ' ರೆಂಬ ನಾಮಾಂತರವೂ ಉಂಟಂತೆ. ಅವರು ತಮ್ಮ ಸಹಾಧ್ಯಾಯಿಗಳಂತೆ! ಈ ಪರಿಚಯವನ್ನು ಹೇಳಬೇಕೆಂದರು" ಎಂದು ನುಡಿದನು. ಆಹಾ! ಶ್ರೀಕೃಷ್ಣನು, ಎಷ್ಟು ಸುಲಭನು! 'ಸಹಾಧ್ಯಾಯಿ-ಸುದಾಮ' ನೆಂಬ ಮಾತು ಕಿವಿಗೆ ಬಿದ್ದೊಡನೆಯೇ, ರುಕ್ಮಿಣಿಯೊಂದಿಗೆ ಕುಳಿತಿದ್ದ ಆ ಉಯ್ಯಾಲೆಯನ್ನು ಬಿಟ್ಟು ಇಳಿದು, "ಎಲ್ಲೈ, ಆ ವಿಪ್ರೋತ್ತಮನನ್ನು ಒಳಕ್ಕೆ ಬಿಡು, ಮಾರ್ಗವನ್ನು ತೋರಿಸು" ಎಂದು ತಾನೇ ಆತನು ಬರುವ ಮಾರ್ಗಕ್ಕೆ ಎದುರಾಗಿ ನಡೆಯತೊಡಗಿದನು. ರುಕ್ಮಿಣಿ ಮುಂತಾದ ಅಂತಃಪುರ ಸ್ತ್ರೀಜನರು, "ಆಹಾ, ಬರುವ ಆ ಮಹಾನುಭಾವನಾರೋ! ನಮ್ಮ ಪ್ರಭುವಿನ ಸಹಪಾಠಿಯಂತೆ!" ಎಂದುಕೊಂಡು ಆತನ ಬರುವಿಕೆಯನ್ನೇ ಎದುರು ನೋಡಿಕೊಂಡಿದ್ದರು. ದೂತನು ಶ್ರೀಕೃಷ್ಣಮೂರ್ತಿಯ ಆ ಆತು

ರವನ್ನು ನೋಡಿ, ಓಡಿ ಹೋಗಿ, "ವಿಪ್ರೋತ್ತಮರೇ, ಸ್ವಾಗತವಾಗಲಿ, ತಮ್ಮ ಪವಿತ್ರನಾಮವು ಕಿವಿಯಲ್ಲಿ ಬಿದ್ದೊಡನೆ ಸಾವಕಾಶವು ರುಕ್ಮಿಣೀಶನು, ಒಡನೆ ತೂಗುಮಂಚದಿಂದಿಳಿದು, ಅಗೋ ತಮ್ಮನ್ನು ಎದುರುಗೊಳ್ಳಲಿಕ್ಕಾಗಿ ನಡೆದು ಬರುತ್ತಿದ್ದಾನೆ. ದಯೆಮಾಡಿಸಿ" ಎಂದು ಮಾರ್ಗತೋರಿಸುತ್ತಾ, ಮುಂದೆ ಮುಂದೆ ನಡೆದನು. ಅಷ್ಟರಲ್ಲಿ ಅರಮನೆಯ ಮಹಾದ್ವಾರಕ್ಕೆ ಬಂದಿದ್ದ ಶ್ರೀಕೃಷ್ಣಮೂರ್ತಿಯೂ ಮೆಟ್ಟಿಲುಗಳನ್ನಿಳಿದು ನಡೆದು ಬಂದು, ವಿಪ್ರೋತ್ತಮನೆಂದು ಆತನ ಪಾದಕ್ಕೆ ಮೊದಲು ವಂದಿಸಿ, ತರುವಾಯ, ಬಾಲ್ಯಸ್ನೇಹವಾತ್ಸಲ್ಯವು ಉಕ್ಕಿ ಬರಲು ಆಲಿಂಗಿಸಿಕೊಂಡು, ಭುಜದಮೇಲೆ ಕೈಹಾಕಿಕೊಂಡು, ಆತನೊಂದಿಗೆ ನಡೆದು, ತಾನು ಕುಳಿತಿದ್ದ ಹಜಾರಕ್ಕೆ ಬಂದನು

ತನ್ನ ಮಿತ್ರನನ್ನು ಕರೆತರಲಿಕ್ಕೆಂದು ನಡೆದ ತಮ್ಮ ರಮಣನು, ಚಿಂದಿವಸ್ತ್ರಗಳಿಂದ ಅರ್ಧ ದೇಹಮಾತ್ರ ಆಚ್ಛಾದಿತವಾಗಿದ್ದು, ಎಲುಬಿನ ವಿಗ್ರಹದಂತೆ ತೋರುತ್ತಿದ್ದ ಯಾವುದೋ ಒಂದು ವ್ಯಕ್ತಿಯನ್ನು ಸಂಗಡ ಕರೆದುಕೊಂಡು ಬಂದುದನ್ನು ಕಂಡು ಅಲ್ಲಿ ನೆರೆದಿದ್ದ ಸ್ತ್ರೀಯರೆಲ್ಲರಿಗೂ ಪರಮಾಶ್ಚರ್ಯವಾಯಿತು. ಅವರಲ್ಲಿ ಅಪ್ರಬುದ್ಧ ಮತಿಗಳಾದ ಕೆಲವರು ಆತನ ಆಕಾರವನ್ನು ನೋಡಿ ನಗುವನ್ನು ತಡೆದುಕೊಳ್ಳುವುದು ಅಸಾಧ್ಯವಾಯಿತು ಆದರೆ, ಮಹಾಮತಿಯಾದ ಶ್ರೀರುಕ್ಮಿಣೀದೇವಿಯು ವಿಚಿತ್ರಚರಿತ್ರನಾದ ಶ್ರೀಕೃಷ್ಣಸ್ವಾಮಿಯ ಅಂತರ್ಬಾಹ್ಯ ಚರ್ಯೆಗಳನ್ನೆಲ್ಲಾ ಅರಿತವಳಾದುದರಿಂದ, ತನ್ನ ಒಂದು ನೋಟದಿಂದ ಅವರ ಆ ಚೇಷ್ಟೆಗಳನ್ನು ಅಡಗಿಸಿದಳು. ಅಷ್ಟರಲ್ಲಿ ಕೃಷ್ಣನೂ ಹಸನ್ಮುಖದಿಂದಲೂ-ಉಪಚಾರೋಕ್ತಿಗಳಿಂದಲೂ ಆ ದ್ವಿಜೋತ್ತಮನನ್ನು ಲಾಲಿಸುತ್ತಾ, ಮೆಲ್ಲಮೆಲ್ಲನೆ ಆತನೊಂದಿಗೆ ನಡೆದು ಬಂದು, ಶ್ರೀರುಕ್ಮಿಣೀದೇವಿಯು ಕುಳಿತಿದ್ದ ಸ್ಥಳದಲ್ಲಿ ಆತನನ್ನು ಕುಳ್ಳಿರಿಸಿ-ಪಕ್ಕದಲ್ಲೇ ಸ್ನೇಹಾಧಿಕ್ಯದಿಂದ ತಾನೂ ಕುಳಿತುಕೊಂಡನು. ಅವಂತಿಯಿಂದ ದ್ವಾರಕೆಯವರೆಗೆ ನಡೆದು ಬಂದು ಆಯಾಸಗೊಂಡನೆಂದು, ಪರಿವಾರದ ಸ್ತ್ರೀಜನರು ದಿವ್ಯಚಾಮರಗಳಿಂದ ಗಾಳಿ ಬೀಸಿದರು ರುಕ್ಮಿಣೀದೇವಿಯು, ಶುದ್ಧಜಲವನ್ನು ತಂದಿಡಲು ಶ್ರೀಕೃಷ್ಣನು, ನಡೆದು ಆಯಾಸಗೊಂಡುವೆಂದು ಆತನ ಪಾದಗಳನ್ನು ತನ್ನ ಕೈಗಳಿಂದಲೇ ತೊಳೆದು, ಅಂಗವಸ್ತ್ರದಿಂದ ಒರೆಸಿದನು. ದಿವ್ಯತರ ವಸ್ತ್ರಗಳನ್ನು ತಂದಿತ್ತು, ತಾನೇ ಉಡಿಸಿದನು

ಮಧುರತರ ಪುಷ್ಪಫಲಗಳನ್ನು ತಟ್ಟಿತಟ್ಟಿಗಳಲ್ಲಿ ತಂದು ಕಾಣಿಕೆಯಾಗಿ ಅರ್ಪಿಸಿದನು



## ಅಧ್ಯಾಯ ೫ "ಮಿತ್ರತ್ವಾನುಭವ"

ಬ್ರಾಹ್ಮಣೋತ್ತಮನಾದ ಕುಚೇಲನು ಸಕಲೈಶ್ವರ್ಯಸಂಪನ್ನನಾದ, ತನ್ನ ಮಿತ್ರನಾದ ಶ್ರೀಕೃಷ್ಣಮೂರ್ತಿಯನ್ನು ಕಣ್ಣಾರೆಕಂಡು ಪರಮಾನಂದ ಭರಿತನಾದನು. ಆ ಪದವಿ, ಆ ಸಂಪತ್ತು, ಆ ಸಾಮ್ರಾಜ್ಯವೈಭವ ಹೀಗೆ ಆ ಅಗಣಿತಸೌಭಾಗ್ಯಗಳಿಗೆ ಒಡೆಯನಾಗಿದ್ದರೂ ಆತನಲ್ಲಿ ಪ್ರಕಟವಾಗುತ್ತಿದ್ದ ನಯ ವಿನಯ ಔದಾರ್ಯಾದಿ ಸದ್ಗುಣಸಂಪತ್ತಿ ಇವುಗಳನ್ನು ಕಂಡು ಕುಚೇಲನಿಗೆ ಪರಮಾಶ್ಚರ್ಯವಾಯಿತು. ದೇವೇಂದ್ರ ವೈಭವವನ್ನು ನಾಚಿಸುವಂತೆ ಇದ್ದ ಆ ಅರಮನೆಯು, ಅಲ್ಲಿಯ ಚಿತ್ರವಿಚಿತ್ರವಾದ ಕಂಭ ಚೌಕಟ್ಟು ಬಾಗಿಲು, ಗೋಡೆ ಮುಂತಾದುವುಗಳ ರಚನೆಯು ಆತನಿಗೆ ಅದ್ಭುತವೆನಿಸಿತು. ತನ್ನನ್ನು ಕರೆದೊಯ್ದು ಕೂಡಿಸಿದ ತೂಗುಮಂಚದಮೇಲೆ ಕುಳಿತು, ರೀತಿ ತನ್ನನ್ನು ಉಪಚರಿಸುವುದರಲ್ಲಿ ತೊಡಗಿದ್ದ ಶ್ರೀಕೃಷ್ಣನನ್ನು ಏನೆಂದು ಮಾತನಾಡಿಸಬೇಕೆಂದು ವಿಚಾರಪರನಾಗಿರುವಷ್ಟರಲ್ಲೇ, ಬೇರೊಂದು ಬಗೆಯ ಸಿದ್ಧತೆಗೆ ಪ್ರಾರಂಭವಾಯಿತು. ಕುಚೇಲನು ತಾನು ಎಂದೂ ಕಣ್ಣಿನಿಂದ ಕಂಡರಿಯುವ ಕಿವಿಯಿಂದ ಕೇಳಿ ಅರಿಯದ ಆಗ ತನಗೆ ನಡೆಯುತ್ತಿದ್ದ ಉಪಚಾರಗಳಿಂದ ಒಂದು ಬಗೆಯ ಭ್ರಾಂತಿಯುಂಟಾಗಿ ಸುಮ್ಮನೆ ಕುಳಿತುಬಿಟ್ಟನು. ಏನುಮಾಡಬೇಕೆಂಬುದು ತೋರದೆ ಏನು ಹೇಳಬೇಕೆಂದು ಬೋಧೆಯಾಗದೆ ಕೇವಲ ಬೊಂಬೆಯಂತೆ ಕುಳಿತಿದ್ದ ಆ ಕುಚೇಲನಿಗೆ, ಸೌಂದರ್ಯರೂಪ ವೈಭವಗಳಿಂದ ಅಪ್ಸರ-ಗಂಧರ್ವಸ್ತ್ರೀಯರನ್ನು ನಾಚಿಸುತ್ತಿದ್ದ ಯೌವನಸ್ತ್ರೀಯರು ಸುತ್ತುವರಿದು ನಿಂತಿದ್ದಾರೆ, ಅವರಲ್ಲಿ ಕೆಲವರು ಚಾಮರಗಳಿಂದ ಬೀಸುತ್ತಿದ್ದಾರೆ, ಮತ್ತೆ ಕೆಲವರು ಮಲ್ಲಿಗೆ, ಜಾಜಿ, ಸಂಪಗೆ, ಸುಗಂಧರಾಜ ಮುಂತಾದ ಪುಷ್ಪಗಳ ಪರಿಮಳದಂತೆ ಸುವಾಸಿತವಾದ ಎಣ್ಣೆಗಳನ್ನು ಆತನ ಅಭ್ಯಂಗನಕ್ಕಾಗಿ ಹಿಡಿದು ನಿಂತಿದ್ದಾರೆ. ಬೇರೆ ಕೆಲವರು ಸುಖೋಷ್ಣವಾದ

ಪರಿಮಳೋದಕವನ್ನು ಸಿದ್ಧಗೊಳಿಸುತ್ತಿದ್ದಾರೆ ಇನ್ನೂ ಕೆಲವರು, ದಿವ್ಯ ದುಕೂಲಗಳು, ಬಹು ಬೆಲೆಯ ಆಭರಣಗಳು ಇವುಗಳನ್ನು ಹಿಡಿದು ನಿಂತಿದ್ದಾರೆ. ಪಾದಗಳನ್ನು ಒತ್ತುತ್ತಾ, ಮಹೇಂದ್ರವಂದಿತನಾದ ಶ್ರೀಕೃಷ್ಣ ಮೂರ್ತಿಯೇ ಕುಳಿತಿದ್ದಾನೆ. ಪರಿಸ್ಥಿತಿಯು ಹೀಗಿರುವಲ್ಲಿ ಸದಾ ಸಂಕೋಚ ಪ್ರಕೃತಿಯು ಕುಚೇಲನು, ಏನು ಹೇಳುವನು? ಮತ್ತೇನು ಮಾಡುವನು? ಅವರು ಏನನ್ನೊ ಹೇಳಲೂ ಮತ್ತೇನು ಮಾಡಲೂ, ತನ್ನ ಮೈಕೈ ಕಾಲುಗಳನ್ನು ಹೇಗೆ ಹಿಡಿದರೆ ಹಾಗೆ ಬಿಡುತ್ತಾ, ಕೇವಲ ಅಸ್ವತಂತ್ರನಂತೆ ಕುಳಿತು ಬಿಟ್ಟಿದ್ದಾನೆ! ಸರ್ವಜ್ಞನಾದ ಕೃಷ್ಣಮೂರ್ತಿಗೆ, ಆತನ ವಿಚಾರವು ಗೋಚರವಾಗದಿರಲಿಲ್ಲ! ಇಂತು-ಅಭ್ಯಂಗನ ನೂತನ ವಸ್ತ್ರಧಾರಣ ಭೋಜನ ಫಲಹಾರ ತಾಂಬೂಲಚರ್ವಣಾದಿಗಳನ್ನೆಲ್ಲಾ ಆತನೊಡಗೂಡಿ ಮುಗಿಸಿಕೊಂಡವನಾಗಿ ತರುವಾಯ ಇಬ್ಬರೂ ಚಂದ್ರಶಾಲೆಗೆ ನಡೆದರು ಅಲ್ಲಿ ಪರಮಸ್ನೇಹದಿಂದ ಏಕಾಸನದಲ್ಲಿ ಕುಳಿತು,—"ಮಿತ್ರವರ್ಯಾ, ಬಹು ದಿನಗಳಿಗೆ ನಿನ್ನ ದರ್ಶನಭಾಗ್ಯವು ಲಭಿಸಿತು. ಕೇವಲ ಮಿತ್ರನು ಮಾತ್ರನಲ್ಲ; ಮಹಾತಪಸ್ವಿಯೂ ಆದ ನಿನ್ನ ಪಾದಧೂಳಿಯು ಬಿದ್ದು ನನ್ನ ಈ ಮನೆಯೂ ಪಾವನವಾಯಿತು ಮಿತ್ರಾ, ಸುದಾಮಾ ನೀನು ಕ್ಷೇಮವಾಗಿರುವೆಯಾ! ನಿನ್ನ ಮನೆಯಲ್ಲಿ ಎಲ್ಲರೂ ಕ್ಷೇಮವೇ? ಪ್ರಿಯತಮಾ, ನಮ್ಮ ವಿದ್ಯಾಭ್ಯಾಸವು ಮುಗಿದು ನಾವು ಬೇರೆಬೇರೆಯಾದ ತರುವಾಯ ಇಷ್ಟು ದಿನಗಳಿಗೆ ಇದೇ ಪ್ರಥಮ ದರ್ಶನವು ನಾನು ಈಚೆಗೆ ಅನೇಕ ಗಲಭೆಗಳಲ್ಲಿ ತಗುಲಿ, ನಿನ್ನನ್ನು ನೋಡಲೂ-ಕೊನೆಗೆ ಜ್ಞಾಪಿಸಿಕೊಳ್ಳಲೂ ಅವಕಾಶವಾಗಲಿಲ್ಲ ಆದರೂ ನೀನು, ನನ್ನ ಮೇಲೆ ಪರಮಾನುಗ್ರಹವಿಟ್ಟು ಬಂದು ದರ್ಶನ ಕೊಟ್ಟದು, ನಿನ್ನ ಔದಾರ್ಯ ಪ್ರಕೃತಿಯನ್ನು ಪ್ರದರ್ಶಿಸುತ್ತಿರುವುದು" ಎಂದು ಮತ್ತೂ ಹತ್ತಿರಕ್ಕೆ ಸರಿದು, ಕೊರಳ ಸುತ್ತಲೂ ಕೈಹಾಕಿಕೊಂಡು, ಧ್ವನಿಯನ್ನು ಕೊಂಚ ತಗ್ಗಿಸಿ—"ಮಿತ್ರವರಾ, ಗುರುಕುಲವಾಸವು ಮುಗಿದ ತರುವಾಯ ಬ್ರಹ್ಮಚರ್ಯ ವ್ರತಸಮಾವರ್ತನವನ್ನು ಮಾಡಿಕೊಂಡು, ನೀನು ಮದುವೆಯಾಗಿ-ಈಗ ಗೃಹಸ್ಥನಾಗಿರುವೆಯಷ್ಟೆ! ನಿನ್ನ ಪತ್ನಿಯು ನಿನಗೆ ಅನುಕೂಲಳಾಗಿರುವಳಷ್ಟೆ! ಏಕೆಂದರೆ, ನೀನೋ ಕೇವಲ ವಿರಕ್ತನು. ಹಣ ಕಾಸು, ಒಡವೆ ವಸ್ತ್ರಗಳಲ್ಲಿ ಮೋಹಗೊಳ್ಳುವವನಲ್ಲ ಯಾವಾಗಲೂ ಕೇವಲ

ಜಪ ತಪ, ಸ್ನಾನ ಸಂಧ್ಯೆ, ಪುರಾಣ ಪಾರಾಯಣಾದಿಗಳಲ್ಲೇ ನಿರತನಾಗಿರ ತಕ್ಕವನು ಲೋಕದಲ್ಲಿ ಸ್ತ್ರೀಯರು, ವಸ್ತ್ರಭೂಷಣಾದಿಗಳಲ್ಲಿ ಪುರುಷರಿಗಿಂತಲೂ ಸ್ವಲ್ಪ ಹೆಚ್ಚಾಗಿಯೇ ಅಭಿಲಾಷೆಯುಳ್ಳವರಾಗಿರುವರು ಅದು ಸ್ವಾಭಾವಿಕವೇ! ಆದರೆ, ಅಂತಹ ಸಂದರ್ಭದಲ್ಲಿ ನಿನ್ನಂತಹ ವಿರಕ್ತರು ಇಲಿ ಗತ್ತರಿಯಲ್ಲಿ ಸಿಕ್ಕಿದ ಇಲಿಯಂತೆ ಸಂಕಟಕ್ಕೆ ಒಳಗಾಗಬೇಕಾಗುವುದು ಆ ದುದರಿಂದ ಕೇಳಿದೆ-ಮಿತ್ರೋತ್ತಮಾ, ನೀನು ಅಂತಹ ಸಂಕಟಕ್ಕೆ ಒಳಗಾಗಿಲ್ಲವಲ್ಲವೆ? ನಿನ್ನ ಪತ್ನಿಯು ವಿನೀತಳಾಗಿ ಸುಮುಖಳಾಗಿ ಸಕಲ ವಿಷಯ ಗಳಲ್ಲೂ ನಿನಗೆ ಅನುಕೂಲಳಾಗಿರುವಳಲ್ಲವೆ? ಅದಿರಲಿ ನಿನಗೆಷ್ಟು ಮಂದಿ ಮಕ್ಕಳು! ಅವರೆಲ್ಲರೂ ಆರೋಗ್ಯವಾಗಿರುವರೇ! ಪ್ರಿಯತಮಾ, ನಿನ್ನನ್ನು ಕಂಡು ನನಗೆ ಮೇಲೆ ಮೇಲೆ ಆನಂದವು ಉಕ್ಕುತ್ತಿರುವುದು. ಸಂಸಾರದಲ್ಲಿ ರುವುದು ತಪ್ಪಲ್ಲ, ಪಾಪವಲ್ಲ! ಆದರೆ ಸಂಸಾರದಲ್ಲಿದ್ದರೂ ವಿವೇಕಿಗಳು ಮಾತ್ರವೇ ಕಾಮಕ್ಕೆ ವಶರಾಗದೆ, ಕ್ರೋಧಕ್ಕೆ ಎಡೆಗೊಡದೆ, ಲೋಭ ಮೋ ಹಗಳನ್ನು ಜಯಿಸಿ, ಮದಮಾತ್ಸರ್ಯಗಳನ್ನು ನೀಗಿ ನಿಶ್ಚಿಂತರಾಗಿ ನಿರ್ಲಿಪ್ತ ರಾಗಿರುವರು ಸಂಸಾರದಲ್ಲಿನ-ವ್ಯವಹಾರದಲ್ಲಿನ ಅವರ ಸಂಬಂಧವು ದೇಹ ಕ್ಕೆ ಎಣ್ಣೆಯನ್ನು ಬಳಿದುಕೊಂಡು ನೀರಲ್ಲಿ ಮುಳುಗಿದವನಂತಿರುವುದು ಆ ದರೆ ಆ ಸ್ಥಿತಿಯು ಸುಲಭವಾಗಿ ಲಭಿಸತಕ್ಕದಲ್ಲ ಗುರುಕುಲವಾಸ ಮಾಡಿ, ಗುರುಹಿರಿಯರಿಗೆ ವಿಧೇಯನಾಗಿದ್ದು ಸದ್ಗುಣಸದಾಚರಣೆಗಳಲ್ಲಿ ಶಿಕ್ಷಿತನಾಗ ದವನಿಗೆ ಅಂತಹ ಸಾಧುಸ್ವಭಾವವು ಏಕಾಏಕಿ ಲಭಿಸದು. ಮಿತ್ರಾ ಗುರು ಕುಲವಾಸವೆಂದೊಡನೆಯೇ ಜ್ಞಾಪಕಕ್ಕೆ ಬಂದಿತು. ವಿದ್ಯಾರ್ಥಿ ದೆಸೆಯ ಆ ..ನ ಆ ಆಟಪಾಟಗಳೆಲ್ಲವೂ ನಿನಗೆ ನೆನಪಿನಲ್ಲಿವೆಯಲ್ಲವೆ! ನಾವು ಮಹಾತ್ಮ ನಾದ ಸಾಂದೀಪನಿ ಗುರುವರ್ಯನ ಆಶ್ರಮದಲ್ಲಿ ವಿದ್ಯಾಭ್ಯಾಸಮಾಡಿಕೊಂಡಿ ದ್ದುದನ್ನು ನೀನು ಮರೆತಿಲ್ಲವಷ್ಟೆ! ಆಗ ಒಂದಾನೊಂದುದಿನ ಗುರುಪತ್ನಿಯು ಕಟ್ಟಿಗೆಯನ್ನು ತರಬೇಕೆಂದು ನಮಗೆ ಹೇಳಲು ನಾನೂ ನೀನೂ ಕಾಡನ್ನು ಪ್ರವೇಶಿಸಿದೆವು ಅಲ್ಲಿ ಇಲ್ಲಿ ಹುಡುಕಿ, ಕಟ್ಟಿಗೆಯನ್ನು ಶೇಖರಿಸಿ, ಹೊರೆಗ ಳನ್ನು ಕಟ್ಟಿ ತಲೆಯಮೇಲಿಟ್ಟುಕೊಂಡು ಹೊರಡಬೇಕೆಂಬಷ್ಟರಲ್ಲಿ ಕಾರ್ಮೋ ಘಗಳು ಸೇರಿ, ಮಳೆಯು ಕುಂಭದ್ರೋಣವಾಗಿ ಸುರಿಯಲಾರಂಭಿಸಿತು. ಆ ..ರ ಹೊಡೆತವನ್ನು ತಪ್ಪಿಸಿಕೊಳ್ಳಲು ಒಂದು ಮರದಡಿಯನ್ನಾಶ್ರಯಿಸಿ ಕು

ಳಿತೆವು. ಅಷ್ಟರಲ್ಲಿ ಕತ್ತಲಾಯಿತು. ಆ ಭಯದಿಂದ ಹೊರಟು, ಮಿಂಚು ಗುಡುಗುಗಳ ಆರ್ಭಟದಲ್ಲೇ ನಡೆದು, ಮಾರ್ಗ ತಪ್ಪಿದೆವು. ಕಾಡಿನಲ್ಲಿ ಎಷ್ಟು ಹೊತ್ತು ಅಲೆದರೂ ದಾರಿ ಸಿಕ್ಕದೆ, ಸುತ್ತಿ ಸುತ್ತಿ ಬೇಸತ್ತು, ಒಂದು ಮರದ ಪೊಟರೆಯನ್ನಾಶ್ರಯಿಸಿ ರಾತ್ರಿಯನ್ನೆಲ್ಲಾ ಕಳೆದು, ಪ್ರಾತಃಕಾಲದಲ್ಲಿ ಪುನಃ ದಾರಿಯನ್ನು ಹುಡುಕಲು ಅಲ್ಲಲ್ಲಿ ಸುತ್ತಾಡುತ್ತಿದ್ದೆವು. ಅತ್ತ ಸಾಂದೀಪನೂ-ಗುರುಪತ್ನಿಯೂ ರಾತ್ರಿ ಎಷ್ಟು ಹೊತ್ತಾದರೂ ನಾವು ಹೋಗದಿದ್ದುದರಿಂದ ಮರುಗಿ "ಅಯ್ಯೋ ಮಕ್ಕಳೆಲ್ಲಿ ಹೋದರೋ" ಎಂದು ಊಟ ಮಾಡದೆ, ನಿದ್ರಿಸದೆ ವ್ಯಸನಪಡುತ್ತಿದ್ದು ಬೆಳಗಾದ ಒಡನೆಯೇ ನಮ್ಮ ಗುರುವೇ ನಮ್ಮನ್ನು ಹುಡುಕಿಕೊಂಡು ಬಂದನು. ಮತ್ತು ನಿದ್ರೆಯಿಲ್ಲದೆ, ಅನ್ನವಿಲ್ಲದೆ, ಮಳೆ ಗಾಳಿ ಚಳಿಗಳಲ್ಲಿ ತೊಂದರೆ ಪಟ್ಟಿದ್ದ ನಮ್ಮನ್ನು ಕಂಡು ಅಕಟಾ, ಮಕ್ಕಳಿರಾ, ಬಹು ಕಷ್ಟಕ್ಕೆ ಸಿಕ್ಕಿ ಬಿದ್ದಿರಲ್ಲಾ! ಪ್ರಾಣಿಗಳಿಗೆ ಎಲ್ಲಾ ಪದಾರ್ಥಗಳಿಗಿಂತಲೂ ದೇಹವೇ ಅತ್ಯಂತ ಪ್ರಿಯತಮವಾದುದು. ಆದಕ್ಕುಂಟಾಗುವ ಬಾಧೆಯನ್ನೂ ಲೆಕ್ಕಿಸದೆ ನೀವು ನಮಗೆ ಪ್ರಿಯವನ್ನುಂಟು ಮಾಡಬೇಕೆಂದು ಇಷ್ಟು ಕಷ್ಟ ಪಟ್ಟಿರಲ್ಲವೆ! ಶಿಷ್ಯೋತ್ತಮರಿರಾ, ನಿಮ್ಮ ಶ್ರದ್ಧಾಪೂರ್ವಕವಾದ ಈ ಗುರುಸೇವೆಯು ನನ್ನನ್ನು ತೃಪ್ತಿಗೊಳಿಸಿತು. ನಿಮ್ಮ ವಿಧೇಯತೆಗಾಗಿ ಈ ದಿನ ಬಹು ಸಂತೋಷಪಟ್ಟೆನು ನಿಮ್ಮ ಅಪೇಕ್ಷೆಗಳೆಲ್ಲವೂ ಸಿದ್ಧಿಸಲಿ! ನೀವು ನನ್ನಲ್ಲಿದ್ದು ಕಲಿತ ವೇದಶಾಸ್ತ್ರಾದಿ ಸಕಲ ವಿದ್ಯೆಗಳೂ, ನಿಮಗೆ ಇಹಪರಗಳೆರಡರಲ್ಲೂ ಶ್ರೇಯಸ್ಸನ್ನುಂಟುಮಾಡುವುವು. ಬಾಲಕರೇ ದೀರ್ಘಾಯುಷಿಗಳಾಗಿರಿ" ಎಂದು ಆಶೀರ್ವದಿಸಿದನು ಮಿತ್ರಾ, ಆಗಿನ ಆ ದಿನಗಳಲ್ಲುಂಟಾದ ಈ ಬಗೆಯ ಇನ್ನೂ ಅನೇಕ ಅನುಭವಗಳನ್ನು ನೀನು ಮರೆತಿಲ್ಲವಷ್ಟೆ! ನೋಡು, ಹಾಗೆ ಗುರುವಿನ ಅನುಗ್ರಹಕ್ಕೆ ಯಾವನು ಪಾತ್ರನಾಗುವನೋ ಅವನು ಮುಕ್ತಿಗೂ ಅರ್ಹನಾಗುವನು. ಒಂದು ರಹಸ್ಯವನ್ನು ಹೇಳುವೆನು ಕೇಳು. ಜ್ಞಾನಿಗಳಾದವರು, ಕರ್ಮಮಾಡುವಿಕೆಯಿಂದ ಪಡೆಯಬಹುದಾದ ಪ್ರತಿಫಲವೇನನ್ನೂ ಕೋರದಿದ್ದರೂ, ನನ್ನಂತೆ ಪರರಿಗೆ ಉದಾಹರಣೆಗಾಗಿ-ಲೋಕಕ್ಕೆ ದಾರಿಯನ್ನು ತೋರಿಸಿಕೊಡುವುದಕ್ಕಾಗಿ ಮಾತ್ರ ಕರ್ಮನಿರತರಾಗಿರುವರು. ಮಿತ್ರೋತ್ತಮಾ, ನಾವು ನಾವು ಕಂಡು ಬಹುದಿನಗಳಾದರೂ, ಗುರುವಿನ ಅನುಗ್ರಹಕ್ಕೆ ಪಾತ್ರನಾದ

ನೀನೂ, ನನ್ನಂತೆಯೇ ಲೋಕಶಿಕ್ಷಣೆಗಾಗಿಯೇ ಸಂಸಾರಿಯಾಗಿ ಕರ್ಮನಿರತನಾಗಿ ಆದರೂ ಯಾವುದರ ಬಂಧನಕ್ಕೂ ಸಿಕ್ಕದೆ ಇರತಕ್ಕುದು ನನಗೆ ಬಹು ಸಂತೋಷವನ್ನುಂಟುಮಾಡುತ್ತಿದೆ. ವಿರಕ್ತನೆಂಬ ದಂಭಕ್ಕೆ ಒಳಗಾಗಿ ಲೋಕಕ್ಕೆ ಹೆದರಿ, ಎಲ್ಲವನ್ನೂ ಬಿಟ್ಟು ಓಡುವ ಹೇಡಿಗಿಂತಲೂ, ಲೋಕಕದಲ್ಲಿದ್ದು ಯಾವುದರಿಂದಲೂ ಬಂಧಿತನಾಗದೆ ಕಾಮಕ್ರೋಧಾದಿಗಳನ್ನು ಜಯಿಸಿ, ನಿರ್ಲಿಪ್ತನಾಗಿರುವ ಸಂಸಾರಿಯೇ ನನಗೆ ಪ್ರಿಯತಮನು'' ಎಂದು ನುಡಿದನು

ಸರ್ವಲೋಕಾಧಿಪನಾದ ಶ್ರೀಕೃಷ್ಣನು ಯಾರ ಲಕ್ಷ್ಯಕ್ಕೂ ಪಾತ್ರನಾಗದಷ್ಟು ನಿರ್ಗತಿಕನಾದ ಆ ಬ್ರಾಹ್ಮಣನನ್ನು ಅಷ್ಟು ಮಟ್ಟಿಗೆ ಸೇವೆ ಮಾಡುತ್ತಾ ಉಪಚರಿಸುತ್ತಿದ್ದುದು, ಸುತ್ತಲೂ ನೆರೆದಿದ್ದ ಸ್ತ್ರೀಯರಿಗೆ ಪರಮಾಶ್ಚರ್ಯವನ್ನುಂಟುಮಾಡಿತು. ಅವರು ''ಆಹಾ, ನಮ್ಮ ನಮ್ಮ ಪ್ರಭುವಿನ ವಿಚಿತ್ರ ಚರಿತ್ರೆಯು! ಬ್ರಹ್ಮೇಂದ್ರಾದಿ ದೇವರ್ಕಳ ವಂದನೆಗೆ ಪಾತ್ರನಾದ ಇವನು ಆ ತಿರುಕ ಹಾರುವನಿಗೆ ಪಾದಾಕ್ರಾಂತನಾಗಿ ಸೇವಿಸುತ್ತಿರುವನಲ್ಲಾ! ಇದರ ರಹಸ್ಯವು ಏನಿದ್ದೀತು! ಭಗವಂತನು ಭಕ್ತಪರಾಧೀನನು ಭಕ್ತವತ್ಸಲನು ಎಂಬುದನ್ನು ಈ ದಿನ ಕಂಡೆವು. ಮತ್ತೊಂದನ್ನು ಕೋರದೆ, ಅನನ್ಯ ಶರಣರಾಗಿ ತನ್ನನ್ನೇ ಆಶ್ರಯಿಸಿದವರಿಗೆ ತನ್ನನ್ನೇ ಆದರೂ ತೆತ್ತುಬಿಡುವನೆಂಬ ಹೇಳಿಕೆಗೆ ಉದಾಹರಣೆಯನ್ನು ಇಂದು ಕಂಡೆವು ಬಡಬ್ರಾಹ್ಮಣನಾದ ಈತನಾದರೂ ಪೂರ್ವಜನ್ಮದಲ್ಲಿ ಏನು ಪುಣ್ಯ ಮಾಡಿದ್ದನೋ! ಹಾಗಿಲ್ಲದಿದ್ದರೆ, ಸಾಕ್ಷಾಲ್ಲಕ್ಷ್ಮೀರಮಣನೇ ಸ್ವಹಸ್ತಗಳಿಂದ ಪಾದಗಳನ್ನು ಹಿಡಿದು ಸೇವಿಸುವ ಭಾಗ್ಯವು ಲಭಿಸುವುದೆಂದರೇನು! ಧನ್ಯಧನ್ಯ ವಿಪ್ರವರಾ!'' ಎಂದು ಆಶ್ಚರ್ಯ ಸಮುದ್ರದಲ್ಲಿ ಮುಳುಗಿದ್ದರು.—

ಹೀಗೆ ಎಲ್ಲಾ ಬಗೆಯ ಉಪಚಾರಗಳೂ ಮುಗಿದು, ಶ್ರೀಕೃಷ್ಣನೂ ತನ್ನ ನಾತಿಗೆ ಮುಕ್ತಾಯವನ್ನು ಕೊಟ್ಟ ತರುವಾಯ, ಕುಚೇಲನು, ಕುಗ್ಗಿ ನಾಭೀಕಳನನ್ನು ಸೇರಿಹೋಗಿದ್ದ ತನ್ನ ಧ್ವನಿಯನ್ನು ಸರಿಗೂಳಿಸಿಕೊಂಡು ಬಾಯ್ದೆರೆದನು. ''ಓ ದೇವದೇವೇಶಾ, ದೇವತಾಸಾರ್ವಭೌಮಾ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನಾದ ನೀನು, ಏತಕ್ಕಾಗಿ, ಈ ಲೀಲೆಗಳನ್ನು ಮಾಡುತ್ತಿರುವೆಯೋ, ಇವುಗಳಿಗೆ ಏನರ್ಥವೋ ಕಂಡವರಾರು! ನಿರ್ಗತಿಕನಾದ ನಾನೆಲ್ಲಿ? ರಮಾಧವನಾದ ನೀನೆಲ್ಲಿ? ನನ್ನನ್ನು ಆಗನಿಂದಲೂ, ಪತ್ನೀಪರ

ಚಾರಯುಕ್ತನಾಗಿ ಇಷ್ಟು ಬಗೆಯಿಂದ ಉಪಚರಿಸುತ್ತಿರುವೆಯಲ್ಲಾ! ಇದು ನಿನಗೇ ತಕ್ಕದಾಗಿದೆ. ಬಾಲ್ಯದಲ್ಲಿ ಜೊತೆಗೆ ಓದುತ್ತಿದ್ದುದಷ್ಟಲ್ಲದೆ ದಾರಿದ್ರ್ಯದೇವಿಯ ಪ್ರೇಮಪುತ್ರನಾದ ನನ್ನಿಂದ ಶ್ರೀಭೂದೇವಿಗಳಿಗೊಡೆಯನಾದ ನಿನಗಾಗಿರುವ ಪ್ರಯೋಜನವಾದರೂ ಏನು? ಆದರೂ ಇದೇನೀ ಅವ್ಯಾಜಪ್ರೇಮಭಾವವು, ಶ್ರೀಕೃಷ್ಣಾ ಇಂತಹ ಸೌಜನ್ಯಸಾಗರನಾದುದರಿಂದಲೇ ನೀನು ಜಗತ್ತನ್ನೇ ಏಕಚ್ಛತ್ರ ಪಾಲನೆಗೊಳಪಟ್ಟಂತೆ ಸ್ವಾಧೀನಗೊಂಡು, ಮುಕುಟಾಭಿಷಿಕ್ತರಾದ ಅಶೇಷರಾಜವೃಂದದಿಂದ ಸೇವಿಸಲ್ಪಡುತ್ತಿರುವೆ? ನಿನ್ನ ಒಂದೊಂದು ವರ್ತನೆಯೂ ವಿಚಿತ್ರವಾಗಿದೆ. ಸಕಲ ಲೋಕಗುರುವಾದ ನೀನೂ ಗುರುಕುಲವಾಸವಾಡಿ, ನರಮಾತ್ರನಂತೆ ಗುರುಸೇವೆಮಾಡುವುದೆಂದರೇನು? ಪ್ರಭೋ ಕೃಷ್ಣಮೂರ್ತೀ, ಕೃತಾರ್ಥನಾದೆನು. ನನ್ನ ಸಕಲ ಕೋರಿಕೆಗಳೂ ಫಲಿಸಿದುವು ಸಕಲ ಲೋಕೇಶ್ವರನಾದ ಅವ್ಯಾಜ ದಯಾಪರನಾದ ನಿನ್ನ ಸ್ನೇಹವೊಂದಿರುವಲ್ಲಿ ನನಗೆ ಯಾವುದಕ್ಕೇನು ಕೊರತೆಯಿದ್ದೀತು! ನನ್ನ ಸಮಸ್ತ ಇಷ್ಟಾರ್ಥಗಳೂ ಫಲಿಸಿದುವು ಮೋಕ್ಷಾಧೀಶ, ನನಗೆ ಮತ್ತೇನೂ ಅವಶ್ಯವಿಲ್ಲ, ಮೋಕ್ಷಸುಖವನ್ನು ಕರುಣಿಸು" ಎಂದನು.—

ಕುಚೇಲನು ಆ ಮಾತನ್ನು ಕೇಳಿ, ಶ್ರೀಕೃಷ್ಣನು, ಕ್ರಹೊಯ್ಯು ನಕ್ಕು— ಮಿತ್ರಾ ಒಳ್ಳೆಯ ಮಾತನ್ನಾಡಿದೆ, ನಾನು ಮೋಕ್ಷಾಧೀಶನೋ, ನಿನಗೆ ಮುಕ್ತಿಯನ್ನು ಕರುಣಿಸಬೇಕೋ! ಅದಕ್ಕೇನು ಆಗಲಿ! ಅದಿರಲಿ, ಇಷ್ಟು ದಿನಗಳ ಮೇಲೆ ಅವಂತಿಯಿಂದ ಇಲ್ಲಿಗೆ ಬಂದೆಯಲ್ಲ, ಎಲೆ ಪ್ರೇಮದ ಗೆಳೆಯನಿಗೆಂದು ಏನು ತಿಂಡಿಯನ್ನು ತಂದಿರುವೆ? ನಮ್ಮತ್ತಿಗೆಯು ನನಗೆಂದು ಏನು ಕಳುಹಿಸಿದ್ದಾಳೆ? ಎಲ್ಲಿ ತೆಗೆ" ಎಂದನು. ಕುಚೇಲನಿಗೆ ಬಹು ಕಷ್ಟಕ್ಕೆ ಬಂತು! ಅಲ್ಲಿ ಅಷ್ಟು ಬಗೆಯ ಉಪಚಾರಗಳನ್ನು ಹೊಂದಿದ ತಾನು ಕೇವಲ ತಾನು ತಂದಿದ್ದ ಮೂರು ಹಿಡಿ ಒಣಕಲು ಅವಲಕ್ಕಿಯನ್ನು ಆ ಲೋಕೇಶ್ವರನಿಗೆ ಏನೆಂದು ಅರ್ಪಿಸುವನು! ಮಹಾ ಚತುರೆಯರಾದ ಅಲ್ಲಿ ನೆರೆದ ಅಷ್ಟು ಮಂದಿ ಸ್ತ್ರೀಯರೆದುರಿಗೆ ತನ್ನಾ ದುರ್ದೈವಿ ವಸ್ತ್ರದ ಗಂಟಿನಲ್ಲಡಗಿದ್ದ ಅದನ್ನು ಹೊರಕ್ಕೆ ತೆಗೆಯುವುದಕ್ಕೆ ಸಹ ಆತನಿಗೆ ಮಹಾ ನಾಚಿಕೆಯಾಯಿತು ಶ್ರೀಕೃಷ್ಣನು ಸರ್ವಜ್ಞನಲ್ಲವೆ? ಅದೂ ಅವನಿಗೆ ಗೋಚರವಾಗದಿರಲಿಲ್ಲ. ಆಹಾ ಈ ವಿಪ್ರನು ಎಷ್ಟು ದಾಕ್ಷಿಣ್ಯಪ್ರಕೃತಿಯವನು! ಅಲ್ಲದೆ ಎಂತಹ ವಿರಕ್ತಶ್ರೇ

ಷ್ಠನು. ಅಷ್ಟು ದಾರಿದ್ರ್ಯದುಃಖದಿಂದ ಬೇಯುತ್ತಿದ್ದರೂ, ಪರಮಪ್ರೀತ್ಯಾಸ್ಪದನಾದ ನನ್ನಲ್ಲಿಗೆ ಬಂದಿದ್ದರೂ ಏನೊಂದನ್ನು ಅಪೇಕ್ಷಿಸದೆ ಕೇವಲ ನಿಸ್ಪೃಹನಾಗಿರುವನಲ್ಲಾ! ಈತನು ತನ್ನಾ ಧರ್ಮಪತ್ನಿಯ ಮನಸ್ಸನ್ನು ಸಂತೋಷಗೊಳಿಸಲಿಕ್ಕಾಗಿಯೇ ನನ್ನಲ್ಲಿಗೆ ಬಂದಿರುವುದು. ಕೊನೆಗೂ ಏನನ್ನೂ ಕೇಳಿಕೊಳ್ಳಲಾರನು! ಆದರೂ ನಾನು ಈತನಿಗೆ ಅಕ್ಷಯಸೌಭಾಗ್ಯವನ್ನು ಕೊಡುವೆನು'' ಎಂದುಕೊಂಡು, ಪುನಃ ''ಮಿತ್ರಾ ಎಲ್ಲಿ ಏನು ತಂದಿರುವೆ'' ಎಂದು ಮೈಯನ್ನೆಲ್ಲಾ ಹುಡುಕತೊಡಗಿದನು ಕೊನೆಗೆ ಆ ಗಂಟು ಸಿಕ್ಕಿತು. ಅದನ್ನು ಬಿಚ್ಚಿ ಹರುಕುಗಳಿಂದ ದಾರಿಯಲ್ಲಿ ಸೋರಿಹೋಗಿ ಮಿಕ್ಕ ಆ ಅವಲಕ್ಕಿಯಲ್ಲಿ ಒಂದು ಮುಷ್ಟಿಯನ್ನು ಕೈಯಲ್ಲಿ ತೆಗೆದುಕೊಂಡು, ''ಮಿತ್ರವರಾ, ನನಗೆ ಬೇಕಾದುದು ಧನಕನಕ ಸೌಭಾಗ್ಯಗಳಲ್ಲ! ಸ್ನೇಹ-ಪ್ರೇಮ-ಪ್ರೀತಿ-ಭಕ್ತಿ, ಮಾತ್ರವೇ ನನಗೆ ಬೇಕಾದುದು. ಆದಿಲ್ಲದವರು ದಂಭಕ್ಕಾಗಿ ಕನಕಪರ್ವವನ್ನೇ ಒಪ್ಪಿಸಿದರೂ ನಾನು ಅದನ್ನು ಸ್ವೀಕರಿಸಲಾರೆನು. ಭಕ್ತರು ಪ್ರೇಮಪುರಸ್ಸರವಾಗಿ ಒಂದು ಎಲೆ, ಹಣ್ಣು, ಹೂವು, ಏನೂ ಇಲ್ಲದಿದ್ದರೂ ಕೊನೆಗೆ ಸ್ವಲ್ಪ ನೀರು, ಅಷ್ಟನ್ನು ಕೊಟ್ಟರೂ, ಲಕ್ಷ್ಮೀದೇವಿಯು ಕೈಯಿಂದ ಉಣ್ಣಿಸುವ ಮೃಷ್ಟಾನ್ನವೋ ಎಂಬಂತೆ ಅದನ್ನು ಪರಮಾದರದಿಂದ ಸ್ವೀಕರಿಸುವೆನು ಮಿತ್ರಾ, ಈ ಅವಲಕ್ಕಿಯು ಬರಿಯ ಒಣಕಾಳುಗಳಲ್ಲ' ಇದು ಮಿತ್ರತ್ವವೆಂಬ ರಸಾಯನದಲ್ಲಿ ಕಲೆತು, ಉಪಮಾನರಹಿತವಾದ ರುಚಿಯಿಂದ ಕೂಡಿದೆ ಇದನ್ನು ಅನುಭವಿಸುವ ಭಾಗ್ಯವಾದರೂ ನನಗೆ ಲಭಿಸಿತಲ್ಲವೆ? ಅದು ಸುಕೃತ ವಿಶೇಷವು'' ಎಂದು ಒಂದು ಹಿಡಿಯನ್ನು ತೆಗೆದು ಥಟ್ಟನೆ ಬಾಯಿಗೆ ಹಾಕಿಕೊಂಡನು. ಮತ್ತೊಂದು ಹಿಡಿಯನ್ನು ಕೈಯಿಂದೆತ್ತಿಕೊಂಡನು ಅಷ್ಟರಲ್ಲಿ ಶ್ರೀರುಕ್ಮಿಣೀದೇವಿಯು ಓಡಿಬಂದು, ತನ್ನ ರಮಣನ ಕೈಯನ್ನು ಹಿಡಿದುಕೊಂಡು—''ಪ್ರಾಣನಾಥಾ ಸಾಕು, ಸರ್ವಲೋಕೇಶ್ವರನಾದ ನೀನು ಮೊದಲು ತಿಂದ ಒಂದು ಹಿಡಿ ಅವಲಕ್ಕಿಯೇ ಈ ವಿಪ್ರೋತ್ತಮನಿಗೆ ಇಹ-ಪರ ಲೋಕಗಳೆರಡರಲ್ಲೂ ಅನುಭವಿಸಬಹುದಾದ ಸಕಲ ವಿಧ ಸಂಪತ್ತುಗಳನ್ನೂ ಒದಗಿಸಲು ಸಾಕಾಗಿರುವುದು. ಇನ್ನೊಂದು ಹಿಡಿಯನ್ನೂ ತಿಂದು, ಏನು ನಿನ್ನನ್ನೂ ನಮ್ಮೆಲ್ಲರನ್ನೂ ಆತನಿಗೆ ದಾಸರಾಗಿ ಒಪ್ಪಿಸಿಕೊಡಬೇಕೆಂದಿರುವೆಯಾ?'' ಎಂದು ತಡೆದಳು.

ತರುವಾಯ ರಾತ್ರಿ ಬಹು ಹೊತ್ತಾಗಿದ್ದುದರಿಂದ ಶ್ರೀಕೃಷ್ಣನು ತನ್ನ ಮಿತ್ರನಿಗೆ ಇನ್ನು ವಿಶ್ರಮಿಸಿಕೊಳ್ಳೆಂದನು. ದಿವ್ಯತರವಾದ ಶ್ರೀಗಂಧದ ಮಂಚದಮೇಲೆ ಹಂಸಪಕ್ಷಿಗಳ ಪುಡಿ ರೆಕ್ಕೆಗಳಿಂದ ಮಾಡಿದ ಶ್ರೇಷ್ಠವಾದ ಹಾಸಿಗೆಯನ್ನು ದಾದಿಯರು ಸಿದ್ಧಗೊಳಿಸಿ, ಆತನನ್ನು ಅಲ್ಲಿಗೆ ಕರೆದೊಯ್ದು ಬಿಟ್ಟರು! ಶ್ರೀಕೃಷ್ಣನೂ ಆತನ ಅನುಮತಿಯನ್ನು ಪಡೆದು ಶಯನಗೃಹಾಭಿಮುಖನಾದನು. ಕುಚೇಲನು ರಾಜಾಧಿರಾಜರಿಗೂ ಅಲಭ್ಯವಾದ ಶ್ರೀಕೃಷ್ಣ ದರ್ಶನವು ತನಗೆ ಅನಾಯಾಸವಾಗಿ ದೊರಕಿದುದಕ್ಕಾಗಿಯೂ, ಆ ದಿನ ತಾನು ಅನುಭವಿಸಿದ ಸುಖಸೌಭಾಗ್ಯಗಳಿಗಾಗಿಯೂ, ಮನಸ್ಸಿನಲ್ಲೇ ಪರಮಾನಂದ ಪಟ್ಟುಕೊಂಡು, ತಾನು ದೇವೇಂದ್ರ ಭೋಗಗಳನ್ನು ಅನುಭವಿಸುತ್ತಿದ್ದೇನೋ ಎಂದುಕೊಂಡನು. ಆತನು ಮಂಚದಮೇಲೆ ಮಲಗಿರಲು, ಎಡಬಲ ಪಕ್ಕಗಳಲ್ಲಿದ್ದ ಪುತ್ಥಳಿಗಳು ಚಾಮರಗಳನ್ನು ಬೀಸುತ್ತಿದ್ದುವು. ಆ ಮನೆಯಲ್ಲಿನ ವಾಯುವು ದಿವ್ಯಪರಿಮಳಯುಕ್ತವಾಗಿ ತಂಪಾಗಿದ್ದಿತು ದೂರಪ್ರಯಾಣವನ್ನು ನಡೆದು ಬಂದುದರಿಂದಲೂ, ಅಷ್ಟು ಹೊತ್ತು ನಿದ್ರೆಗೆಟ್ಟುದರಿಂದಲೂ ಆಯಾಸಗೊಂಡಿದ್ದ ವಿಪ್ರನಿಗೆ ಬಹು ಶೀಘ್ರವಾಗಿಯೇ ನಿದ್ರೆ ಬಂದಿತು.



## ಅಧ್ಯಾಯ ೬ "ದಾರಿದ್ರ್ಯದಿಂದ–ಸೌಭಾಗ್ಯಕ್ಕೆ"

ಮಾರನೆಯ ಪ್ರಾತಃಕಾಲವಾಯಿತು ಅರಮನೆಯಲ್ಲಿ ಭೇರಿ ದುಂದುಭಿ ಮಂಗಳವಾದ್ಯಗಳಾಗತೊಡಗಿದುವು ವಿಪ್ರೋತ್ತಮನಾದ ಕುಚೇಲನೂ ಎದ್ದು ಸ್ನಾನಾಹ್ನಿಕಗಳನ್ನು ತೀರಿಸಿಕೊಂಡನು ಅಷ್ಟರಲ್ಲಿ ನಿತ್ಯಕರ್ಮಗಳನ್ನು ನೆರವೇರಿಸಿ ಸಿದ್ಧನಾಗಿದ್ದ ಕೃಷ್ಣಸ್ವಾಮಿಯು ಆತನಲ್ಲಿಗೆ ಬಂದು—"ಮಿತ್ರೋತ್ತಮಾ, ಬಹುದಿನಗಳಿಗೆ ದೊರೆತ ಅಮೌಲ್ಯವಾದ ನಿನ್ನ ದರ್ಶನಸಂಭಾಷಣೆಗಳಿಂದ ನಾನು ಪರಮಹರ್ಷಿತನಾದೆನು ಊರಲ್ಲಿ ನಿನ್ನ ಪತ್ನೀಪುತ್ರಾದಿಗಳು, ನಿನ್ನ ಬರುವಿಕೆಗಾಗಿ ಎದುರುನೋಡುತ್ತಿರಬಹುದು. ಇನ್ನು ದಯಮಾಡಿಸು. ನಿನಗೆ ಮಂಗಳವಾಗಲಿ" ಎಂದು ನುಡಿದು ಆತನೊಂದಿಗೆ ಅರಮನೆಯ ಹೆಬ್ಬಾಗಿಲಿನವರೆಗೂ ನಡೆದು ಬಂದು ಬೀಳ್ಕೊಂಡನು.

ಕುಚೇಲನು ತಿರುವಾಯ ಏಕಾಂಗಿಯಾಗಿ ರಾಜಬೀದಿಗಳನ್ನೂ ಕೋಟೆ ಕೊತ್ತಲುಗಳನ್ನೂ ದಾಟಿ, ಮುಂದೆ ಮುಂದೆ ನಡೆದನು. ತನ್ನ ಪತ್ನಿಯ ಅಪೇಕ್ಷೆಯಂತೆ ಸಂಪತ್ತನ್ನು ಯಾಚಿಸಲು ಬಂದ ಕುಚೇಲನ ಶ್ರೀಕೃಷ್ಣದರ್ಶನವು ಇಂತಾಯಿತಷ್ಟೆ! ಮಹಾದಾಕ್ಷಿಣ್ಯ ಪ್ರಕೃತಿಯ ಕುಚೇಲನು—"ನನಗೆ ಇಂತಹ ವಸ್ತು, ಧನ-ಕನಕಗಳನ್ನು ಕೊಡು" ಎಂದು ಕೃಷ್ಣನನ್ನು ಯಾಚಿಸಲಿಲ್ಲ. ಶ್ರೀಕೃಷ್ಣನಾದರೂ, "ಬ್ರಾಹ್ಮಣಾ, ನಿನ್ನ ವಿಚಾರವೇನು? ಸ್ಥಿತಿಗತಿಗಳೇನು? ನಿನಗೇನು ಬೇಕು!" ಎಂದು ಪ್ರಶ್ನಿಸಲಿಲ್ಲ. ಹೀಗಾಗಿ ಕುಚೇಲನು ಹೇಗೆ ಬಂದಿದ್ದನೋ, ಹಾಗೇ ಬರಿಗೈಯಿಂದಲೇ ಹೊರಟು ನಡೆದನು. ಆದರೂ ಆತನಿಗೆ ಮನಸ್ಸಿನಲ್ಲಿ ಅತೃಪ್ತಿ ಅಶಾಂತತೆಗಳುಂಟಾಗಲಿಲ್ಲ. "ಆಹಾ ಶ್ರೀಕೃಷ್ಣನು ಎಂತಹ ದಯಾಸಮುದ್ರನು! ಲಕ್ಷ್ಮೀನಾಥನೂ ದೇವಾಧಿಪನೂ ಆಗಿದ್ದರೂ ಅದೆಂತಹ ವಿನೀತಭಾವ! ಅದೆಂತಹ ಮಾನಮರ್ಯಾದೆಗಳು! ಅದಾವ ಬಗೆಯ ಸ್ನೇಹ ವಾತ್ಸಲ್ಯಗಳು! ತನ್ನ ಪಾದಗಳಿಗೆ, ಲೋಕದ ಸಕಲ ರಾಜರುಗಳೂ ತಮ್ಮ ಮಕುಟಗಳನ್ನು ನೀಡುತ್ತಿರುವಲ್ಲಿ, ಪೂಜ್ಯನಾದ ಲೋಕಗುರುವಾದ ತಾನು, ಬಡಬ್ರಾಹ್ಮಣನಾದ ನನ್ನ ಪಾದಗಳನ್ನು ಹಿಡಿದು ಕುಳಿತಿದ್ದನಲ್ಲಾ! ಸಾಕ್ಷಾಲ್ಲಕ್ಷ್ಮಿಯಾದ ಶ್ರೀರುಕ್ಮಿಣೀದೇವಿಯೇ ನನಗೆ ಚಾಮರವನ್ನು ಬೀಸಿ ಉಪಚರಿಸಿದಳಲ್ಲಾ! ಇದೇನೀ ಸೌಜನ್ಯವು! ಆಹಾ! ಆದರೆ ನಾನು ಬಂದ ಕೆಲಸವೇನು? ನನ್ನ ಧರ್ಮಪತ್ನಿಯ ಅಪೇಕ್ಷೆಯಿದ್ದುದೇನು? ಈಗ ನಾನು ಬರಿಗೈಯಿಂದ ಹೋದರೆ, ಆಕೆಯೂ ಬಾಲಕರೂ ಏನೆಂದು ತಿಳಿಯುವರು! ಏನು? ಸರ್ವಜ್ಞನಾದ ಶ್ರೀಕೃಷ್ಣಸ್ವಾಮಿಗೆ ನಮ್ಮ ಸ್ಥಿತಿಯು ಗೋಚರವಿರಲಿಲ್ಲವೆ? ಅಥವ ಗೋಚರವಿದ್ದರೂ, ಕೇವಲ ದರ್ಶನಮಾತ್ರದಿಂದಲೇ-ಇಚ್ಛಾಮಾತ್ರದಿಂದಲೇ, ಇಹಲೋಕದ ಐಶ್ವರ್ಯಮಾತ್ರವಲ್ಲ-ಇಂದ್ರಪದವಿ ಬ್ರಹ್ಮಪದವಿಗಳನ್ನಾದರೂ ಕೊಡಲು ಶಕ್ತನಾದ ಆ ಸರ್ವೇಶ್ವರನು, ನನಗೇಕೆ ಒಂದು ಕುರುಡು ಕವಡೆಯನ್ನೂ ಕೊಡಿಸದೆ ಬರೀ ಮಾತುಗಳಲ್ಲೇ-ಬಾಯುಪಚಾರಗಳಲ್ಲೇ ಕಳುಹಿಸಿಬಿಟ್ಟನಲ್ಲಾ! ಏಕಿರಬಹುದು?" ಎಂದು ಸ್ವಲ್ಪ ಹೊತ್ತು ತಡೆದು,—"ಓಹೋ ಹೀಗಿದ್ದೀತು! ಹಣಹೊನ್ನುಗಳು ಮನುಷ್ಯನ ಮನಸ್ಸನ್ನು ಕೆಡಿಸುವ ಸಾಧನಗಳು! ಅವುಗಳೇ ಕಾಮಕ್ರೋಧಾದಿಗಳನ್ನು ಉದ್ಭವಗೊಳಿಸಿ ನರಕಕಾರಣಗಳಾಗುವುವು. ಈವರೆಗೂ ನಿಶ್ಚಿಂತ

ನಾಗಿದ್ದ ಈ ಹಾರುವನು ಹಣಹೊನ್ನುಗಳ ಕೋಟಲೆಗೆಸಿಕ್ಕಿ ಕೆಟ್ಟುಹೋಗು ವನು, ಎಂದು ತಿಳಿದು ನನ್ನ ಶ್ರೇಯಸ್ಸನ್ನೇ ಕೋರಿ, ನನ್ನನ್ನು ನಿರ್ಧನನ ನ್ನಾಗಿ ಇರಿಸಲು ಇಷ್ಟಪಟ್ಟಿರಬಹುದು! ಹೌದು, ಹಾಗೇ ಸರಿ!'' ಎಂದು ನಿರ್ಧರಿಸಿ, ಶ್ರೀಕೃಷ್ಣನ ಭಕ್ತಜನಾದರಣೆಗಾಗಿ ಮೇಲೆ ಮೇಲೆ ಪರಮಸಂ ತೋಷಪಡುತ್ತಾ, ಆತನ ದರ್ಶನ ಮಾಡಿದ ತನ್ನ ಪ್ರಾಪ್ತಿಗಾಗಿ ಹೆಮ್ಮೆಪಡು ತ್ತಾ. ಸಂತುಷ್ಟಮಾನಸನಾಗಿ ಅವಂತಿಯ ಕಡೆಗೆ ಪ್ರಯಾಣಮಾಡಿದನು

ಮಾರ್ಗವು ಬಹು ಶೀಘ್ರವಾಗಿಯೇ ಸಾಗಿದಂತೆ ತೋರಿತು! ಅವಂತಿ ಯ ಹೊರಪಳಯದಲ್ಲಿದ್ದ ಕೆರೆಕೊಳಗಗಳೂ, ತೋಪುತೋಟಗಳೂ ಕಾಣಿಸ ತೊಡಗಿದುವು. ''ಇದೇನು, ಎಷ್ಟು ಜಾಗ್ರತೆಯಾಗಿ ನಮ್ಮ ಊರಿಗೆ ಬಂದು ಬಿಟ್ಟೆನಲ್ಲಾ!'' ಎಂದುಕೊಂಡನು. ಆದರೆ ಅವುಗಳನ್ನು ದಾಟಿ ಮುಂದೆ ಬಂ ದೊಡನೆಯೇ, ಹಿಂದೆ ತನ್ನ ಮುರುಕುಮನೆಯೂ, ಅದರ ಒಡಬಲದ ಪಾ ಳುಪ್ರದೇಶಗಳೂ, ಮುಳ್ಳುಕಂಟಿಗಳೂ, ಹಾವಿನಹುತ್ತಗಳೂ, ತಿಪ್ಪೆಗಳೂ ಒಂದೂ ಇಲ್ಲದ, ಅಲ್ಲೊಂದು ಮಹಾಸೌಧವು ಇದ್ದುದನ್ನು ಕುಚೇಲನು ಕಂಡನು. ಅದರ ಸುತ್ತಲೂ ವಿವಿಧ ಹೂಗಿಡಗಳ ಉದ್ಯಾನವೂ, ಕಾರಂಜಿ ಗಳೂ, ಕೃತಕಪರ್ವತಗಳೂ ಮನೋಹರವಾಗಿ ಕಾಣಿಸಿದುವು! ನೋಡಿ, ಕುಚೇಲನಿಗೆ ಪರಮಾಶ್ಚರ್ಯವಾಯಿತು. ''ಇದೇನಿದು, ಈ ನೂತನಗೃಹ ವು ಎಲ್ಲಿಂದ ಬಂದಿತು?'' ಎಂದುಕೊಂಡು ಆಶ್ಚರ್ಯಮಗ್ನನಾಗಿರುವಷ್ಟರಲ್ಲೇ ಆ ಮನೆಯಿಂದ ತಾರಾಗಣದಿಂದ ಸುತ್ತಲ್ಪಟ್ಟ ಅರುಂಧತಿಯೋ ಎನ್ನುವಂತೆ, ದಿವ್ಯವಸ್ತ್ರಾಭರಣಭೂಷಿತರಾದ ದಾಸಿಯರಿಂದ ಕೂಡಿದ ತನ್ನ ಪತ್ನಿಯು ದಿವ್ಯಾಂಬರ-ದಿವ್ಯಾಭರಣಗಳಿಂದ ಅಲಂಕೃತಳಾಗಿ, ಪಾದಪೂಜೆಗಾಗಿ ಸಕಲ ಸೋಬಸ್ಕರಗಳನ್ನೂ ತೆಗೆಸಿಕೊಂಡು, ವಾಲಗ ತಾಳಮೇಳಗಳೊಂದಿಗೆ ತನ್ನ ನ್ನು ಎದುರುಗೊಳ್ಳಲು ಬರುತ್ತಿದ್ದುದು ಕಾಣಿಸಿತು. ಆಕೆಯ ಹಿಂದುಗಡೆ, ತನ್ನ ಇಪ್ಪತ್ತೇಳು ಮಂದಿ ಮಕ್ಕಳೂ, ದಿವ್ಯವಸ್ತ್ರಧಾರಿಗಳಾಗಿ, ಚಾಮರ ಪಾದುಕೆ ಕೊಡೆ ಉತ್ತಮವಸ್ತ್ರ ಮೊಂತಾದುವುಗಳನ್ನು ಹಿಡಿದು. ತನ್ನ ದ ರ್ಶನಕ್ಕಾಗಿ ಬರುತ್ತಿದ್ದುದೂ ಕಾಣಿಸಿತು. ಕುಚೇಲನು, ಪರಮಾಶ್ಚರ್ಯ ಕರಗಳಾದ, ಅಪೂರ್ವಗಳಾದ ಆ ನೋಟಗಳನ್ನು ನೋಡಿ, ತನ್ನ ಕಣ್ಣುಗ ಳನ್ನೇ ತಾನು ನಂಬಲಾರದೆ, ''ಇದೇನು, ಈ ವಿಚಿತ್ರಗಳಿಗೆ ಅರ್ಥವೇನು?

ಶ್ರೀಕೃಷ್ಣಮೂರ್ತಿಯು ಬಹು ಮಾಯಾವಿ ಯೆಂಬುದು ಈಗ ತಿಳಿಯಿತು! ನನ್ನನ್ನು ಬರಿಯ ಕೈಯಲ್ಲಿ ಕಳುಹಿಸಿದಂತೆ ಮಾಡಿ, ಇಲ್ಲಿ ಇಷ್ಟು ಬಗೆಯ ಐಶ್ವರ್ಯಗಳನ್ನೂ ಒದಗಿಸಿರುವನಲ್ಲಾ! ಅವನು ಒಂದು ವೇಳೆ ಕೊಟ್ಟಿದ್ದರೆ, ನಾನು ನನ್ನ ಕ್ಷುದ್ರಹಸ್ತಗಳಲ್ಲಿ ಎಷ್ಟು ತರಲು ಸಾಧ್ಯವಾಗುತ್ತಿತ್ತು? ಈ ನನ್ನ ಅಶಕ್ತತೆಯನ್ನು ತಿಳಿದೇ ಆ ಲೋಕೇಶನು, ಹೀಗೆ ಅನುಗ್ರಹಿಸಿರುವನು! ಆಹಾ, ಕೃಪಾಶರಧಿಯಾದ ಭಗವಂತನು ಕೊಡುಗೈಮುಂದುಮಾಡಿ, ಅನುಗ್ರಹಿಸತೊಡಗಿದನೆಂದರೆ ಅದನ್ನು ಪಡೆದು ಅನುಭವಿಸಲು ಮಾನವನಿಗೆ ಸಾಧ್ಯವುಂಟೆ? ದಯಾಸಿಂಧೋ, ಕೃಷ್ಣಾ, ನಿನ್ನ ಮಹಿಮೆಯು ಎಣಿಸಲಸಾಧ್ಯವಾದುದು''' ಎಂದು ನುತಿಸುತ್ತಿದ್ದನು. ಅಷ್ಟರಲ್ಲಿ ಪರಿವಾರದೊಂದಿಗೆ ಬಂದ ಆತನ ಪತ್ನೀಪುತ್ರಾದಿಗಳು, ಮುಂದಕ್ಕೆ ಬಂದು ಆತನನ್ನು ಸಂಧಿಸಿದರು. ಅಂದಿನ ಕ್ಷುತ್‌ಕ್ಷಾಮೆಯು ಇಂದು ಸುವರ್ಣಕಲಶದಿಂದ ನಿರ್ಮಲ ಜಲವನ್ನು ಎರೆದು, ತನ್ನ ಪತಿಯ ಪಾದಗಳನ್ನು ತೊಳೆದು ಆ ಪವಿತ್ರೋದಕವನ್ನು ತಲೆಯ ಮೇಲೆ ಪ್ರೋಕ್ಷಿಸಿಕೊಂಡಳು. ಮಕ್ಕಳೂ ತಮ್ಮ ಪಿತೃ ಚರಣ ಪವಿತ್ರಪಾದೋದಕವನ್ನು ಪ್ರೋಕ್ಷಿಸಿಕೊಂಡರು. ಅವರಲ್ಲಿ ಕೆಲವರು ನಾನು ಮುಂದು ತಾನು ಮುಂದೆಂದು ಆತನ ಪಾದಗಳನ್ನು ಒರೆಸಿದರು. ಶ್ರೀ ಕೆಲವರು ರತ್ನಖಚಿತವಾದ ಪಾದುಕೆಗಳನ್ನು ಆ ಪೂಜ್ಯ ಪಾದಗಳಿಗೆ ತೊ ಸಿದರು ದಿವ್ಯವಸ್ತ್ರಗಳಿಂದ, ಭಗವಂತನಿಂದ ಆಲಂಗಿಸಲ್ಪಟ್ಟ ಆ ಪುಣ್ಯದೇಹಿಯನ್ನು ಅಲಂಕರಿಸಿದರು ಪರಿಶುಭ್ರವಾದ ಶ್ವೇತಚ್ಛತ್ರವನ್ನು ಹಿಡಿದರು. ಚಾಮರಗಳನ್ನು ಬೀಸಿದರು. ಸಿದ್ಧವಾಗಿದ್ದ ಆನೆಯ ಮೇಲೆ ಅಂಬಾರಿಯಲ್ಲಿ ತಮ್ಮಾ ಪೂಜ್ಯನಾದ ತಂದೆಯನ್ನೂ ಪರಮಸಾಧ್ವಿಯೂ ಮಹಾಪತಿವ್ರತೆಯೂ ಆದ ತಮ್ಮ ತಾಯಿಯನ್ನೂ ಕುಳ್ಳಿರಿಸಿ ಎಡಬಲಗಳಲ್ಲಿ ಸೇವೆಮಾಡುತ್ತಾ ಆ ಮನೆಗೆ ಕರೆತಂದು ಇಳಿಸಿದರು ಕುಚೇಲನು, ದೀರ್ಘದಾರಿದ್ರ್ಯರೋಗದಿಂದ ಮುಕ್ತರಾಗಿ ಸುಕ್ಷೇಮಿಗಳಾದ ತನ್ನಾ ಪತ್ನಿಯನ್ನೂ ಪುತ್ರರನ್ನೂ ಕಂಡು ಸಂತೋಷಪಟ್ಟನು ವಾಸಮಾಡಲು ಚಳಿ ಗಾಳಿ ಮಳೆ ಬಿಸಿಲುಗಳಿಂದ ಸುರಕ್ಷಿತವಾದ ಮನೆ, ತಿನ್ನಲು ಪುಷ್ಟಿಕರವಾದ ಊಟ ತಿಂಡಿಗಳು, ಉಟ್ಟು ಹೊದೆಯಲು ಶುಭ್ರವಾದ ಬೆಚ್ಚನೆಯ ವಸ್ತ್ರಗಳು, ಮನಸ್ಸು ದಣಿಯುವಂತೆ ಧನಧಾನ್ಯ ಆಭರಣಾದಿಗಳು, ಇಷ್ಟೂ ಒದಗಿ ಪತ್ನೀಪುತ್ರರು

ನಿಶ್ಚಿಂತರಾದುದಕ್ಕಾಗಿ ಪರೋಪಕಾರ ಪರಾಯಣನಾದ ಸಾಧು ಹೃದಯನಾದ ಆತನ ಮನಸ್ಸು ಸಮಾಧಾನಗೊಂಡಿತು ತೃಪ್ತವಾಯಿತು. ಮುಂದೆ ಆ ದಂಪತಿಗಳು, ಮಕ್ಕಳೊಂದಿಗೆ ಸುಖವಾಗಿದ್ದರೆಂದು ಹೇಳಬೇಕಾದುದಿಲ್ಲವಷ್ಟೆ!



## ಉಪಸಂಹಾರ



ದಿನಗಳು ಸಾಗಿದುವು ಆ ಐಶ್ವರ್ಯವು ಭಗವದನುಗ್ರಹದಿಂದ ಅಕಸ್ಮಾತ್ತಾಗಿ ಲಭಿಸಿತಾದರೂ ಅದು ಮಹಾಜ್ಞಾನಿಯಾದ ಕುಚೇಲನ ಮನಶ್ಶಾಂತಿಯನ್ನು ಕುಂದಿಸಲು ಶಕ್ತವಾಗಲಿಲ್ಲ ಆತನು ಎಂದಿನಂತೆ ತನ್ನ ನಿತ್ಯಕರ್ಮಗಳನ್ನು ಬಿಡಲಿಲ್ಲ. ಸ್ನಾನಸಂಧ್ಯ ದೇವತಾರ್ಚನೆ ಜಪತಪಾದಿಗಳೂ ಪುರಾಣ ಪುಣ್ಯಕಥಾದಿಗಳೂ ಆ ಮನೆಯಲ್ಲಿ ಮೊದಲಿಗಿಂತಲೂ ದಶಾಧಿಕ ಪ್ರಮಾಣದಿಂದ ನಡೆಯುತೊಡಗಿದುವು. ಈಶ್ವರದತ್ತವಾದ ಸಂಪತ್ತಿನ ವಿಷಯದಲ್ಲಿ ಕುಚೇಲನು ಯಾವ ಬಗೆಯ ಸ್ವಾಮ್ಯವನ್ನೂ ವಹಿಸಲಿಲ್ಲ ಎಂದಿನಂತೆಯೇ ಕೇವಲ ನಿಸ್ಪೃಹನಾಗಿಯೇ ಇದ್ದನು. ಅತಿಥಿಅಭ್ಯಾಗತರಿಗೆ ವಿಶೇಷ ಅನ್ನದಾನಾದಿಗಳನ್ನು ನಡಿಸುತ್ತಾ, ಸರ್ವರನ್ನೂ ಮೃದುಮಧುರ ವಾಕ್ಯಗಳಿಂದ ಆದರಿಸುತ್ತಾ, ಅಂಗಹೀನ ದೀನಾನಾಥರನ್ನು ದಯೆಯಿಂದ ಕಂಡು ಯೋಗ್ಯಸಹಾಯದಿಂದ ತೃಪ್ತಿಗೊಳಿಸುತ್ತಾ ಇದ್ದನು

ಮತ್ತು ಅವ್ಯಾಜದಯಾಪರನಾದ, ದೀನಜನವತ್ಸಲನಾದ ಶ್ರೀಕೃಷ್ಣಮೂರ್ತಿಯನ್ನು ಸರ್ವದಾ ತನ್ನ ಹೃದಯಾರವಿಂದದಲ್ಲಿಟ್ಟು, "ಪ್ರಭೋ, ಅನಂತಶಾಯಿಾ, ನಿನ್ನ ದಯೆಗೆ, ಆದಿ ಅಂತ್ಯಗಳನ್ನು ಕಾಣೆನು. ದೀನನಾದ ನನ್ನಿಂದ ಒಂದು ಹಿಡಿ ಅವಲಕ್ಕಿಯನ್ನು ತಿಂದಂತೆ ಮಾಡಿ, ಇಷ್ಟು ಬಗೆಯ ಅಕ್ಷಯಸೌಭಾಗ್ಯಗಳನ್ನು ಕರುಣಿಸಿರುವೆಯಲ್ಲಾ! ಇಂತಹ ದಯಾಸಮುದ್ರನಾದ ನಿನ್ನನ್ನು ನಾನು ಏನೆಂದು ಭಜಿಸಲಿ! ಎಷ್ಟೆಂದು ಹೊಗಳಲಿ! ನನಗೆ ಈ ಭಾಗ್ಯವೂ ಬೇಡ, ಧನರತ್ನಗಳೂ ಬೇಡ, ಹೇಮಭೂಮಿಗಳೂ ಬೇಡ! ನನಗೆ

ಬೇಕಾದುದೊಂದು ನಿನ್ನ ಪಾದಭಕ್ತಿಯು! ಅದು ಇಂದಿನಂತೆಯೇ ಜನ್ಮಜನ್ಮಾಂತರದಲ್ಲೂ ಅಚಲವಾಗಿರಲಿ! ಈ ಪ್ರೇಮವೂ, ಈ ಸ್ನೇಹವೂ, ಈ ಅನನ್ಯ ಭಕ್ತಿಯೂ ಮಾತ್ರ ಎಂದೆಂದಿಗೂ ಸ್ಥಿರವಾಗಿರಲಿ! ಹಣಹೊನ್ನುಗಳೆಂಬ ಈ ಕಶ್ಮಲ ಪದಾರ್ಥಗಳು ಆ ನಿರ್ಮಲಭಕ್ತಿಯನ್ನು ಕೆಡಿಸದಿರಲಿ!'' ಎಂದು ಅನುದಿನವೂ ಪ್ರಾರ್ಥಿಸುವನು. ಸಾಧ್ವೀಶಿರೋಮಣಿಯಾದ ಆ ಕುಚೇಲಪತ್ನಿಯಾದರೂ ಐಶ್ವರ್ಯ ಬಂದಿತೆಂಬ ಹೆಮ್ಮೆಯಿಂದ ಪತಿಸೇವೆಯಲ್ಲಿ ಅಶ್ರದ್ಧೆಯನ್ನು ವಹಿಸದೆ, ಅಂದಿನ ಬಡತನದ ದುರ್ದಿನಗಳಲ್ಲಿ ಹೇಗೆ ಭಯಭಕ್ತಿಗಳಿಂದ ನಡೆದುಕೊಳ್ಳುತ್ತಿದ್ದಳೋ ಆ ನಿರ್ಮಲಪಾತಿವ್ರತ್ಯಧರ್ಮಕ್ಕೆ ಲೇಶಮಾತ್ರವೂ ಕುಂದುಂಟಾಗದಂತೆ ನಡೆದುಕೊಂಡಳು —ಹೀಗೆ ಪರಮಪವಿತ್ರರಾದ ಆ ದಂಪತಿಗಳು ಬಹುಕಾಲ ಬದುಕಿ, ಅನೇಕ ಪುಣ್ಯಕಾರ್ಯಗಳನ್ನು ಮಾಡಿ, ಮಹಾ ಸಾಧುಚರಿತರೆಂದು ಪ್ರಖ್ಯಾತರಾಗಿ ಕೊನೆಗೆ ದೇಹಾವಸಾನದಲ್ಲಿ ಶಾಶ್ವತ ಮೋಕ್ಷ ಸಾಮ್ರಾಜ್ಯವನ್ನು ಗಳಿಸಿಕೊಂಡರು.

ಭಕ್ತಾಗ್ರಗಣ್ಯನಾದ ಕುಚೇಲನು, ಯೋಚಿಸಲು ಸಹ ಅಸಾಧ್ಯವಾಗಿದ್ದ ಅಂತಹ ಬಡತನಸ್ಥಿತಿಯಲ್ಲಿದ್ದಾಗಲೂ-ಸಕಲ ಸಂಪತ್ತುಗಳಿಂದ ಕೂಡಿದ್ದಾಗಲೂ ಒಂದೇ ಸಮನಾಗಿ ಹೇಗೆ ಹರಿಪಾದಗಳನ್ನಾಶ್ರಯಿಸಿ ನಿಷ್ಕಾಮಿಯಾಗಿ ಕರ್ಮನಿರತನಾಗಿದ್ದನೋ, ಹೇಗೆ ಅತೃಪ್ತಿ ಅಶಾಂತತೆಗಳಿಗೀಡಾಗದೆ ಎರಡು ವೇಳೆಯಲ್ಲೂ ತುಂಬಿದ ಕುಂಭದಂತೆ ನಿಶ್ಚಲನಾಗಿದ್ದನೋ ಮತ್ತು ಹೇಗೆ ಆತನ ಪತ್ನಿಯೂ ದಾರಿದ್ರ್ಯ ಐಶ್ವರ್ಯಗಳೆರಡರಲ್ಲೂ ಪತಿಪಾದಗಳನ್ನು ನಂಬಿ, ಪಾತಿವ್ರತ್ಯಧರ್ಮಕ್ಕೆ ಕುಂದುತಾರದೆ, ಭರ್ತನಲ್ಲಿ ಭಯಭಕ್ತಿಗಳನ್ನುಂಟಾಗಿ ನಡೆದು ಚಿರಯಶವನ್ನು ಗಳಿಸಿಕೊಂಡಳೋ, ಅಂತಹ ಆ ಸಚ್ಚರಿತ್ರೆಯು ಕನ್ನಡಿಗರಿಗೆ ಆದರ್ಶಸ್ವರೂಪವಾಗಿದ್ದು ಅವರೂ ಸಕಲ ವಿಧಗಳಲ್ಲೂ ಭಗವನ್ನಿರ್ಭರರಾಗಿ, ನಿಷ್ಕಾಮ ಕರ್ಮ ಪರಾಯಣರಾಗಿ, ಭಗವದ್ಭಕ್ತಿಯುತರಾಗಿ, ಸಾಧುಶೀಲರಾಗಿ, ಸದ್ಗತಿಕಾಮರಾಗಿ ಜನ್ಮಸಾರ್ಥಕ್ಯವನ್ನು ಹೊಂದಲಿ! ಅಂತು ಶ್ರೀಕುಚೇಲವರದನಾದ ಲಕ್ಷ್ಮೀಧವನು ಅನುಗ್ರಹಿಸಲಿ!—

ತಥಾಸ್ತು.



⊹ ಶ್ರೀರಾಮಸಹಾಯಂ ⊹

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

## ಮುನ್ನುಡಿ:—

ನಮ್ಮ ಕಥಾನಾಯಕನಾದ **ರಾಜಾ ರಣಜಿತ್‌ಸಿಂಗನು** ಪಂಜಾಬು ದೇಶವನ್ನು ಆಳಿದ ರಾಜರಲ್ಲೆಲ್ಲಾ **ಸರ್ವಶ್ರೇಷ್ಠನು** ಶಕ್ತ್ಯೈಶ್ವರ್ಯ ಸಾಹಸಾದಿಗಳಲ್ಲೂ, ರಾಜನೀತಿ ಔದಾರ್ಯ ಪ್ರಜಾಪಾಲನಾದಿಗಳಲ್ಲೂ ಈತನಿಗೆ ಸಮಾನರಾಗುವರು ಆ ದೇಶದಲ್ಲಿ ಈತನ ಹಿಂದೆಯಾಗಲೀ ಈತನಿಗೆ ಸಮಕಾಲೀನರಾಗಿಯಾಗಲೀ ಯಾರೂ ಇರಲಿಲ್ಲ. ಅರಣ್ಯದಲ್ಲಿನ ಜಿಂಕೆ, ಮೊಲ, ಪುಲ್ಲೆ ಮೊದಲಾದ ಸಾಧುಪ್ರಾಣಿಗಳನ್ನು ಹೇಗೋ ಹಾಗೆ ಹುಲಿ, ತೋಳ, ಚಿರತೆ ಮೊದಲಾದ ದುಷ್ಟಮೃಗಗಳನ್ನೂ ತನ್ನ ಪರಾಕ್ರಮದಿಂದ ಅಡಗಿಸಿ ಸ್ವಾಧೀನದಲ್ಲಿಟ್ಟುಕೊಂಡು, ಅರಣ್ಯದ ಹೊರಗಿನ ಶತ್ರುಗಳನ್ನೂ ತನ್ನ ಶೌರ್ಯ ಪ್ರತಾಪಗಳಿಂದ ಎದುರಿಸಿ ಮೃಗರಾಜನೆಂಬ ಏಕಮಾತ್ರಕೀರ್ತಿಗೆ ಪಾತ್ರವಾಗುವ ಸಿಂಹದಂತೆ ನಮ್ಮ ಚರಿತ್ರನಾಯಕನಾದರೂ ತನ್ನ ಸಮಕಾಲೀನರಾಗಿ ಪಂಜಾಬಿನಲ್ಲಿ ಅಲ್ಲಲ್ಲಿ ಮಿಸಲೆ (ರಾಜ್ಯಭಾಗ) ಗಳನ್ನು ಆಳುತ್ತಿದ್ದ ಪ್ರತಾಪಿಗಳಾದ ಅನೇಕ ಮಂದಿ ಸರದಾರರನ್ನು ಘೋರ ರಣರಂಗಗಳಲ್ಲಿ ಜಯಿಸಿ ಪಾದಾಕ್ರಾಂತರನ್ನಾಗಿ ಮಾಡಿಕೊಂಡು, ಅಂತಯೇ ಸಾಧುಸಜ್ಜನರು, ದೇವಾಲಯ-ಧರ್ಮಸ್ಥಳಗಳು ಮುಂತಾದುವುಗಳ ರಕ್ಷಕನೂ ಆಗಿ ಅವುಗಳಿಗೆ ಮುಕ್ತಹಸ್ತನಾಗಿ ದಾನಮಾಡುತ್ತಾ ಶೌರ್ಯಪ್ರತಾಪಸಿದ್ಧಿಯಿಂದಾಗಿ **"ಪಂಜಾಬಿನ ಸಿಂಹ"**ನೆನ್ನಿಸಿಕೊಂಡು ನಾಲ್ವತ್ತು ವರ್ಷಕಾಲ ರಾಜ್ಯಭಾರ ಮಾಡಿದನು ಭಾರತದೇಶದಲ್ಲಿ ಹೀಗೆ ರಾಜ್ಯಭಾರಮಾಡಿ, ತಮ್ಮ ಧವಳಕೀರ್ತಿಯನ್ನು ಪ್ರಪಂಚದಲ್ಲಿ ಶಾಶ್ವತಗೊಳಿಸಿದ ವೀರಾಗ್ರಣಿಗಳಿಗೆ ಕೊರತೆಯಿಲ್ಲ ನಮ್ಮಲ್ಲಿ—ಅತ್ಯುಕ್ತಿಯಲ್ಲ—ಅಂತಹ ರತ್ನಗಳಿಗೆ ನಿಜವಾಗಿ ದಾರಿದ್ರ್ಯವಿಲ್ಲ! ಆದರೇನು? ದುರ್ದೈವದಿಂದ ದಾಸ್ಯಕ್ಕೀಡಾದ ಭಾರತದೇಶದ ದುಸ್ಥಿತಿಯು ಈ ಕಾಲದಲ್ಲಿ ಅವುಗಳನ್ನು ಪರೀಕ್ಷಿಸಿ, ತಕ್ಕಂತ ಬೆಲೆ ಕಟ್ಟುವ ಯೋಗ್ಯರತ್ನಪರೀಕ್ಷಕರಿಲ್ಲ!

ಅವುಗಳನ್ನು ಯುಕ್ತಸ್ಥಾನದಲ್ಲಿಟ್ಟು ಅವುಗಳ ಕಾಂತಿಯನ್ನು ಪ್ರಕಾಶಗೊಳಿಸುವ ಕುಶಲರಾದ ಕುಂದಣಗಾರರಿಲ್ಲ! ಅವುಗಳನ್ನು ಸ್ವಾಧೀನದಲ್ಲಿಟ್ಟುಕೊಂಡು ರಕ್ಷಿಸುವಷ್ಟು ದಾರ್ಢ್ಯವು ದೀನಳಾದ ಭಾರತಮಾತೆಗಿಲ್ಲ!

ಅಂತಹ ನರನಾರೀರತ್ನಗಳು ಭರತಖಂಡದಲ್ಲಿ ಹಿಂದಿನಕಾಲದಲ್ಲಿದ್ದುವು-ಈಗಿನವರು ಆ ಹಿಂದಿನವರ ಶ್ರೇಷ್ಠತೆಯನ್ನು ಹೇಳಿಕೊಂಡು ಹೆಚ್ಚಳಪಟ್ಟು ಮಾತ್ರ ಜೀವಿಸಬೇಕಾಗಿದೆ, ಎಂದು ಯಾರೂ ತಿಳಿಯಕೂಡದು! ಈಗಲೂ ಅಂತಹ ಜೀವರತ್ನಗಳು ಅನೇಕ ಸಂಖ್ಯೆಯಿಂದ ನಮ್ಮ ದೇಶದಲ್ಲಿ ದೊರೆಯುತ್ತಿವೆ ಆದರೆ, ಅವುಗಳಲ್ಲಿ ಪರರಿಗೆ ವಿಕ್ರೀತವಾಗಿರುವುವು ಕೆಲವು, ಕೆಸರು ಕೊಳಚೆಗಳಲ್ಲಿ ಬಿದ್ದು ಪ್ರಕಾಶಹೀನವಾಗಿ ಬೆಳಕಿನ ಮುಖವನ್ನೇ ಕಾಣಲು ಮಾರ್ಗವಿಲ್ಲದೆ ಪಾತಾಳದ ಅಡಿಯನ್ನು ಸೇರಿರುವವುಗಳು ಹಲವು, ಯೋಗ್ಯರೀತಿಯಿಂದ ಪರೀಕ್ಷಿಸಲ್ಪಡದೆ, ಸರಿಯಾದ ಬೆಲೆಯನ್ನು ಕಾಣದೆ, ಅಲ್ಪಬೆಲೆಗೆ ವಿಕ್ರೀತವಾಗಿ ತನ್ಮೂಲಕ ತೇಜೋಹೀನವಾಗಿರುವುವು ಮತ್ತೆ ಕೆಲವು, ಲೋಭಿಗಳಾದ ಕೆಲಮಂದಿ ಧನಾಢ್ಯರ ಲೋಹ ಪಂಜರಗಳಲ್ಲಿ ಸಿಕ್ಕಬಿದ್ದು ತಮ್ಮ ಕಾಶವನ್ನು ಹೊರಗೆಡಹಲಾರದೆ ನಿರ್ಬಂಧಿತವಾಗಿರುವುವು ಮತ್ತನೇಕ, ಹೀಗಾಗಿ ನಮ್ಮಲ್ಲಿಯ ಅನೇಕ ನರನಾರೀರತ್ನಗಳೂ ಅವುಗಳ ಗುಣಪ್ರಕಾಶ ಯೋಗ್ಯತೆ ಮುಂತಾದುವೂ ನಿರರ್ಥಕವಾಗುತ್ತಿವೆ! ಮನೆಯೇ ಸೂರೆಹೋಗಿರುವಾಗ ಮನೆಯಲ್ಲಿನ ವಸ್ತುಗಳು ಎಷ್ಟು ಅಮೌಲ್ಯವಾಗಿದ್ದರೆ ತಾನೆ ತಕ್ಕಂತೆ ಬೆಲೆ ಕಟ್ಟುವವರಾರು? ಪ್ರತಿಯೊಂದು ವಸ್ತುವಿನ ಯೋಗ್ಯಬೆಲೆಯೂ ನಿಷ್ಕರ್ಷಿಸಲ್ಪಡಬೇಕಾಗಿದ್ದರೆ, ಮನೆಯು ಮೊದಲು ಗೃಹಸ್ಥನ ಸ್ವಾಧೀನದಲ್ಲಿರಬೇಕು! ಗೃಹಸ್ಥನೆಂದರೆ ಕೇವಲ ಬಾಡಿಗೆಗೆ ವಾಸಿಸುವ ಯಜಮಾನನಲ್ಲ (?) ಅನ್ವರ್ಥ ಗೃಹಸ್ವಾಮಿಯಾಗಿರಬೇಕು! ಆಗ ಮಾತ್ರ ಆತನಿಗೆ ತನ್ನಲ್ಲಿನ ವಸ್ತುಗಳ ಯೋಗ್ಯ ಬೆಲೆಯನ್ನು ನಿಷ್ಕರ್ಷಿಸಿ, ಅವುಗಳ ಗುಣಧರ್ಮ ಯೋಗ್ಯತೆಗಳನ್ನು ಪ್ರಕಾಶಗೊಳಿಸಲು ಅವಕಾಶವುಂಟಾಗುವುದು-ಸಾಧ್ಯವಿರುವುದು ಭಾರತದೇಶದ ಜನರು, ತಮ್ಮ ಸ್ವಗೃಹದಲ್ಲೇ ಪರಕೀಯರಾಗಿರುವ-ಸ್ವದೇಶದಲ್ಲೇ ಪರದೇಶಿಗಳಾಗಿರುವ ಈ ದುಸ್ಥಿತಿಯು ದೂರವಾದಂದಿಗೆ, ಅವರು ಪ್ರಪಂಚದ ದೃಷ್ಟಿಯಲ್ಲಿ ಹೆಚ್ಚೇನಲ್ಲದಿದ್ದರೂ ಮನುಷ್ಯರು ಎನ್ನಿಸಿಕೊಳ್ಳುವಂದಿಗೆ-ಅವರಲ್ಲಿನ ಗಂಡಸರು ಕೇವಲ ಆಕಾರಕ್ಕೆ ಮಾತ್ರವಲ್ಲ-ನಿಶ್ಚಯ

ವಾಗಿ ಪುರುಷರು ಎಂಬ ಹೆಸರಿಗೆ ಯೋಗ್ಯರಾಗುವಂದಿಗೆ ಎಲ್ಲವೂ ಸುಸ್ಥಿತಿಯನ್ನು ಹೊಂದುವುದು ಅಂತಹ ಸುಸ್ಥಿತಿಯು ಪ್ರಾಪ್ತವಾಗಬೇಕೆಂದು ಮಾನವರಾದ-ಪವಿತ್ರ ಭಾರತಮಾತೆಯ ಸಂತಾನರಾದ ನಮಗೆ ಅಪೇಕ್ಷೆಯಿದ್ದುದಾದರೆ, ನಾವು ಕಾಲತಾಮಸಮಾಡದೆ, ಹುಡುಗಾಟಿಕೆಗಳಲ್ಲಿ ಕಾಲಹರಣ ಮಾಡದೆ, ಆಲಸ್ಯಭಾವವನ್ನು ಬದಿಗೊತ್ತಿ ಆ ನಮ್ಮ ಪೂರ್ವಿಕ ಆಧುನಿಕ ಪುಣ್ಯಪುರುಷರ ಆದರ್ಶಜೀವಿತರತ್ನಗಳನ್ನು, ಅವು ಕಾಲಕರ್ಮ ಸಂಯೋಗದಿಂದ ಬಿದ್ದಿರುವ ಆಳವಾದ ಕಂದರಗಳಿಂದ ಅಗೆದು ಮೇಲಕ್ಕೆ ತೆಗೆಯಲು ಯತ್ನಿಸಬೇಕು ಅವುಗಳ ಮೇಲೆ ಮುಚ್ಚಿರುವ ಧೂಳಿ ಕೊಳೆಗಳನ್ನು ಊದಿ ತೊಳೆಯಬೇಕು. ಮೆರುಗಿಟ್ಟು ಪ್ರಕಾಶಗೊಳಿಸಬೇಕು ಅವುಗಳನ್ನು ಯೋಗ್ಯಸ್ಥಾನಗಳಲ್ಲಿಟ್ಟು ಗೌರವಿಸಲು ಕಲಿಯಬೇಕು ಮತ್ತು ಆ ಪ್ರಕಾಶದಲ್ಲೇ ನಮ್ಮ ಜೀವಿತಯಾತ್ರೆಗಳನ್ನು ಸಾಗಿಸಲೂ ಅಭ್ಯಸಿಸಬೇಕು ಹಾಗೆ ನಮ್ಮಲ್ಲಿಯ ಪೂಜ್ಯವಸ್ತುಗಳನ್ನು ನಾವು ಗೌರವಿಸತೊಡಗಿದರಲ್ಲವೆ ಇತರರೂ ಗೌರವಿಸುವರು? ನಾವು ಅವುಗಳನ್ನು ಪೂಜಿಸಿದರಲ್ಲವೆ ಇತರರೂ ಪೂಜಿಸುವರು? ಹೀಗೆ ಭಾರತದೇಶದ ಕೀರ್ತಿಗೆ ಮೂಲಕಾರಣರಾಗಿರುವ ಇಂತಹ ಆದರ್ಶಮೂರ್ತಿಗಳ ದಿವ್ಯಜೀವಿತಗಳನ್ನು ಕರ್ಣಾಟಕ ಜನಾಂಗಕ್ಕೆ ಒದಗಿಸಿಕೊಡಲು ಯೋಗ್ಯತಾನುಸಾರ ಹಣಗುತ್ತಿರುವ ಗ್ರಂಥಮಾಲೆಯನ್ನು ಭಾಷಾಭಿಮಾನಿಗಳಾದ ಕನ್ನಡಿಗ ಮಹಾಜನರು ಆದರಿಸಿ-ಸ್ವಹಸ್ತ ಪರಹಸ್ತಗಳಿಂದ ಅದರ ಅಭಿವೃದ್ಧಿಗೆ ಸಹಕರಿಸಿ-ಪ್ರೋತ್ಸಾಹಿಸಬೇಕೆಂದು ಪ್ರಾರ್ಥಿಸುತ್ತೇನೆ.

ಬೆಂಗಳೂರು ಸಿಟಿ.<br>
೩೧—೮—೧೯೨೬

ಇತಿ ಸುಜನ ವಿಧೇಯ,<br>
ಯಂ ರಾಮರಾವ್.

ಸುಬೋಧ ಮುದ್ರಣಾಲಯ, ಬೆಂಗಳೂರು ಸಿಟಿ —೩,೦೦೦ —೧೯೨೬

ನಾಡೆಂಬ ದೇಹಕ್ಕೆ ರೂಢಿಪತಿಯೇ ಪ್ರಾಣ ,
ನಾಡಳಿಯೆ ರೂಢಿಪತಿ ಕೆಡುಗು, ಅರಸಳಿಯೆ |
ನಾಡೆಲ್ಲ ಕೆಡುಗು , ಸರ್ವಜ್ಞ !



ಪಂಜಾಬನ ಸಂಘಟನನಿಸಿದ **ರಾಜಾ ರಣಜಿತ್ ಸಿಂಗ್**

ಶ್ರೀರಾಮ ಸಹಾಯಂ

ಪಂಜಾಬಿನ ಸಿಂಹನೆನಿಸಿದ

# ರಾಜಾ ರಣಜಿತ್‌ಸಿಂಗ್



## ಅಧ್ಯಾಯ ೧ "ಗುರು ಗೋವಿಂದಸಿಂಗ್"

ನಮ್ಮ ಪೂರ್ವ್ವಭೂಮಿಯಾದ ಈ ಭಾರತ ದೇಶದ ಪ್ರಾಚೀನ ಮತ್ತು ಆಧುನಿಕ ಚರಿತ್ರೆಯಲ್ಲಿ ಅನೇಕ ವಿಚಿತ್ರ ಪ್ರಸಂಗಗಳ ಘಟನೆಯಿದೆ. ಅಘಟನ ಗಳನ್ನೂ ಘಟನ ಮಾಡಿಸುವ ಸಾಮರ್ಥ್ಯವು ಸರ್ವಶಕ್ತನಾದ ಪರಮೇಶ್ವರನ ಸ್ವಾಧೀನವಲ್ಲಿರುವ ಒಂದ ಅಪೂರ್ವ ಶಕ್ತಿಯೆಂಬ ವಿಷಯದಲ್ಲಿ ವಿವಾದವಿಲ್ಲ ವಷ್ಟೆ! ಸಕಲ ವಿದ್ಯಾಪಾರಂಗತರು ಕಡುಬಡವರಾಗಿ ದೀನರಾಗಿರುವರು, ಶೂರರು ಪರದಾಸರಾಗಿರುವರು, ಶಕ್ತರು ಅಧಮರ ಅಡಿಯಾಳುಗಳಾಗಿರು ವರು, ಅಸಹಾಯಶೂರರು ಉದರಭರಣಕ್ಕಾಗಿ ನೀಚರ-ಹೇಡಿಗಳ ಸೇವಕಾ ವೃತ್ತಿಯಲ್ಲಿ ನಿಲ್ಲುವರು ಅದರಂತೆಯೇ ನಿರಕ್ಷರಕುಕ್ಷಿಗಳು ರಾಜಾಧಿರಾಜ ರಾಗುವರು, ಲಕ್ಷ್ಮೀಪುತ್ರರಾಗುವರು, ಅಶಕ್ತರು ಅನೇಕ ಮಂದಿ ಶೂರರ ಮೊತ್ತಕ್ಕೆ ಅಧಿಪತಿಗಳಾಗುವರು. ಇಂತಹ ಅನೇಕ ವಿಚಿತ್ರ ಘಟನೆಗಳು ಲೋಕಚರಿತ್ರೆಯಲ್ಲಿ ದೊರೆವುವು ಆದರೆ ನಮ್ಮ ಪ್ರಕೃತ ಚರಿತ್ರನಾಯಕನ ಜೀವಿತದಲ್ಲಿನ ಘಟನೆಯು ಮಾತ್ರ ಅತ್ಯಾಶ್ಚರ್ಯಕರವಾಗಿದೆ.

"ಪಂಜಾಬಿನ ಸಿಂಹ"ನೆಂದು ಪ್ರಖ್ಯಾತನಾದ ರಣಜಿತ್‌ಸಿಂಗನು, ಆ ಕಾರದಲ್ಲಿ ಕುಳ್ಳನು, ನೋಟಕ್ಕೆ ಅಲ್ಪನಂತಿರುವನು, ಕುರೂಪಿ, ಮುಖವು ದೊಡ್ಡ ದೊಡ್ಡ ಸಿಡುಬಿನ ಕಲೆಗಳಿಂದ ಕೂಡಿ ನೋಟಕ್ಕೆ ವಿಕಾರವಾಗಿರುವುದು. ಸಾಲದುದಕ್ಕೆ ಎಡಗಣ್ಣು ಕುರುಡಾಗಿ ಪೂರ್ತಿಯಾಗಿ ಮುಚ್ಚಿಕೊಂಡಿರುವು

ದು. ನೀಳವಾದ ಆತನ ಮೂಗಿನ ಕೊನೆಯು ತುದಿಯಲ್ಲಿ ದಪ್ಪನಾಗಿರುವುದು ಬೀಗಣ್ಣೊಂದು ಅರಳಿದ ಗುಲಾಬಿಯಂತೆ ವಿಶಾಲವಾಗಿದ್ದು ದೇಹದಲ್ಲಿ ನೆಲೆಸಿದ್ದ ಅಸಹ್ಯರೋಗದಿಂದ ಬಹು ಶೀಘ್ರವಾಗಿ ಚಲಿಸುತ್ತಾ, ನೋಡುವವರಿಗೆ ಬೆಂಕಿಯುಗಷ್ಟೆಯೋ ಎಂಬಂತೆ ಭಯಂಕರವಾಗಿರುವುದು ಕೆನ್ನೆಗಳಮೇಲೂ ಮೇಲ್ತುಟಿಯಮೇಲೂ ಕೂದಲು ಬಹು ವಿರಳವಾಗಿದ್ದು ಗಡ್ಡದ ದೀರ್ಘವಾದ ರೋಮಗಳು ಒತ್ತಾಗಿ ಜಡೆಯಂತೆ ಹೆಣೆದುಕೊಂಡಿರುವುವು. ಆತನ ವಿಸ್ತಾರವಾದ ಭುಜಗಳಮೇಲೆ ತಲೆಯು ನೇರವಾಗಿಲ್ಲದೆ, ಕುಗ್ಗಿರುವುದು. ತಲೆಯೊಂದುಮಾತ್ರ ದೇಹದಪ್ರಮಾಣಕ್ಕೆ ಬಹು ದೊಡ್ಡದಾಗಿ ಆಚೀಚೆಗೆ ಸುಲಭವಾಗಿ ತಿರುಗಿಸುವುದಕ್ಕಾಗದಂತಿರುವುದು ಕುತ್ತಿಗೆಯು ದಪ್ಪವಾಗಿ ಮಾಂಸಲವಾಗಿರುವುದು ತೋಳೂ ಮತ್ತು ಕಾಲುಗಳೂ ತೆಳುವಾಗಿ, ಚಿಕ್ಕ ಹಸ್ತಗಳು ಮಾತ್ರ ಅಂದವಾಗಿರುವುವು ಇತರರಿಗೆ ಹಸ್ತಲಾಘವವನ್ನು ಕೊಡುವಾಗ ಆತನು ಬಹುಹೊತ್ತು ಅವರ ಹಸ್ತವನ್ನು ಹಿಡಿದುಕೊಂಡು ಅಲುಗಿಸುತ್ತಿರುವನು ಇದರಿಂದ ಆತನ ಮನಶ್ಚಾಂಚಲ್ಯವೂ ನರಗಳ ದೌರ್ಬಲ್ಯಸ್ಥಿತಿಯೂ ವ್ಯಕ್ತವಾಗುತ್ತಿರುವುದು. ಸಾಲದುದಕ್ಕೆ ಆತನು ಧರಿಸುವ ಉಡುಪೂ ಆತನ ಕುರೂಪವನ್ನು ಮತ್ತಷ್ಟು ಹೆಚ್ಚಿಸುತ್ತಿರುವುದು ಆತನು ಕುರ್ಚಿಯಮೇಲೆ ಕಾಲನ್ನು ಕೆಳಕ್ಕೆ ಬಿಟ್ಟುಕೊಂಡು ಕುಳಿತಿರುವಾಗ ಬಹು ಅಶಕ್ತನಂತೆ ತೋರುತ್ತಾ, ನೋಡುವವರಿಗೆ ಆತನಲ್ಲಿ ಯಾವ ಮಹತ್ವವಾಗಲೀ, ಗೌರವಭಾವವಾಗಲೀ ತೋರುವಂತಿಲ್ಲ ಆದರೆ, ರಣಜಿತ್‌ಸಿಂಗನು ಬೆನ್ನಿಗೆ ತನ್ನ ಕಪ್ಪುಬಣ್ಣದ ಗುರಾಣಿಯನ್ನು ಕಟ್ಟಿಕೊಂಡು, ಕುದುರೆಯನ್ನೇರಿ ಕುಳಿತನೆಂದರೆ, ಒಳಗಿರುವ ಅನಿರ್ವಚನೀಯವಾದ ಪುರುಷತತ್ವವು ಪ್ರಕಾಶಿತವಾಗುವುದೋ ಎಂಬಂತೆ ಪ್ರೇಕ್ಷಕರ ದೃಷ್ಟಿಗೆ ಆತನು ಅದ್ವಿತೀಯ ಪರಾಕ್ರಮಿಯಾಗಿಯೂ ಮಹಾಶಕ್ತನಾಗಿಯೂ ತೋರುತ್ತಿರುವನು ಆತನ ಪರಿವಾರದವರಲ್ಲಿ ಆತನ ಮುಖವನ್ನು ಕಣ್ಣಿಟ್ಟು ದಿಟ್ಟಿಸಿದವರಿಲ್ಲ! ಆ ಒಂದು ಕಣ್ಣಿನ ನೋಟವೇ ಜ್ವಲಿಸುತ್ತಿರುವ ಅಗ್ನಿಯಂತೆ ಮಹಾಪ್ರಕಾಶವಂತವಾಗಿ, ಸಮಸ್ತರನ್ನೂ ಆತನ ಆಜ್ಞೆಗೆ ಒಳಪಡಿಸುತ್ತಿರುವುದು. ಜನರು ಆತನ ಆ ತೇಜೋವಂತವಾದ ದೃಷ್ಟಿಯ ಆಜ್ಞೆಗೆ ಅವಿಧೇಯರಾಗಿರಲು ಶಕ್ತರಾಗದೆ, ಸೂತ್ರಬದ್ಧರೋ ಎಂಬಂತೆ ಆತನಿಗೆ ವಿಧೇಯರಾಗಿರುವರು. ಪಾರ್ಶ್ವವಾಯುವಿ

ನಿಂದ ಇಳಿಜುಬಿದ್ದು ಜೋಲಾಡುತ್ತಿರುವ ಆತನ ಎಡಗೈ ಎಡಗಾಲುಗಳು ಆತನನ್ನು ಬಹು ಅಶಕ್ತನೆಂಬಂತೆ ತೋರ್ಪಡಿಸುತ್ತಿದ್ದರೂ ಎಂತಹ ಕುದುರೆಯನ್ನಾದರೂ ಏರಿ, ಸಾಕುಸಾಕೆಂಬಂತೆ ದಣಿಸಿ, ಸ್ವಾಧೀನಗೊಳ್ಳುವ ಸಾಮರ್ಥ್ಯವು ಆತನಿಗಿರುವುದು" ಎಂದು ಮುಂತಾಗಿ ಆತನನ್ನು ನೋಡಿದ್ದ ಬ್ಯಾರನ್ ಹ್ಯೂಗೆಲ್ ಎಂಬ ಒಬ್ಬಾನೊಬ್ಬ ಆಂಗ್ಲೇಯ ಸರದಾರನು ವರ್ಣಿಸಿರುತ್ತಾನೆ.

ಇದು ಅತಿ ವಿಚಿತ್ರಘಟನೆಯಲ್ಲವೆ? ರಾಜಾ ರಣಜಿತ್‌ಸಿಂಗನು ಪಂಜಾಬಿನ ಅಧಿಪತಿಯಾಗಿದ್ದವನು ಆ ದೇಶೀಯರು ಸಿಕ್ ಜನರು. ಮಹಾ ಶೂರರು ಯುದ್ಧಪ್ರಿಯರು ಶೀಘ್ರಕೋಪಿಗಳು. ಹಟವಿಟ್ಟರೆ ಮರಣಾಂತ್ಯದವರೆಗೂ ಹೋರಾಡುವಂತಹ ಛಲಗಾರರು ಅಂತಹ ಸಹಸ್ರಾರು ಮಂದಿ ಸರದಾರರನ್ನು, ಅಡಗಿಸಿ, ಬೆದರಿಸಿ, ತನ್ನಾಜ್ಞೆಗೊಳಪಡಿಸಿ ಸ್ವಾಧೀನದಲ್ಲಿಟ್ಟುಕೊಂಡಿದ್ದ ರಾಜನು, ಮೇಲ್ಕಂಡಂತೆ ವರ್ಣಿತನಾಗಿರುವ ನಮ್ಮ ಕಥಾನಾಯಕನು ಇದು ವಿಚಿತ್ರವಲ್ಲವೆ?

ಪ್ರಪಂಚದ ಸಮಸ್ತಕಾರ್ಯಗಳೂ ಒಬ್ಬೊಬ್ಬ ವ್ಯಕ್ತಿ ಮೂಲಕವಾಗಿ ನಡೆದಂತೆ ಗೋಚರವಾಗುತ್ತಿದ್ದರೂ ಲೋಕನಾಯಕನಾಗಿ ಅಗೋಚರನಾಗಿರುವ ಸರ್ವಶಕ್ತನು, ಸೂತ್ರಧಾರಿಯಂತೆ ತಾನು ಮರೆಯಾಗಿದ್ದು ಆಯಾ ಕಾರ್ಯಗಳನ್ನು ಆಯಾ ವ್ಯಕ್ತಿಯಿಂದ ಮಾಡಿಸುತ್ತಿರುವನು ವಿಚಿತ್ರ ಘಟನಾ ಸಾಮರ್ಥ್ಯವುಳ್ಳ ಆ ಸರ್ವೇಶ್ವರನು ನಮ್ಮ ಕಥಾನಾಯಕನಲ್ಲಿ ದುರ್ವ್ಯಾಧಿ, ಅಸಭ್ಯತೆ, ಕುರೂಪಿತ್ವ, ಅಂಗವೈಕಲ್ಯ ಅಷ್ಟುಮಾತ್ರವಲ್ಲ-ಅಧಿಕಸ್ವಾರ್ಥತೆ, ಅಸಂತುಷ್ಟಿ, ಮದ್ಯಪಾನ ವ್ಯಭಿಚಾರಾದಿ ದುರಾಚಾರಗಳು ಮುಂತಾದುವುಗಳೆಲ್ಲಾ ಇದ್ದರೂ, ಅದಾವ ಜನ್ಮಾಂತರೀಯ ಸುಕೃತ ಶೇಷವೋ ಎಂಬಂತೆ, ಪ್ರಭುಶಕ್ತಿಯೊಂದನ್ನಿತ್ತು ಆತನನ್ನು ಲಕ್ಷಾಂತರ ಜನ ಸಮುದಾಯಕ್ಕೆ ಒಡೆಯನನ್ನಾಗಿಸಿ, ಅಷ್ಟು ಬಗೆಯ ಅಶಕ್ತತೆ-ಲೋಪಗಳಿಂದ ಸಾಮಾನ್ಯ ಪ್ರಜೆಗಿಂತಲೂ ಕಡೆಯೆನ್ನಿಸಬಹುದಾಗಿದ್ದ ಆತನನ್ನು 'ಪುರುಷಸಿಂಹ'ನೆನ್ನಿಸಿದನು ಇದು ವಿಚಿತ್ರ ಘಟನೆಯಲ್ಲವೆ? ಪ್ರಭುಶಕ್ತಿ (ತೇಜಸ್ಸು) ಯೆಂಬುದು ಒಂದು ದೈವೀಸಂಪತ್ತು ನಮ್ಮ ಕಥಾನಾಯಕನಲ್ಲಿ ಅದೊಂದು ಶಕ್ತಿಯು ಅತಿಶಯ ರೀತಿಯಿಂದ ನೆಲೆಗೊಂಡು ಮಿಕ್ಕ ದುರ್ಗುಣಗಳನ್ನೆಲ್ಲಾ ಮರೆಸಿ, ಆತನನ್ನು ನರಶ್ರೇಷ್ಠನೆನ್ನಿಸಿತು ಆತನು ತನ್ನ ಪ್ರಜೆಗಳನ್ನು ಬಹು ಪ್ರೀತಿಯಿಂದ

ಕಾಪಾಡಿದನು. ಅವರೂ ಆತನನ್ನು ವಿಶೇಷವಾಗಿ ಪ್ರೀತಿಸಿದರು ಸೈನಿಕರನ್ನು ಧೈರ್ಯದಿಂದ ಶತ್ರುದಳದಮೇಲೆ ನಡೆಸಿದನು ಅವರೂ ಆತನಿಗೆ ಪರಮವಿಧೇಯರಾಗಿ ನಡೆದರು ತನ್ನ ಪ್ರಜೆಗಳಲ್ಲಿ ಜಾತಿಮತಭೇದಗಳನ್ನಣಿಸದೆ ಉತ್ತಮರನ್ನೂ ಸಾಧುಗಳನ್ನೂ ಪಂಡಿತರನ್ನೂ ಬೇಕಾದಂತೆ ಬಹುಮಾನವಿತ್ತು ಆದರಿಸಿದನು ಅವರೂ ಆತನಲ್ಲಿ ವಿಶೇಷ ಅಭಿಮಾನವಿತ್ತು ಗೌರವಿಸಿದರು ಈಗಲೂ ಆ ದೇಶೀಯರು ಆತನ ಚಿತ್ರಪಟಗಳನ್ನೂ ದಂತದ ಪ್ರತಿರೂಪಗಳನ್ನೂ ತಮ್ಮ ಮನೆಗಳಲ್ಲಿಟ್ಟುಕೊಂಡು ಪೂಜಿಸುತ್ತಿರುವರು ಆತನನ್ನು ವಿಶೇಷ ರಾಜಭಕ್ತಿಯುತರಾಗಿ ಗೌರವಿಸುತ್ತಿರುವರು.

ರಣಜಿತ್‌ಸಿಂಗನು ಪಾಲಿಸಿದ ಪಂಜಾಬುದೇಶವು ಸಿಕ್ ಜನಾಂಗದವರ ಮುಖ್ಯಸ್ಥಾನವು ಸಿಕ್ ಮತವನ್ನು ಸ್ಥಾಪಿಸಿದವನು ಬಾಬಾನಾನಕ್ ಎಂಬ ಮಹಾಪುರುಷನು. ಈತನು ಕ್ರಿ ಶ ೧೫ನೆಯ ಶತಮಾನದ ಮಧ್ಯಭಾಗದಲ್ಲಿ (೧೪೬೯) ಜನಿಸಿದನು. ಅವರಿಗೆ ಮಹಮ್ಮದೀಯರು ಹಿಂದೂದೇಶದಲ್ಲಿ ಕಾಲಿಟ್ಟು ನಾಲ್ಕೈದು ಶತಮಾನಗಳಾಗಿದ್ದುವು ಅವರಲ್ಲಿ ಅನೇಕರು ರಾಜ್ಯಭಾಗವನ್ನು ಕಟ್ಟಿ ಆಳಿಕೊಂಡಿದ್ದುದೂ, ಮನೆಮಾರುಗಳನ್ನು ಕಟ್ಟಿಕೊಂಡು ನೆಲಗೊಂಡಿದ್ದುದೂ ಚರಿತ್ರೆಯಿಂದ ತಿಳಿವ ಅಂಶಗಳಾಗಿವೆ ನೆರೆಹೊರೆಯಲ್ಲಿ ವಾಸಮಾಡಿಕೊಂಡಿದ್ದ ಹಿಂದೂಗಳಿಗೂ ಮಹಮ್ಮದೀಯರಿಗೂ ಧರ್ಮಕರ್ಮಗಳ ವಿಷಯದಲ್ಲಿ ನಡೆದ ಜಗಳ ಕದನಗಳು ಒಂದೆರಡಲ್ಲ! ಹಿಂದೂಗಳನ್ನು ಮತಭ್ರಷ್ಟರನ್ನಾಗಿ ಮಾಡಿ ಅವರ ದೇವಾಲಯಗಳನ್ನು ಅಪವಿತ್ರಗೊಳಿಸಿ, ಅವರ ಪುಣ್ಯಸ್ಥಳಗಳನು ಭ್ರಷ್ಟಗೊಳಿಸಿ ಆಗಿನ ಮಹಮ್ಮದೀಯರು ಸಂತುಷ್ಟಿಗೊಳ್ಳುವರು ಹಿಂದೂಗಳಾದರೋ ಅವರ ಆ ಹಿಂಸೆಯನ್ನು ಸಹಿಸಲಾರದೆ, ಸಹಿಸಿ-ಬಹುವಿಧ ಕಷ್ಟನಷ್ಟಗಳನ್ನು ಅನುಭವಿಸಿ, ಸಹಿಸಲಸಾಧ್ಯವಾದಾಗ ಎದುರುಬಿದ್ದು ಅವರನ್ನು ಹಿಂಸಿಸಿ, ತಮ್ಮ ಸರ್ವಸ್ವವನ್ನೂ ಪ್ರಾಣಗಳನ್ನೂ ಕಳೆದುಕೊಳ್ಳುವರು. ಹೀಗೆ ಅವರ ಅನೇಕ ಮನೆತನಗಳೂ, ಗ್ರಾಮಗಳೂ ಪ್ರಾಣಗಳೂ ನಾಶವಾದುವು. ಇದು ಆಗ ನಿತ್ಯಕೃತ್ಯವಾಗಿದ್ದಿತು ಆ ಕಾಲಕ್ಕೆ ಸರಿಯಾಗಿ ಭಗವಂತನ ಕೃಪಾಕಟಾಕ್ಷವುಂಟಾಯಿತೋ ಎಂಬಂತೆ ಪಂಜಾಬುದೇಶದ ರಾಮಪುರವೆಂಬ ಗ್ರಾಮದಲ್ಲಿ ಸಾಧುಹೃದಯರಾದ ಓರ್ವ ದಂಪತಿಗಳ ಉದರದಲ್ಲಿ ನಾನಕನೆಂಬ ಬಾಲಕನೊಬ್ಬನು

ಜನಿಸಿದನು ಆತನು ಬಾಲ್ಯದಿಂದಲೇ ಅಂತರ್ಮುಖಿಯಾಗಿರುತ್ತಾ, ಲೋಕದಲ್ಲಿ ನೆಲೆಸಿದ್ದ ಈ ಧರ್ಮಾಂಧತೆ, ಆಶಾ ಮೋಹ ಕ್ರೌರ್ಯ ಹಿಂಸೆ ಮುಂತಾದುವುಗಳನ್ನು ನೋಡಿ ಹೇಸಿ, ಸಂಸಾರದಲ್ಲಿ ಜಿಹಾಸೆಯಿಟ್ಟು, ತತ್ವಾನುಸಂಧಾನತತ್ಪರನಾದನು. ಮತ್ತು ಧರ್ಮದ ನಿಶ್ಚಯಸ್ವರೂಪವೇನೆಂಬುದನ್ನು ತಿಳಿಯದೆ, ಬಡಿದಾಡುತ್ತಿದ್ದ ಹಿಂದೂಗಳ ಮತ್ತು ಮಹಮ್ಮದೀಯರ ಗ್ರಂಥಗಳಿಂದ ಏಕಾಭಿಪ್ರಾಯವುಳ್ಳ ಧಾರ್ಮಿಕ ತತ್ವಗಳನ್ನೂ ಲೌಕಿಕ ಸಹಜವಾದ ಆಚಾರವಿಧಿಗಳನ್ನೂ ಸಂಗ್ರಹಿಸಿ, ಒಂದು ಹೊಸ ಧರ್ಮ ಪದ್ಧತಿಯನ್ನು ಏರ್ಪಡಿಸಿ ಬೋಧಿಸತೊಡಗಿದನು ಈತನ ನೂತನ ಧರ್ಮಶಿಕ್ಷಣ ಪದ್ಧತಿಯು ಅನೇಕರಿಗೆ ಸಮರ್ಪಕವಾಗಿದ್ದಂತೆ ತೋರಿತು ಆ ಪ್ರಾಂತದ ಅನೇಕ ಜನರು ಆತನ ಶಿಷ್ಯರಾದರು ಹಾಗೆ ಸೇರಿದ ಆತನ ಶಿಷ್ಯರ ಸಂಖ್ಯೆಯು ದಿನದಿನಕ್ಕೆ ಬೆಳೆಯುತ್ತಾ ಹೋಯಿತು ಆ ಶಿಷ್ಯರಲ್ಲಿ ಹಿಂದೂಗಳೂ ಇದ್ದರು ಮಹಮ್ಮದೀಯರೂ ಇದ್ದರು ಆದರೆ ಅವರು ಬಾಬಾ ನಾನಕನ ಶಿಷ್ಯರಾದ ಮೇಲೆ ಹಿಂದೂಗಳು ಮಹಮ್ಮದೀಯರು ಎಂಬ ಭೇದವನ್ನಿಟ್ಟುಕೊಳ್ಳದೆ ಆ 'ಸಾಧುವರ್ಯನ ಶಿಷ್ಯರು' ಎಂದು ಮಾತ್ರ ಕರೆಯಲ್ಪಟ್ಟರು ಕ್ರಮಕ್ರಮವಾಗಿ ಶಿಷ್ಯರು ಅಥವಾ ಸಿಕ್ಕರು ಎಂಬುದೇ ಆ ಪಂಗಡದವರ ಅಂಕಿತನಾಮವಾಯಿತು ಮುಂದೆ ಅವರು ಸಿಕ್ ಜನಾಂಗದವರೆಂದೂ, ನಾನಕನಿಂದ ಬೋಧಿಸಲ್ಪಟ್ಟು ಅವರಿಂದ ಅವಲಂಬಿಸಲ್ಪಟ್ಟ ಆ ಮತಧರ್ಮಕ್ಕೆ ಸಿಕ್‌ಮತವೆಂದೂ ನಾಮಧೇಯವುಂಟಾಯಿತು

ಬಾಬಾ ನಾನಕನು ತನ್ನ ಅನುಯಾಯಿಗಳ ಸೌಕರ್ಯಕ್ಕಾಗಿ ಅನೇಕ ಸೂಕ್ತಿಗಳನ್ನು ನುಡಿದನು. ಮತ್ತು ಆದಿಗ್ರಂಥವೆಂಬ ಒಂದು ಸುಪ್ರಸಿದ್ಧ ಧರ್ಮಗ್ರಂಥವನ್ನೂ ಬರೆದನು ಇದು ಮುಂದೆ ಆತನ ಪೀಠಕ್ಕೆ ಬಂದ ಇತರ ಸಿಕ್ ಗುರುಗಳಿಂದ ಅಭಿವೃದ್ಧಿಗೊಳಿಸಲ್ಪಟ್ಟಿತು. ಅದರಲ್ಲಿ ಐದನೆಯ ಗುರುಅರ್ಜುನ್ ಎಂಬಾತನು ಅದನ್ನು ಈಗಿರುವ ಸ್ಥಿತಿಯಲ್ಲಿ ಬರೆದು ಸಿದ್ಧಗೊಳಿಸಿಟ್ಟನು. ಸಿಕ್ ಜನರು ನಾನಕನ ಕಾಲದಿಂದಲೂ, ಬಹು ಸಾತ್ವಿಕರಾಗಿ, ಅಹಿಂಸಾಪರಾಯಣರಾಗಿ, ತಮ್ಮ ತಮ್ಮಲ್ಲಿ ಯಾವ ಬಗೆಯ ಜಗಳ ಕದನಗಳಿಗೂ ಅವಕಾಶವಿಲ್ಲದಂತೆ ಕಾಲಯಾಪನೆ ಮಾಡಿಕೊಂಡು ಬಂದರು. ತಮ್ಮ ಮತಗುರುಗಳಿಂದ ರಚಿಸಲ್ಪಟ್ಟ ಆ ಆದಿಗ್ರಂಥವನ್ನು ಗ್ರಂಥ್‌ಸಾಹೆಬ್

ಎಂಬ ಗೌರವನಾಮದಿಂದ ಕರೆಯುತ್ತಾ, ಅಮೃತಸರಸ್ಸಿನ ಮಧ್ಯದಲ್ಲಿರುವ ಸುವರ್ಣನಿರ್ಮಿತ ಆಲಯದಲ್ಲಿಟ್ಟು ಬಹುಭಕ್ತಿಯಿಂದ ಪೂಜಿಸುತ್ತಿದ್ದರು. ಅಂತಹ ಗೌರವವೂ ಪೂಜೆಪುರಸ್ಕಾರಗಳೂ ಆ ಗ್ರಂಥರತ್ನಕ್ಕೆ ಈಗಲೂ ದೊರೆಯುತ್ತಿವೆ. ಆವರೆಗೆ ಡೆಹಲಿಯ ಸಿಂಹಾಸನದ ಮೇಲೆ ಕುಳಿತ ನಾಲ್ಕೈದು ಮಂದಿ ಮೊಗಲ್ ಚಕ್ರವರ್ತಿಗಳೂ ಸಿಕ್ ಜನರನ್ನು ಯಾವ ಬಗೆಯಿಂದಲೂ ಪೀಡಿಸದೆ, ಪ್ರೀತಿಯಿಂದಲೇ ನೋಡಿಕೊಂಡು ಬಂದರು ಆದರೆ ಅತ್ಯುತ್ಕಟ ಸ್ವಮತಾಭಿಮಾನಿಯಾದ ಔರಂಗಜೇಬನ ಕಾಲದಲ್ಲಿ ಕೇವಲ ಸಾತ್ವಿಕರಾಗಿ ಜೀವಿಸುತ್ತಿದ್ದ ಅವರ ಮತಧರ್ಮಪಾಲನೆಗೆ ತೊಂದರೆಬಂದಿತು. ಚಕ್ರವರ್ತಿಯು ಆಗ ಪೀಠಾಧಿಪತಿಯಾಗಿದ್ದ ತೇಜಬಹದ್ದೂರ್ ಎಂಬ ಸಿಕ್ ಗುರುವನ್ನು ಪರಿಪರಿಯಿಂದ ಹಿಂಸೆಪಡಿಸತೊಡಗಿದನು. ಆತನನ್ನು ತನ್ನ ಆಸ್ಥಾನಕ್ಕೆ ಕರೆತರಿಸಿ 'ನಿನ್ನ ಮಹತ್ವದಿಂದ ಏನಾದರೊಂದು ಅದ್ಭುತಕಾರ್ಯ ವನ್ನು ನಡೆಯಿಸಿ ನಿನ್ನ ಮತದ ಸತ್ಯತೆಯನ್ನು ಪ್ರಕಟಪಡಿಸಬೇಕು ಹಾಗಿಲ್ಲ ದಿದ್ದರೆ ಶಿರಚ್ಛೇದನ ಮಾಡಿಸುವೆನು' ಎಂದು ನಿರ್ಬಂಧಿಸಿದನು ಆದರೆ ಆ ಸಾಧುವರ್ಯನು ಆಗಲೇ ಏನೊಂದು ಅಮಾನುಷಕಾರ್ಯವನ್ನೂ ಮಾಡದೆ ಒಂದು ಚೀಟಿಯನ್ನು ಬರೆದು ಅದನ್ನು ತನ್ನ ಕುತ್ತಿಗೆಗೆ ಕಟ್ಟಿಕೊಂಡು, ಇನ್ನು ತನ್ನ ಶಿರಚ್ಛೇದನ ಮಾಡಿಸಬಹುದೆಂದೂ, ತನ್ನ ಮರಣಾನಂತರ ಅದ್ಭುತ ಕಾರ್ಯವು ನಡೆಯುವುದೆಂದೂ ನುಡಿದು ಮರಣಕ್ಕೆ ಸಿದ್ಧನಾದನು ನಿಷ್ಕರುಣಿಗಳಾದ ಕೊಲೆಗಡಿಗರು, ಒಡನೆ ಚಕ್ರವರ್ತಿಯ ಆಜ್ಞೆಯಿಂದ ಆ ಸಾಧುವಿನ ತಲೆಯನ್ನು ಕ್ಷಣಮಾತ್ರದಲ್ಲಿ ಹಾರಿಸಿದರು ತರುವಾಯ ಆ ಚೀಟಿಯಲ್ಲಿ ಏನು ಬರೆದಿರುವುದೋ ತಿಳಿಯಬೇಕೆಂದು ಅದನ್ನು ಬಿಚ್ಚಿಸಿ ಓದಿನೋಡಲು ಅದರಲ್ಲಿ, 'ನನ್ನ ಶಿಷ್ಯರು ನನ್ನ ಮೇಲೆ ತೋರಿಸಿದ ಈ ಅತ್ಯಾಚಾರದ ಸೇಡನ್ನು ತೀರಿಸಕೊಳ್ಳದಿರರು' ಎಂಬರ್ಥವು ಅದರಲ್ಲಿ ಬರೆಯಲ್ಪಟ್ಟಿದ್ದಿತು ಆಗ ಹದಿನೈದು ವರ್ಷದ ಬಾಲಕನಾಗಿದ್ದ ಆತನ ಮಗನಾದ ಗೋವಿಂದಸಿಂಗನು ತನ್ನ ತಂದೆಯ ಮರಣಕ್ಕೆ ತಕ್ಕ ಪ್ರತೀಕಾರ ಮಾಡಬೇಕೆಂದು ದೀಕ್ಷೆಗೊಂಡು ಕಾಡಿಗೆ ಹೊರಟುಹೋದನು. ಅಲ್ಲಿ ಕೆಲವು ವರ್ಷ ಕಾಲ, ಪಾರಸಿ, ಹಿಂದಿ ಮತ್ತು ಸಂಸ್ಕೃತಭಾಷೆಗಳನ್ನು ಅಭ್ಯಸಿಸಿ ಮತಧರ್ಮಗಳ ರಹಸ್ಯವನ್ನು ಸಂಪೂರ್ಣವಾಗಿ ತಿಳಿದದ್ದಲ್ಲದೆ ಯುದ್ಧವಿದ್ಯೆಯಲ್ಲೂ ಚತುರನಾದನು ಸೈನ್ಯ

ವನ್ನು ಶೇಖರಿಸುವಿಕೆ, ಅವರನ್ನು ಯುದ್ಧಕ್ಕೆ ನಡಿಸುವಿಕೆ, ರಕ್ಷಿಸುವಿಕ, ಶತ್ರುರಾಜ್ಯವನ್ನು ಧಾಳಿಮಾಡುವಿಕೆ, ಕೋಟೆ ಕೊತ್ತಲುಗಳನ್ನು ಕಟ್ಟು ವಿಕೆ, ಶಸ್ತ್ರಪ್ರಯೋಗ, ಅಶ್ವಾರೋಹಣ, ಗಜಾರೋಹಣ ಮುಂತಾದ ಎಲ್ಲಾ ಯುದ್ಧಕಲೆಗಳಲ್ಲೂ ಅತ್ಯಂತ ಪ್ರೌಢನಾದನು ಹೀಗೆ ಸಿದ್ಧನಾಗಿ ಕಾಡಿನಿಂದ ಊರಿಗೆ ಬಂದೊಡನೆಯೇ ಆವರೆಗೇ ಮೊಗಲರಮೇಲೆ ವಿಷವನ್ನು ಕಾರುತ್ತಿದ್ದ ಸಿಕ್ಕರು ಆತನನ್ನು ತಮ್ಮ ಗುರುವನ್ನಾಗಿ ಕೈಕೊಂಡರು. ಆತನು ತನ್ನ ತಂದೆಯನ್ನು ಬಹು ಕ್ರೂರರೀತಿಯಿಂದ ಸಂಹರಿಸಿದ ಔರಂಗಜೇಬನಮೇಲೆ ಛಲವನ್ನು ತೊಟ್ಟು, ತನ್ನ ಶಿಷ್ಯವರ್ಗಕ್ಕೆಲ್ಲಾ ಮತಧರ್ಮಕ್ಕಾಗಿ ಪ್ರಾಣ ಕೊಡುವುದಕ್ಕೂ ಹಿಂಜರಿಯದಿರಬೇಕೆಂದು ಬೋಧಿಸಿದನು ಅವರನ್ನೆಲ್ಲಾ ಒಂದಾಗಿ ಸೇರಿಸಿದನು. ಯುದ್ಧವಿದ್ಯೆಯಲ್ಲಿ ಶಿಕ್ಷಣವಿತ್ತನು ಕುರಿ ಮರಿಗಳಂತೆ ಭಯಭೀತರಾಗಿದ್ದ ಅವರ ಹೃದಯಕ್ಷೇತ್ರಗಳಲ್ಲಿ ಧೈರ್ಯ ಸಾಹಸಪರಾಕ್ರಮಗಳ ಬೀಜಗಳನ್ನು ಬಿತ್ತಿ ಅವರನ್ನು ಸಿಂಹಶಾಬಗಳನ್ನಾಗಿ ಮಾಡಿದನು ಮತ್ತು ಅವರ ಹೆಸರಿನ ಕೊನೆಗೆ ಸಿಂಹನೆಂಬ ಸಂಜ್ಞೆಯನ್ನು ಕೊಡುವ—ಸಿಂಗನೆಂಬ ಪ್ರತ್ಯಯವನ್ನೂ ಸೇರಿಸಿಕೊಟ್ಟನು ಹೀಗೆ ವೀರಾ ಗ್ರಣಿಯಾದ ಗೋವಿಂದಸಿಂಗನು, ಗುರುವೂ ಸೇನಾಪತಿಯೂ ಮಾರ್ಗ ದರ್ಶಕನೂ ಆಗಿರಲು ಸಿಕ್ಕರು ಧೈರ್ಯಪರಾಕ್ರಮಧುರ್ಯರಾಗಿ ಮೊಗಲ ರನ್ನು ಕಂಡಕಂಡಲ್ಲಿ ಎದುರಿಸಿದರು ಅವರ ಅನೇಕ ಕೋಟೆಗಳನ್ನು ಹಿಡಿದು ನೆಲಸಮ ಮಾಡಿದರು ತಮ್ಮ ಕೋಟೆಗಳನ್ನು ಕಟ್ಟಿ ಅವರಿಂದ ರಕ್ಷಿಸ ಲ್ಪಟ್ಟಿದ್ದ ನಾಡುಗಳಲ್ಲಿ ತಮ್ಮ ಆಧಿಪತ್ಯವನ್ನು ಸ್ಥಾಪನೆ ಮಾಡಿದರು. ಸಿಕ್ಕರ ಪ್ರತಾಪವು ಹಿಂದಿನ ರಾಜಪುತ್ರವೀರರ ಶೌರ್ಯಪರಾಕ್ರಮಗಳಿಗೆ ಸರಿಗಟ್ಟುವಂತಿತ್ತು. ಹೀಗೆ ಬಾಬಾನಾನಕನ ಪರಂಪರೆಯಲ್ಲಿ ಹತ್ತನೆಯವ ನಾದ ಗುರುಗೋವಿಂದಸಿಂಗನು ದುರ್ಬಲರಾಗಿದ್ದ ಸಿಕ್ಕರನ್ನು ಒಂದು ವೀರ ಜನಾಂಗವನ್ನಾಗಿ ಮಾಡಿ ಯಶೋವಂತನಾದನು



ಅಧ್ಯಾಯ ೨ "ರಣಜಿತ್ ಸಿಂಗ್"

ಧರ್ಮಗುರುವಾದ ಗೋವಿಂದಸಿಂಗನೇ ರಣಧೀರ ಸೇನಾಪತಿಯೂ ಆಗಿ ಸಿಕ್ಕರನ್ನು ವೀರಸೇನಾನಿಗಳನ್ನಾಗಿ ಮಾಡಿದನಷ್ಟೆ! ಆತನೊಂದಿಗೆ ಸಿಕ್ ಮತಕ್ಕೆ ಧರ್ಮಗುರುಪೀಠವು ಅಂತ್ಯವಾಯಿತು ಆತನನ್ನನುಸರಿಸಿ ಮುಂದೆ ಆತನ ಸ್ಥಾನಕ್ಕೆ ಬಂದವರು, ಸೇನಾಪತಿಗಳಾಗಿ ಬಂದರಲ್ಲದೆ ಧರ್ಮಗುರುಗಳಾಗಿ ಬರಲಿಲ್ಲ ಆತನ ನಾಲ್ಕುಮಂದಿ ಮಕ್ಕಳಲ್ಲಿ ಇಬ್ಬರು, ಆತನು ರಾಜಪುತ್ರರ ಮತ್ತು ಮೊಗಲರಮೇಲೆ ಪ್ರಾರಂಭಿಸಿದ ಮೊದಲನೆಯ ಯುದ್ಧದಲ್ಲಿ ರಣದೇವತೆಗೆ ಬಲಿಯಾದರು ಮತ್ತಿಬ್ಬರನ್ನೂ ಶತ್ರುಗಳು ಸೆರೆಹಿಡಿದು ಸಜೀವ ಹೂಳಿ ಕೊಂದುಬಿಟ್ಟರು ಆದರೂ ಆತನು ಧೈರ್ಯಗೆಡಲಿಲ್ಲ! ಮೊಗಲರು ಎದುರಿಸಿದಂತೆಲ್ಲಾ ಆತನಲ್ಲಿ ಕ್ಷಾತ್ರತೇಜವು ಅಧಿಕವಾಗುತ್ತಿತ್ತು. ಕಷ್ಟಗಳು ಬಂದಂತೆಲ್ಲಾ ಅವಕ್ಕೆ ಬೆದರದೆ, ಅವನ್ನು ಎದುರಿಸುವ ಆಕಾಂಕ್ಷೆಯು ಆತನಲ್ಲಿ ಅಧಿಕಾಧಿಕವಾಗುತ್ತಿತ್ತು. ತನ್ನ ಧುರೀಣನಲ್ಲಿ ತೋರಿಬರುತ್ತಿದ್ದ ಈ ಆದರ್ಶವು ಸಿಕ್ ಜನರಲ್ಲಿ ಅಕ್ಷಯವಾದ ಧೈರ್ಯ ಸಾಹಸಗಳನ್ನುಂಟುಮಾಡಿತು ಅವರು ತಮ್ಮ ಧರ್ಮದ ಹೆಸರಿನಲ್ಲಿ ಭಯಂಕರ ಶತ್ರುಗಳಾದ ಮೊಗಲರೊಂದಿಗೆ ಪ್ರಾಣಾಂತ್ಯದವರೆಗೂ ಹೊಡೆದಾಡಲು ಸಿದ್ಧರಾದರು. ಔರಂಗಜೇಬನು ಅವರನ್ನು ಅಡಗಿಸಬೇಕೆಂದು ಮಾಡಿದ ಸಕಲ ಪ್ರಯತ್ನಗಳೂ ವ್ಯರ್ಥವಾದುವು ಆತನು ಅವರಿಗೆ ಉಂಟುಮಾಡಿದ ಹಿಂಸೆ-ತಿರುಕುಳಗಳು ಒಂದೆರಡಲ್ಲ! ಆದರೆ ಅವುಗಳೆಲ್ಲವೂ ಒಬ್ಬನನ್ನಾದರೂ ತನ್ನ ಧರ್ಮತ್ಯಾಗಮಾಡಿ ಮುಸಲ್ಮಾನ ಧರ್ಮವನ್ನು ಆಶ್ರಯಿಸಲು ಸಿದ್ಧನನ್ನಾಗಿ ಮಾಡಲಿಲ್ಲ ಅಲ್ಲದೆ ಆತನು ಕೊಟ್ಟ ಪ್ರಾಣಸಂಕಟಗಳೆಲ್ಲಾ ಮೇಲೆಮೇಲೆ ಅವರಲ್ಲಿ ಧರ್ಮಾಭಿಮಾನವನ್ನೂ, ಐಕಮತ್ಯವನ್ನೂ ಇನ್ನೂ ಹೆಚ್ಚು ಮಾಡಿದುವು ಔರಂಗಜೇಬನು ದಕ್ಷಿಣದಲ್ಲಿ ಮರಾಟಿಯುವರನ್ನು ಅಣಗಿಸಲೆತ್ನಿಸಿ ಹತಾಶನಾದಂತೆಯೇ ಇಲ್ಲೂ ಸಿಕ್ಕರನ್ನು ಅಡಗಿಸಲು ಯತ್ನಿಸಿ ನಿರಾಶನಾದನು ಎಲ್ಲೆಲ್ಲೂ ಶತ್ರುಗಳು ಅಧಿಕವಾದರು ಕೊನೆಗೆ ಆ ಮೊಗಲ್ ಚಕ್ರವರ್ತಿಯು ತನ್ನ ಜೀವಿತವು ವ್ಯರ್ಥವಾಯಿತೆಂದುಕೊಂಡು ೧೭೦೭ ನೆಯ ಸಂವತ್ಸರದಲ್ಲಿ ಇಹಲೋಕವನ್ನು ತ್ಯಾಗಮಾಡಿ ಹೊರಟುಹೋದನು.

ಗುರುಗೋವಿಂದಸಿಂಗನ ತರುವಾಯ ಆತನ ಸ್ಥಾನದಲ್ಲಿ ಸೇನಾಪತಿಯಾದ ಬಾಂಡಾ ಎಂಬ ಸರದಾರನೂ ಔರಂಗಜೇಬನ ತರುವಾಯ ಪಟ್ಟಕ್ಕೆ ಬಂದ ಮೂವರು ರಾಜರ ಕಾಲದಲ್ಲಿ ಮೊಗಲ್ ಸೈನ್ಯವನ್ನು ಕಂಡಕಂಡಲ್ಲಿ ಎದುರಿಸಿ ಸೋಲಿಸಿ, ಅವರನ್ನು ಹಣ್ಣುಹಣ್ಣುಮಾಡಿದನು. ಮೊಗಲರು ಸಿಕ್ ಸೈನಿಕರೆಂದರೆ ಭಯಗೊಂಡು ನಡುಗುವಂತಾಯಿತು. ಕೊನೆಗೆ ಆತನು ಒಂದಾನೊಂದು ಯುದ್ಧದಲ್ಲಿ ತನ್ನ ಸಹಸ್ರಾರು ಅನುಯಾಯಿಗಳೊಂದಿಗೆ ಸೆರೆಯಾಗಿ ದಹಲಿಗೆ ಒಯ್ಯಲ್ಪಟ್ಟನು. ಅಲ್ಲಿ ಅವನಿಗೆ ಚಿತ್ರಹಿಂಸೆಗಳನ್ನಿತ್ತು ಧರ್ಮಚ್ಯುತನನ್ನಾಗಿ ಮಾಡಲು ಯತ್ನಿಸಿದರು. ಅವನ ಮಗನನ್ನು ಅವನ ಕೈಯಿಂದಲೇ ಕೊಲ್ಲಲು ನಿರ್ಬಂಧಿಸಿದರು. ಆದರೂ ಆ ಧೀರವರನು ಧರ್ಮತ್ಯಾಗಮಾಡದಿರಲು, ಅನಿರ್ವಚನೀಯವಾದ ಹಿಂಸಾಕೃತ್ಯಗಳಿಂದ ಅವನನ್ನು ವಧಿಸಿದರು. ತರುವಾಯ ಮೊಗಲ್ ಚಕ್ರಾಧಿಪತ್ಯದ ಬಲವೂ ಸಡಿಲವಾಯಿತು. ನಾದಿರ್‌ಷಹ, ಅಹಮದ್‌ಷಹ ಅಬ್ದಾಲಿ ಮುಂತಾದವರು ಬಂದು ದೆಹಲಿಯನ್ನು ಹೊಕ್ಕು, ಪೂರ್ವದ ವೈಭವಗಳನ್ನೆಲ್ಲಾ ನಾಶಗೊಳಿಸಿದರು. ಮುಂದೆ ಸುಪ್ರಸಿದ್ಧವೂ, ಪ್ರಬಲವೂ ಆಗಿದ್ದ ಮೊಗಲ್ ಪ್ರಭುಗಳ ಅಧಿಕಾರವು ದುರ್ಬಲವಾಯಿತು. ಸುತ್ತಲೂ ಇದ್ದ ಅಧೀನರಾಜರು ಅಲ್ಲಲ್ಲಿ ಸ್ವತಂತ್ರರಾದರು. ಪಂಜಾಬಿನಲ್ಲೂ, ಸಿಕ್‌ಸೈನ್ಯದಲ್ಲಿ ಬಹು ದಿನಗಳಿಂದಲೂ ಪ್ರಬಲರಾಗಿದ್ದ ನಾಯಕರು ಅಲ್ಲಲ್ಲೆ ಮಿಸಲೆ (ತುಕಡಿ) ಗಳನ್ನು ಸ್ಥಾಪಿಸಿಕೊಂಡು ಸ್ವತಂತ್ರರಾದರು. ಹೀಗೆ ಪಂಜಾಬುದೇಶದಲ್ಲಿ ಪ್ರಬಲರಾಗಿದ್ದವುಗಳಲ್ಲಿ ಈ ಕೆಳಗೆ ಕಾಣಿಸಿರುವ ಈ ಹನ್ನೆರಡು ಮನೆತನಗಳು ಪ್ರಖ್ಯಾತವಾದುವು —

| | |
|---|---|
| ೧ ಫೂಲ್ಕಿಯಾನ್ | ೭ ಕ್ರೋರಾಸಿಂಗ್ಯಾ |
| ೨ ಅಹ್ಲೂವಾಲಿಯಾ | ೮ ನಿಷಾನಿಯಾ |
| ೩ ಭಾಂಗಿ | ೯. ಶೂಕರ್‌ಛಾಕಿಯಾ |
| ೪ ಕಾನ್ಹೇಯಾ | ೧೦. ದೂಲೇಲ್‌ವಾಲಾ |
| ೫ ರಾಮಗಾರ್ಹಿಯಾ | ೧೧ ನಕ್ಕಾಯಿಸ್ |
| ೬ ಸಿಂಗ್‌ಪೂರಿಯಾ | ೧೨. ಷಾಹಿಡ್ಸ್ |

ಸುಪ್ರಸಿದ್ಧಗಳಾದ ಈ ಹನ್ನೆರಡು ಮುಖ್ಯ ಮನೆತನಗಳಲ್ಲದೆ, ಹೆಸರಿಗೆ ಬಾರದ ಇನ್ನೂ ಅನೇಕ ಸರದಾರರ ಮನೆತನಗಳೂ ಇದ್ದುವು. ಆದರ

ಮೇಲ್ಕಂಡ ಈ ಹನ್ನೆರಡು ಸರದಾರ ಮನೆತನಗಳವರು ಮಾತ್ರವೇ, ಪ್ರಬಲರಾಗಿ ತಮ್ಮ ಸುತ್ತುಮುತ್ತಲಿನ ಗಡಿದುರ್ಗಗಳನ್ನೂ, ಹಳ್ಳಿಪಳ್ಳಿಗಳನ್ನೂ ಅಲ್ಲದೆ ಇತರ ಸಾಮಾನ್ಯ ಸರದಾರರನ್ನೂ ತಮ್ಮ ಸ್ವಾಧೀನಕ್ಕೆ ಒಳಪಡಿಸಿಕೊಂಡು ರಾಜ್ಯವಾಳಿಕೊಂಡಿದ್ದರು. ಇವರಲ್ಲಿ ಪಾಟಿಯಾಲಾ, ಜಿಂಥ್, ನಾಭಾ ಮುಂತಾದ ಕೆಲವು ಸಂಸ್ಥಾನಗಳು ಈಗಲೂ ಪ್ರಸಿದ್ಧಗಳಾಗಿಯೇ ಇವೆ,

ಈ ಹನ್ನೆರಡು ಮನೆತನಗಳಲ್ಲಿ ಒಂಬತ್ತನೆಯದಾದ ಶೂಕರ್ ಛಾಕಿಯಾ ಮನೆತನವೇ ನಮ್ಮ ಕಥಾನಾಯಕನ ಜನ್ಮದಿಂದ ವಿಶೇಷ ಪ್ರಖ್ಯಾತವಾದುದು ಈ ವಂಶದ ಮೂಲಪುರುಷನು ಬಥಾಸಿಂಗ್ ಎಂಬಾತನು ಅವನು ಮಹಾ ಧೈರ್ಯಶಾಲಿಯೂ, ಯುದ್ಧ ಕಲೆಯಲ್ಲಿ ಪರಭಯಂಕರನಾದ ಕಲಿಯೂ ಆಗಿದ್ದನು ಆತನ ಹೆಸರೇ ಆ ಪ್ರಾಂತದಲ್ಲಿ ಸಿಂಹಸ್ವಪ್ನವಾಗಿತ್ತು ಆತನ ಮೈಮೇಲೆ ಈಟಿ, ಕತ್ತಿ, ಮತ್ತು ಗಂಡುಗೊಡಲಿಗಳಿಂದ ಆದ ನಾಲ್ವತ್ತು ಗಾಯಗಳಿದ್ದವು. ಇಂತಹ ವೀರಾಗ್ರೇಸರನು, ಕೊನೆಗೆ ಬಹು ಸಾಧು ಮನುಷ್ಯನಂತೆ ತನ್ನ ಹಾಸಿಗೆಯಲ್ಲಿ ಮಲಗಿ ಪ್ರಾಣಬಿಟ್ಟದು ಮಾತ್ರ ಆಶ್ಚರ್ಯಕರ ಪ್ರಸಂಗವು —

ಬಥಾಸಿಂಗನ ತರುವಾಯ ಆ ವಂಶೀಕರು ದಿನದಿನಕ್ಕೆ ಪ್ರಬಲರಾಗುತ್ತಾ ಬಂದರು ಈತನ ಮಕ್ಕಳು ಅಮೃತಸರ ಡಿಸ್ಟ್ರಿಕ್ಟನಲ್ಲಿ ಶೂಕರ್ ಛಾಕ್ ಎಂಬ ಗ್ರಾಮವನ್ನು ಕಟ್ಟಿ ಸುತ್ತುಮುತ್ತಲಿನ ಪ್ರಾಂತಗಳನ್ನು ಸ್ವಾಧೀನಪಡಿಸಿಕೊಂಡು ಪ್ರಸಿದ್ಧರಾದರು ಮತ್ತು ಅವರ ಸಂತತಿಯೂ ಶೂಕರ್ ಛಾಕಿಯಾ ವಂಶವೆಂದು ಹೆಸರುಗೊಂಡಿತು ಕೊನೆಗೆ ಕ್ರಿ ಶ. ೧೮ನೆಯ ಶತಮಾನದ ಕೊನೆಯ ಭಾಗದಲ್ಲಿ ಮಹಾನ್‌ಸಿಂಗ್‌ನೆಂಬ ವೀರನು ಆ ವಂಶವನ್ನು ಅಲಂಕರಿಸಿದನು ಈತನ ಮಗನೇ ನಮ್ಮ ಕಥಾನಾಯಕನಾದ ರಣಜಿತ್‌ಸಿಂಗನು. ಮಹಾನ್‌ಸಿಂಗನು ೧೭೭೪ನೆಯ ಸಂವತ್ಸರದಲ್ಲಿ ಜಿಂಥ್ ಸಂಸ್ಥಾನದ ರಾಜಾ ಗಜಪತ್‌ಸಿಂಗ್ ಎಂಬ ಪ್ರಭುವಿನ ಮಗಳಾದ ರಾಜಕುವರ್ ಎಂಬ ಕನ್ಯಾಮಣಿಯನ್ನು ವಿವಾಹವಾದನು.

ಸರದಾರ್ ಮಹಾನ್‌ಸಿಂಗನು ಮಹಾ ಧೈರ್ಯಶಾಲಿಯು. ಯುದ್ಧ ಕಲಾವಿಶಾರದನು. ಅಂಜಿಕೆಯೆಂದರೇನೆಂದು ಅರಿಯದವನು. ಅವನು ತನ್ನ

ತೋಳಬಲಿಮೆಯಿಂದ ತನ್ನ ಹಿರಿಯರ ಕಾಲಕ್ಕೆ ಸ್ವಾಧೀನಕ್ಕೆ ಬಾರದಿದ್ದ ಅನೇಕ ಪ್ರಾಂತಗಳನ್ನು ಯುದ್ಧದಲ್ಲಿ ಜಯಿಸಿ ಸ್ವಾಧೀನಗೊಂಡು, ರಾಜ್ಯವ ನ್ನಾಳುತ್ತಾ, ಪತ್ನಿಯೊಂದಿಗೆ ಸುಖಸಂತೋಷಗಳಲ್ಲಿ ಓಲಾಡುತ್ತಾ ಇದ್ದನು ಹೀಗೆ ಪರಸ್ಪರ ಅನುರಕ್ತರಾಗಿದ್ದ ಆ ದಂಪತಿಗಳ ಉದರದಲ್ಲಿ ನಮ್ಮ ಕಥಾ ನಾಯಕನು ೧೭೮೦ನೆಯ ಸಂವತ್ಸರದಲ್ಲಿ ಗುಜರ್‌ವಾಲಾ ಎಂಬ ಊರಿನಲ್ಲಿ ಜನಿಸಿದನು ಬಹು ದಿನಗಳಿಂದ ಮಕ್ಕಳಿಲ್ಲದೆ ಪಡೆದ ಒಬ್ಬನೇ ಮಗನಾದುದರಿಂದ ಆ ತರುಣ ರಾಜದಂಪತಿಗಳು ಆ ತಮ್ಮ ಕಂದನನ್ನು ವಿವಿಧ ವಸ್ತ್ರಾಭರಣಗಳಿಂದ ಸಿಂಗರಿಸಿ, ಬಗೆಬಗೆಯ ಉತ್ಸವ ವೈಭವಗಳನ್ನು ನಡಿಸಿ, ಪರಿಪರಿಯಲ್ಲಿ ಹಾಡಿ ಹರಸಿ, ಆ ಮಗುವಿನ ಬಾಲಲೀಲೆಗಳನ್ನು ನೋಡಿ ಪರಮಾನಂದಪಟ್ಟು ದಿನಗಳನ್ನು ಕ್ಷಣಗಳೋ ಎಂಬಂತೆ ಕಳೆಯುತ್ತಾ ಕೆಲ ಕಾಲ ಸುಖವಾಗಿದ್ದರು

ಮಹಾನ್‌ಸಿಂಗನ ಅದೃಷ್ಟ ತಸುವು ದಿನದಿನಕ್ಕೆ ಬೆಳೆಯುತ್ತಿದ್ದಿತು. ಕೆಲವು ದಿನಗಳಲ್ಲೇ ಕಾನ್ಹೇಯಾ ವಂಶದ ಹಕೀಕತ್‌ಸಿಂಗ್ ಎಂಬಾತನು ತನಗಧೀನನಾದ ಜಮ್ಮುವಿನ ನಾಯಕನು ವಾಯಿದೆಗೆ ಸರಿಯಾಗಿ ಕಪ್ಪ ಕಾಣಿಕೆಗಳನ್ನು ಸಲ್ಲಿಸಲಿಲ್ಲವಾದುದರಿಂದ, ಅವನಿಂದ ಪೊಗದಿಯ ಹಣವನ್ನು ಬಾಹುಬಲದಿಂದ ಸೆಳೆದುಕೊಳ್ಳುವುದಕ್ಕಾಗಿ ತನಗೆ ಸಹಾಯ ಮಾಡೆಂದು ಮಹಾನ್‌ಸಿಂಗನನ್ನು ಕೇಳಿಕೊಂಡನು ಯುದ್ಧವೆಂದರೆ ಒಂಟಿಗಾಲಲ್ಲಿ ನಿಂತಿರುವವನಾದ ಮಹಾನ್‌ಸಿಂಗನನ್ನು ಕೇಳಬೇಕಾದುದೇನು? ಒಡನೆ ಹೊರಟು, ಹಕೀಕತ್‌ಸಿಂಗನಿಗಾಗಿ ನಿರೀಕ್ಷಣೆ ಮಾಡದೆ, ತಾನೇ ಸೈನ್ಯದೊಡನೆ ನೇರವಾಗಿ ಜಮ್ಮುವಿಗೆ ನಡೆದು, ಪಟ್ಟಣ-ಅರಮನೆಗಳನ್ನು ಸುಟ್ಟು ಧ್ವಂಸ ಮಾಡಿ, ಆ ಪ್ರಾಂತವನ್ನೆಲ್ಲಾ ಕೊಳ್ಳೆಹೊಡೆದುಕೊಂಡು ಅಮಿತ ಸಂಪತ್ತಿನೊಂದಿಗೆ ತನ್ನ ರಾಜಧಾನಿಯನ್ನು ಸೇರಿಬಿಟ್ಟನು ತರುವಾಯ ಅಲ್ಲಿಗೆ ಹೋದ ಹಕೀಕತ್‌ಸಿಂಗನು ಇದನ್ನು ಕಂಡು ಸ್ವಾಭಾವಿಕವಾಗಿಯೇ ಕುಪಿತನಾದನಾದರೂ, ಪ್ರಬಲವೀರನಾದ ಅವನಿಗೆ ಪ್ರತೀಕಾರ ಮಾಡಲು ಶಕ್ತಿಸಾಲದೆ, ವ್ಯಸನಪಟ್ಟು, ಕೆಲ ದಿನಗಳಿದ್ದು, ಮೃತನಾದನು. ಆದರೂ ಕಾನ್ಹೇಯಾ ವೀರರನೇಕರಿಗೆ ಮಹಾನ್‌ಸಿಂಗನಮೇಲೆ ಅಸಹನೀಯವಾಗಿದ್ದ ರೋಷವು, ಒಂದೆರಡು ವರ್ಷಗಳಲ್ಲೇ ಪುನಃ ಆತನಮೇಲೆ ದಂಡೆತ್ತುವಂತೆ

ಅವರನ್ನು ಪ್ರೇರಿಸಿತು. ಸರದಾರ ಜಯಸಿಂಗನೆಂಬಾತನು ೧೭೮೪ರಲ್ಲಿ ಆತನಮೇಲೆ ದಂಡೆತ್ತಿ ಬಂದನಾದರೂ ಜಯಿಸಲಾರದೆ ಸಂಪೂರ್ಣವಾಗಿ ಸೋತು, ತನ್ನ ರಾಜ್ಯ-ಸೈನ್ಯ-ಯುದ್ಧ ಸಾಮಗ್ರಿಗಳು ಮುಂತಾದವನ್ನು ಮಹಾನ್‌ಸಿಂಗನ ವಶಮಾಡಬೇಕಾಯಿತಲ್ಲದೆ, ತನ್ನ ಮಗನ ಮಗಳಾದ ಮತ್ತಾಬ್ ಕುವರ್ ಎಂಬ ಶಿಶುವನ್ನು ಆಗ ಆರು ವರ್ಷ ವಯಸ್ಕನಾಗಿದ್ದ ಆತನ ಮಗನಾದ ರಾಜಕುಮಾರ ರಣಜಿತ್‌ಸಿಂಗನಿಗೆ ಮದುವೆ ಮಾಡಿಕೊಡಲು ಒಪ್ಪಬೇಕಾಯಿತು ಮಹಾನ್‌ಸಿಂಗನು ವಿಜಯೋತ್ಸವದೊಂದಿಗೆ ರಾಜಧಾನಿಗೆ ಪ್ರವೇಶಿಸಿ, ಮಗನ ಮದುವೆಯನ್ನು ಬಹು ಸಂಭ್ರಮದಿಂದ ನಡೆಯಿಸಿ, ಪ್ರಜೆ ಪರಿವಾರಗಳನ್ನು ವಿವಿಧರೀತಿಯಿಂದ ಆದರಿಸಿದನು

ಮಹಾನ್‌ಸಿಂಗನು ಯುದ್ಧಕ್ಷೇತ್ರದಲ್ಲೇ ಹುಟ್ಟಿ, ಅದರಲ್ಲೇ ಬೆಳೆದವನು! ಆತನ ಆಟವೆಂದರೂ ಪಾಟವೆಂದರೂ ಯುದ್ಧವೇ! ಆತನ ಸಂಭಾಷಣೆ ಯೋಚನೆಗಳೂ ಯುದ್ಧಸಂಬಂಧವಾದುವೇ! ಹೀಗೆ ಕೇವಲ ಶಸ್ತ್ರಜೀವಿಯಾದ ಆತನು ತನ್ನ ಮಗನಿಗೂ ಆ ರಣವಿದ್ಯೆಯನ್ನಲ್ಲದೆ ಮತ್ತೇನನ್ನು ಹೇಳಿಕೊಟ್ಟಾನು? ಚಿಕ್ಕ ರಣಜಿತ್‌ಸಿಂಗನಿಗೆ ಶಸ್ತ್ರವಿದ್ಯೆಯೇ ಪ್ರಥಮಪಾಠವಾಯಿತು. ತಂದೆಯು ತನ್ನಾ ಮಗನಿಗೆ ಬಾಲ್ಯದಿಂದಲೇ ಕತ್ತಿ, ಈಟಿ, ಬಿಲ್ಲುಬಾಣಗಳ ಪ್ರಯೋಗ, ಕುದುರೆಸವಾರಿ, ಈಜುವುದು, ಹಾರುವುದು, ಮರವೇರುವುದು, ಮಲ್ಲಯುದ್ಧ, ಗರುಡಿಯ ಸಾಧಕ ಮುಂತಾದುವುಗಳಲ್ಲೇ ಶಿಕ್ಷಿಸುತ್ತಾ ಬಂದನು ರಣಜಿತನೂ ಸ್ವಾಭಾವಿಕವಾಗಿಯೇ ಶೂರಪುತ್ರನಾದುದರಿಂದ ಮಹದುತ್ಸಾಹದಿಂದ ಆ ವೀರವಿದ್ಯೆಗಳನ್ನೇ ಹೆಚ್ಚಾಗಿ ಪ್ರೀತಿಸಿ, ಆ ಎಲ್ಲಾ ಸಾಧನೆಗಳಲ್ಲೂ ಚನ್ನಾಗಿ ಪರಿಶ್ರಮವನ್ನು ಸಂಪಾದಿಸಿದನು. ಮಹಾನ್‌ಸಿಂಗನಿಗೆ ನೆರೆಯ ಭಾಂಗಿ ಎಂಬ ಪ್ರಾಂತದ ಸರದಾರರೊಂದಿಗೆ ಯಾವಾಗಲೂ ಯುದ್ಧವಿದ್ದೇ ಇರುತ್ತಿತ್ತು. ಅವರಲ್ಲಿ ಸಾಹಿಬ್‌ಸಿಂಗ್ ಎಂಬೊಬ್ಬ ವೀರನಿಗೆ ತನ್ನ ತಂಗಿಯನ್ನೇ ಕೊಟ್ಟು ಮದುವೆ ಮಾಡಿದ್ದರೂ, ಕ್ಷಾತ್ರತೇಜಸ್ಸಂಪನ್ನನಾದ ಮಹಾನ್‌ಸಿಂಗನು ಅದನ್ನು ಗಮನಿಸದೆ ಅವರ ಮೇಲೆ ಪ್ರಾಣಾಂತ್ಯಕಾರಿಯಾದ ಯುದ್ಧದಲ್ಲಿ ಸದಾ ಪ್ರವೃತ್ತನಾಗಿದ್ದನು ಯುದ್ಧದ ಮಧ್ಯಕಾಲದಲ್ಲೊಂದು ದಿನ ಸಾಹಿಬ್‌ಸಿಂಗನು ರೋಗಗ್ರಸ್ತನಾಗಿರಲು, ಕರ್ಮಸಿಂಗನೆಂಬಾತನು ಆತನ ಸಹಾಯಕ್ಕೆ ಬಂದಿದ್ದನು. ಮಹಾನ್‌ಸಿಂಗನು

ರ್ತಸಿಂಗನೊಂದಿಗೆ ತೊಡಗಿದ ಯುದ್ಧದಲ್ಲಿ ಆಯತಪ್ಪಿ ಏಟುಬೀಳಲು, ಧಿಕರಕ್ತಸ್ರಾವವಾಗಿ ತರುವಾಯ ಮೂರು ದಿನಗಳಮೇಲೆ ಎಂದರೆ ತನ್ನ ಪ್ಪತ್ತೇಳನೆಯ ವಯಸ್ಸಿನಲ್ಲಿ ಮೃತನಾದನು. (೧೭೯೨)

ಮಹಾನ್‌ಸಿಂಗನು ಮೃತನಾದಾಗ ರಣಜಿತ್‌ಸಿಂಗನ ವಯಸ್ಸು ಕೇಲ ಹನ್ನೆರಡು ವರ್ಷಗಳು ಮಾತ್ರವಾಗಿತ್ತು. ಆ ವೇಳೆಗೇ ಅವನು, ತಂದೆನ್ನು ಹಿಂಬಾಲಿಸಿ, ಯುದ್ಧಗಳಿಗೆ ಹೋಗುತ್ತಿದ್ದನು. ೧೭೯೦ರಲ್ಲಿ ಅವನು ನ್ನ ಶತ್ರುವಾದ ಗುಲಾಂಮಹಮ್ಮದ್ ಎಂಬಾತನನ್ನು ಎದುರಿಸಿ, ಆತನ ಸಾಂಛಾರ್‌ಕೋಟೆಯನ್ನು ಮುತ್ತಿದಾಗ, ಕೇವಲ ಹತ್ತು ವರ್ಷಗಳ ಬಾಲನಾಗಿದ್ದ ರಣಜಿತ್‌ಸಿಂಗನೂ ಆನೆಯಮೇಲೆ ಕುಳಿತು, ಯುದ್ಧರಂಗದಲ್ಲಿ ಂಚರಿಸುತ್ತಿದ್ದನು. ಆಗ ಅವನ ಪ್ರಾಣದಮೇಲೆ ಒದಗಿದ ಒಂದು ಗಂಡಾಂರದಿಂದ, ಅವನು ಆಗಲೇ ಗತಾಯುವಾಗಬೇಕಿತ್ತು. ಗುಲಾಂ ಮಹಮ್ಮನ ಅನುಬಂಧಿಯಾದ ಹಸ್ಮತ್‌ಖಾನನೆಂಬ ತುರುಷ್ಕನು ಚಿಕ್ಕ ರಣಜಿತ್ ಂಗನು ಕುಳಿತಿದ್ದ ಆನೆಯಮೇಲಕ್ಕೇರಿ ತನ್ನ ಕೈಕತ್ತಿಯಿಂದ ರಾಜಪುತ್ರನ್ನು ತೀರಿಸಿಬಿಡುವುದರಲ್ಲಿದ್ದನು. ಅಷ್ಟರಲ್ಲಿ ಪಕ್ಕದಲ್ಲಿದ್ದ ಭೃತ್ಯನೊಬ್ಬನುನ್ನ ಕೈಯಲ್ಲಿನ ಈಟಿಯಿಂದ ಅವನನ್ನು ಇರಿದು ಕೆಳಕ್ಕೆ ಕೆಡಹಿ ರಾಜಪುತ್ರನ ಪ್ರಾಣವನ್ನು ಉಳುಹಿಸಿದನು. ಹಾಗಲ್ಲದೆ, ರಣಜಿತ್‌ಸಿಂಗನು ಆಗಲೇ ಮೃತನಾಗಿದ್ದರೆ, ಪಂಜಾಬಿನ-ಹಿಂದೂದೇಶದ-ಹೆಚ್ಚೇನು ಇಂಗ್ಲೆಂಡು ದೇಶದ ಚರಿತ್ರೆಗಳು ಈಗಿನಗಿಂತಲೂ ಯಾವ ರೂಪಾಂತರವನ್ನು ಹೊಂದಬೇಕಾತ್ತೆಂಬುದನ್ನು ಊಹಿಸುವುದಸಾಧ್ಯ ! ಎಂತೂ ರಾಜಪುತ್ರನು ಉಳಿದನು ಮೇಲ್ಕಂಡಂತೆ ತಂದೆಯು ಮೃತನಾಗಿ ಏಕಾಕಿಯಾಗಿಯೂ ನಿಂತನು. ಮುಂದೆ ತೃಹೀನನಾದ ರಣಜಿತ್‌ಸಿಂಗನ ಜೀವಿತವು, ಹೇಗೆ ಸಾಗುವುದೆಂದು ನೋಡೋಣ !



**ಅಧ್ಯಾಯ ೩** **"ರಾಜ್ಯಲಾಭ"**

ನಮ್ಮ ಕಥಾನಾಯಕನಂತೆ ಬಾಲ್ಯದಲ್ಲೇ ತಂದೆಗಳನ್ನು ಕಳೆದುಕೊಂಡು ಆದರೂ ತಮ್ಮಲ್ಲಿ ಅಂತರ್ಗತವಾಗಿದ್ದ ಆತ್ಮತೇಜದಮೂಲಕ ದೇಶಚರಿತ್ರೆಯಲ್ಲಿ ಸುಪ್ರಸಿದ್ಧ ವ್ಯಕ್ತಿಗಳೆಂದು ಹೆಸರುಗೊಂಡವರು ಕೆಲವರುಂಟು. ಬಾಬರನು ಚಿಕ್ಕಂದಿನಲ್ಲೇ ತಂದೆಯನ್ನು ಕಳೆದುಕೊಂಡು ಪಡಲಾಗದ-ಅಸಹ್ಯ ದುಃಖ ಸಂಕಟಗಳನ್ನನುಭವಿಸಿ ಕೊನೆಗೆ, ಮೂರು ನಾಲ್ಕು ಶತಮಾನಕಾಲ ಜೀವಿಸಿ ಆಚಂದ್ರಾರ್ಕಸ್ಥಾಯಿಯಾದ ಕೀರ್ತಿ ಪ್ರತಿಷ್ಠೆಗಳನ್ನು ಗಳಿಸಿದ ಮೊಗಲ್ ಸಾಮ್ರಾಜ್ಯವನ್ನೇ ಸ್ಥಾಪಿಸಿಬಿಟ್ಟನು. ದಕ್ಷಿಣದೇಶದ ನಮ್ಮ ಈ ಮೈಸೂರು ಸಂಸ್ಥಾನದಲ್ಲೇ ಹೈದರನು ಚಿಕ್ಕತನದಲ್ಲಿ ತಂದೆಯನ್ನು ಕಳೆಗುಕೊಂಡು ಕೇವಲ ಹೀನಸ್ಥಿತಿಯಲ್ಲಿದ್ದರೂ ಸ್ವಶಕ್ತಿಯಿಂದ ಪ್ರಭುಪದವನ್ನು ಸಂಪಾದಿಸಿ ಪ್ರಾಚೀನ ಹಿಂದೂ ಸಂಸ್ಥಾನವೆಂದು ಚರಿತ್ರಪ್ರಸಿದ್ಧವಾದ ಮೈಸೂರು ರಾಜಗದ್ದಿಗೆಯ ಮೇಲೆ, ಮಹಮ್ಮದೀಯರ ಆಧಿಪತ್ಯವನ್ನು ಸ್ಥಾಪಿಸಿ ಹೆಸರ್ಗೊಂಡನು ಶಿವಾಜಿಯು ಪಿತೃವಿಹೀನನಾಗದಿದ್ದರೂ, ಜೀವಿತನಾಗಿದ್ದ ತನ್ನ ತಂದೆಯಿಂದಲೇ ತನ್ನ ಕಾರ್ಯಕ್ಕೆ ಬೆಂಬಲವೊದಗುವುದಂತಿರಲಿ, ನಿರುತ್ಸಾಹ ಜನಕವಾದ ತಡೆ-ತಕರಾರು-ನಿರ್ಬಂಧಗಳೇ ಒದಗುತ್ತಿದ್ದರೂ, ಅವುಗಳನ್ನೆಲ್ಲಾ ನಿವಾರಿಸಿಕೊಂಡು, ಮರುಭೂಮಿಯಲ್ಲಿ ಕಲ್ಪವೃಕ್ಷವನ್ನು ನಟ್ಟು ಬೆಳೆಯಿಸಿದಂತೆ-ಬಿಳಿಯಮೇಘಗಳಿಂದ ಕುಂಭದ್ರೋಣವೃಷ್ಟಿಯನ್ನು ಸುರಿಸಿದಂತೆ-ಮಳಲಿನಿಂದ ಎಣ್ಣೆಯನ್ನು ಹಿಂಡಿ ತೆಗೆದಂತೆ, ಕಾಡುಗುಡ್ಡಗಳನ್ನಾಶ್ರಯಿಸಿದ್ದ ಕೇವಲ ಅನಾಗರಿಕರೆಂದು ಕರೆಯಲ್ಪಟ್ಟ ಮಾವಳಿಗಳ ಸಹಾಯದಿಂದ ಒಂದು ಸ್ವತಂತ್ರ ಹಿಂದೂ ಸಾಮ್ರಾಜ್ಯವನ್ನೇ ಸ್ಥಾಪಿಸಿ ಜಗದ್ಭೀಕರಪ್ರತಾಪಶಾಲಿಯಾದ ಔರಂಗಜೇಬನನ್ನೂ ಮೆತ್ತಗೆ-ನಿಷ್ಪ್ರಷ್ಟನನ್ನಾಗಿ ಮಾಡಿಬಿಟ್ಟನು, ಅಲ್ಲವೆ? ಈ ಪ್ರಪಂಚದಲ್ಲಿ ಯಾರಿಗೆ ಯಾರಿಂದ್ದು ಮಾಡಬೇಕಾದುದು ಏನೂ ಇರುವುದಿಲ್ಲವೆಂಬುದು ಇದರಿಂದ ಸಿದ್ಧವಾಗುತ್ತದೆ! ಸಂಸಾರದಲ್ಲಿನ ಅನುಬಂಧಿಗಳೂ, ಒಡನಾಡಿಗಳೂ ತಮ್ಮ ತಮ್ಮ ಪಾಲಿಗೆ ಬರಬೇಕಾದ-ತಾವು ತೀರಿಸಬೇಕಾದ ಋಣಶೇಷಗಳು ತೀರುವವರೆಗೆ ಮಾತ್ರ ಏಕತ್ರವಿದ್ದು ತರುವಾಯ, ಸಂತೆಗೆ ಬಂದವರು ತಮ್ಮ ತಮ್ಮ ವ್ಯಾಪಾರವು ತೀರಿದನಂತರ, ತಮ್ಮ ಮಾರ್ಗವನ್ನು ಹಿಡಿದು, ತಾವು ಕೊಂಡ ಪದಾರ್ಥಗಳನ್ನು ತೆಗೆದುಕೊಂಡು ತೆರಳುತ್ತಿರುವಂತೆ,

ತಾವು ಇಹಜೀವಿತದಲ್ಲಿ ಸಂಪಾದಿಸಿದ ಪಾಪ-ಅಥವಾ ಪುಣ್ಯಕಾರ್ಯಗಳ ಮೂಟೆಯನ್ನು ಹೊತ್ತುಕೊಂಡು ತೆರಳುತ್ತಿರುವರು ಆದುದರಿಂದಲೇ ಅಲ್ಲವೆ, ಬಾಹ್ಯದೃಷ್ಟಿಗೆ ನಿಸ್ಸಹಾಯರಾಗಿ ನಿಂತರೆಂಬಂತೆ ತೋರುತ್ತಿದ್ದರೂ ಮೋಲ್ಕಂಡ ಚರಿತ್ರಪ್ರಸಿದ್ಧವ್ಯಕ್ತಿಗಳು 'ಕ್ರಿಯಾಸಿದ್ಧಿಸ್ಸತ್ವೇ ಭವತಿ ಮಹತಾಂ ನೋಪಕರಣೆ' ಎಂಬ ಆರ್ಯವಾಕ್ಯವನ್ನು ಸಾರ್ಥಕಗೊಳಿಸುವಂತ, ಜೀವಿತವೇ ಸಂದೇಹವಾಗಿದ್ದ ಸ್ಥಿತಿಗಳಲ್ಲೂ ಮಹತ್ವದ ಕಾರ್ಯಗಳನ್ನು ಮಾಡಲು ಶಕ್ತರಾದರು ಪ್ರಕೃತಿಯಲ್ಲಿ ಒಂದು ಧರ್ಮವಿದೆ ಬೆಳೆದು ವೃದ್ಧಿಯಾಗುವ ತತ್ವವು ಅಡಗಿರುವುದು ಬೀಜದಲ್ಲಿ! ಆ ತತ್ವವು ನಶಿಸಿಹೋಗಿರುವ ಎಂದರೆ ಹುಳಿತು ಅಥವ ಬೆಂದುಹೋಗಿರುವ ಬೀಜವನ್ನು ಭೂಮಿಯಲ್ಲಿ ನಟ್ಟು ಅದಕ್ಕೆ ಪ್ರಪಂಚದಲ್ಲಿರುವ ಎಲ್ಲಾ ಗೊಬ್ಬರ ನೀರುಗಳನ್ನು ಹಾಕಿ ಬೆಳೆಯಿಸಲೆತ್ನಿಸಿದರೂ-ಹಾಲು ತುಪ್ಪಗಳನ್ನೇ ಎರೆದರೂ, ಅದು ಬೆಳೆಯಬಲ್ಲುದೊ! ಹಾಗಲ್ಲದೆ, ಅದರಲ್ಲಿನ ಜೀವತತ್ವವು ತನ್ನ ಸಹಜಸ್ವರೂಪದಲ್ಲಿರುವ ಬೀಜವನ್ನು ಎಲ್ಲಿ ನೆಲವನ್ನು ಕೆದರಿ ಹೂಳಿದರೂ ಸಾಕು! ಅದು ಮೊಳಕೆಯಾಗಿ ಬೆಳೆವುದು, ಮತ್ತು ಹಾಗೆ ಬೆಳೆವ ಗಿಡಕ್ಕೆ ಬೇಕಾದ ನೀರು ಆಹಾರ ವಾಯು ಬೆಳಕು-ಶಾಖ ಮುಂತಾದ ಸಕಲ ಪ್ರಕೃತಿತತ್ವಗಳೂ ತಾವಾಗಿ ಒದಗುವುವು ಬೆಟ್ಟದಮೇಲಿರಲಿ, ಕಲ್ಲುಬಂಡೆಯಲ್ಲಿರಲಿ, ಅಂತಹ ಗಿಡವು ತನಗೆ ಆವಶ್ಯಕವಾದ ಸಕಲ ಸಾಮಗ್ರಿಗಳನ್ನೂ ಹೊಂದಿ ಬೆಳೆದೇ ಬೆಳೆಯುವುದು! ಹೀಗೆ ಜೀವಿಸಿ ಬೆಳೆವ ತತ್ವವು-ಬೀಜದಲ್ಲಿರುವಂತೆಯೇ, ಅಭಿವೃದ್ಧಿತತ್ವವು-ಜೀವಿತವು-ಪೌರುಷವು ಮಾನವನಲ್ಲಿರಬೇಕು, ಹೊರಗಲ್ಲ! ಎಂದರೆ ಅದಕ್ಕೆ ಆವಶ್ಯಕವಸ್ತುಗಳನ್ನು ಅವನು ಅಪೇಕ್ಷಿಸಬೇಕಾದುದಿಲ್ಲ; ಪ್ರಕೃತಿಯೇ ಒದಗಿಸುವುದು. ಆದರೆ ಈ ಸಿದ್ಧಾಂತವನ್ನು ಅಪಾರ್ಥಮಾಡಿಕೊಂಡು, ಇಂತಹ ಪ್ರಕೃತಿಗತಿಯನ್ನು ನಂಬಿ, ಹೇಗಾದರೂ ಆಗುವುದೆಂದು ತಿಳಿದು, ಪ್ರಯತ್ನಶೂನ್ಯರಾಗಿ ಕೈಕಟ್ಟಿಕೊಂಡು ಕುಳಿತಿದ್ದರೂ ಆದೀತೆಂದು ಕೆಲವರು ಯೋಚಿಸಬಹುದು! ಅದು ಮಾತ್ರ ತಪ್ಪು ಮರದಲ್ಲಿ ಹೇಗೋ ಋತುಧರ್ಮದಿಂದ ಫಲಪುಷ್ಪಗಳುಂಟಾಗುವುವು! ಆದರೆ ಹೆಚ್ಚು ಫಲವನ್ನಪೇಕ್ಷಿಸಿದರ, ಪುರುಷಪ್ರಯತ್ನದಿಂದ ಭೂಮಿಯನ್ನು ಸಾಗುವಳಿಮಾಡಿ, ಗಿಡದಡಿಗೆ ಗೊಬ್ಬರನೀರುಗಳನ್ನೊದಗಿಸಬೇಕಲ್ಲವೆ? ಹಾಗೆಯೇ ಮನುಷ್ಯನೂ ಬರುವುದು ಹೇಗಾದರೂ ಬರುವುದೆಂದು ಕು

ಳಿತಿರದೆ, ಪುರುಷ ಪ್ರಯತ್ನ ಮಾಡಿದರೇನೇ ಅತ್ಯಲ್ಪವಾಗಿ, ಕ್ಷುದ್ರರೀತಿಯಿಂದ ಪ್ರಾಪ್ತವಾಗಬಹುದಾದ ಪ್ರಯೋಜನವು ಶೀಘ್ರವಾಗಿ-ಅಧಿಕವಾಗಿ-ಉತ್ತಮವಾಗಿ ದೊರೆಯುವುದು. ಮೇಲ್ಕಂಡ ಸುಪ್ರಸಿದ್ಧ ವ್ಯಕ್ತಿಗಳೆಲ್ಲರೂ, ಅವರ ಅದೃಷ್ಟ ಶಕ್ತಿಗಳೇನಾದರೂ ಇರಲಿ, ಪ್ರಪಂಚದೃಷ್ಟಿಗೆ ಗೋಚರವಾಗುವಂತೆ, ಅಸಾಧ್ಯಪ್ರಯತ್ನಗಳನ್ನು ನಡೆಯಿಸಿ, ಅಸಹನೀಯ ಕಷ್ಟಗಳನ್ನನುಭವಿಸಿದುದರಿಂದಲೇ, ಸಾಣೆಯಮೇಲೆ ತೀಯಲ್ಪಟ್ಟ ರತ್ನಗಳಂತೆ-ಪ್ರಪಂಚಚರಿತ್ರೆಯಲ್ಲಿ ದೇದೀಪ್ಯಮಾನರಾಗಿದ್ದಾರೆ! ಜೇಡಿಮಣ್ಣು ತುಳಿಯಲ್ಪಟ್ಟು, ಹಿಸುಕಲ್ಪಟ್ಟು ತಿರುಗಿಸಿದ ಆಕಾರಕ್ಕೆ ತಿರುಗಿ, ಉಬ್ಬಿ, ಬಗ್ಗಿ, ತಗ್ಗಿ ವಿನಾಯಕನ ಆಕಾರ ಹೊಂದಿದರಲ್ಲವೆ, ಗಣನಾಥನೆಂದು, ಷೋಡಶೋಪಚಾರಗಳಿಂದ ಪೂಜಿಸಿ, ಪಾದಕ್ಕೆ ಬಿದ್ದು ಜಗತ್ತೇ ಗೌರವಿಸುವುದು ಹಾಗಲ್ಲದೆ, ಕುಂಬಾರನ ಕೈಯಲ್ಲಿ ಸಿಕ್ಕು ಕಷ್ಟಪಡುವರಾರೆಂದು ಮೂಲೆಯಲ್ಲಿ ಬಿದ್ದಿರುವ ಮಣ್ಣುಮುದ್ದೆಯನ್ನು ಕೇಳುವರಾರು, ಲಕ್ಷಿಸುವರಾರು ?

ತಂದೆಯಾದ ಮಹಾನ್‌ಸಿಂಗನು ಮೃತ್ಯುವಶನಾಗಿದ್ದಾನೆ, ಆತನಿಂದ ಪ್ರಾರಂಭವಾಗಿ ವಿಶೇಷವಾಗಿ ಬೆಳೆದಿದ್ದ ಶತ್ರುಪಕ್ಷವು ಸುತ್ತಲೂ ಅವಿರಳವಾಗಿದೆ; ತನಗಿನ್ನೂ ಕೇವಲ ಬಾಲ್ಯಪ್ರಾಯ, ಅನುಬಂಧಿಗಳಲ್ಲಿ-ಆಪ್ತರಲ್ಲಿ ಶಕ್ತರಾದ ಪುರುಷವ್ಯಕ್ತಿಗಳಾರೂ ಇಲ್ಲ, ಹೀಗೆ ಎಲ್ಲಾ ಕಡೆಯಲ್ಲೂ ಕತ್ತಲೆ ಮುಸುಕಿದಂತಾಗಿ ರಣಜಿತ್‌ಸಿಂಗನು ದಿಕ್ಕುತೋರದಂತಾದನು. ಆ ವೇಳೆಗೆ ಒಬ್ಬ ವ್ಯಕ್ತಿಯ ಆಶ್ರಯಮಾತ್ರವಿಲ್ಲದಿದ್ದರೆ, ರಣಜಿತ್‌ಸಿಂಗನ ಜೀವಿತವೂ, ತತ್ಸಂಬಂಧವಾಗಿ ಎಲ್ಲಾ ಭವಿಷ್ಯದ್ವೃತ್ತಾಂತಗಳೂ ವ್ಯತ್ಯಸ್ತವಾಗುತ್ತಿದ್ದುವು. ಕಾನ್ಹೇಯಾ ವಂಶದ ಸರ್ದಾರ್ ಗುರುಬಕ್ಷಸಿಂಗನೇ ರಣಜಿತ್‌ಸಿಂಗನ ಹೆಂಡತಿಯಾದ ಮಹ್ತಬ್‌ಕುವರಳ ತಂದೆಯು ಗುರುಬಕ್ಷನು ಬಟಾಲಾ ಯುದ್ಧದಲ್ಲಿ ಸತ್ತನಂತರ ಆತನ ಪತ್ನಿಯಾದ ಸಾಡಾಕುವರಳೆಂಬಾಕೆಯೆ ಆ ಮಿಸಲೆಯ ಆಡಳಿತಗಳನ್ನು ನೋಡಿಕೊಳ್ಳುತ್ತಾ ರಾಜಕಾರ್ಯವಿಚಾರಗಳಲ್ಲಿ ಮಹಾಶಕ್ತಳಾಗಿದ್ದಳು. ಮಹಾನ್‌ಸಿಂಗನು ಮೃತನಾದನಂತರ ರಣಜಿತ್‌ಸಿಂಗನ ಪಾಲನೆಯು ಅವನ ತಾಯಿಯಾದ ರಾಜಕುವರ್ ಮತ್ತು ಅತ್ತೆಯಾದ ಸಾಡಾಕುವರ್ ಈ ಇಬ್ಬರ ಪಾಲಿಗೆ ಬಂತು. ಈ ಇಬ್ಬರಲ್ಲಿ ಸಾಡಾಕುವರಳು ಬಹು ಕಾರ್ಯಭಾರಿಯು. ಆಕೆಯು ಎರಡು ಮಿಸಲೆಗಳ ಮೇಲ್ವಿಚಾ

ರಣೆಯನ್ನೂ ನೋಡಿಕೊಳ್ಳುತ್ತಾ, ಆ ಎರಡರ ಸೈನ್ಯಸಹಾಯ ಸಂಪತ್ತುಗ ಳನ್ನೂ ಉಪಯೋಗಿಸಿ, ತಮಗೆ ವಿರೋಧಿಗಳಾಗಿದ್ದ ಸುತ್ತುಮುತ್ತಲಿನ ಸರ ದಾರರನ್ನೆಲ್ಲಾ ಅಡಗಿಸಿಬಿಡಬೇಕೆಂದು ಯೋಚಿಸಿದಳು. ಆಕೆಯದೃಷ್ಟಿಯು ತನ್ನ ಪತಿಯನ್ನು ಒಟಾಲಾಯುದ್ಧದಲ್ಲಿ ಕೊಂದ ರಾಮ್‌ಗಾರ್ಹಿಯಾ ಸರದಾ ರರಮೇಲೆ ಮೊದಲು ಬಿದ್ದಿತು ಒಡನೆ ೧೭೯೬ನೆಯ ಸಂ॥ ದಲ್ಲಿ ತನ್ನ ಮತ್ತು ರಣಜಿತ್‌ಸಿಂಗನ ಸೇನೆಗಳನ್ನು ಜೊತೆಗೂಳಿಸಿಕೊಂಡು ಬಿಯಾಸ್‌ನದಿಯ ದಡದ ಮೇಲಿದ್ದ, ಮಿಯಾನಿಕೋಟೆಯನ್ನು ಮುತ್ತಿದಳು. ಅದು ರಾಮಗಾರ್ಹಿಯ ಸರದಾರ್ ಜಸ್ಸಾಸಿಂಗ್ ಎಂಬಾತನಿಗೆ ಸೇರಿದುದು. ಜಸ್ಸಾಸಿಂಗನು, ಕೆಲವು ದಿನಗಳವರೆಗೆ ಆ ಮುತ್ತಿಗೆಯನ್ನು ಸಹಿಸಿಕೊಂಡು, ಶತ್ರುಸೈನ್ಯವನ್ನು ಎದು ರಿಸಿಕೊಂಡಿದ್ದರೂ, ಅಷ್ಟರಲ್ಲೇ ಯುದ್ಧಸಾಮಗ್ರಿಗಳ ಕೊರತೆಯುಂಟಾದುದ ರಿಂದ ಅಮೃತಸರದಲ್ಲಿದ್ದ ಸಿಕ್‌ಗುರುವಾದ ಸಾಹಿಬ್‌ಸಿಂಗ್‌ಬೇಡಿ ಎಂಬಾ ತನಲ್ಲಿ ಸಹಾಯವನ್ನು ಕೋರಿದನು ಸಾಹಿಬ್‌ಸಿಂಗನು ಮುತ್ತಿಗೆಯನ್ನೆತ್ತಿ ಅಲ್ಲಿಂದ ಹೊರಟುಹೋಗುವಂತೆ ಆಜ್ಞಾಪಿಸಿ ಸದಾಕೌರಳಿಗೆ ಹೇಳಿಕಳು ಹಿಸಿದನು ಆದರೆ ಆಕೆಯು ಆ ಸಂದೇಶವನ್ನು ಮನ್ನಿಸಲಿಲ್ಲ. ತನ್ನ ಶತ್ರುವು ಅಷ್ಟು ದುರ್ಬಲಸ್ಥಿತಿಯಲ್ಲಿರುವಾಗ ಬಿಟ್ಟುಹೋಗುವುದು ಅವಿವೇಕವೆಂದು ತಿಳಿದು ಮುತ್ತಿಗೆಯನ್ನು ಮತ್ತೂ ಬಲಪಡಿಸಿದಳು. ಜಸ್ಸಾಸಿಂಗನಿಗೆ ಆ ಒತ್ತಾಯವನ್ನು ಸಹಿಸಿಕೊಳ್ಳುವುದು ಅಸಾಧ್ಯವೆನ್ನಿಸಿತು. ಒಡನೆ ಆತನು ಸಹಾಯವನ್ನು ಒದಗಿಸಿ ರಕ್ಷಿಸಬೇಕೆಂದು ಪುನಃ ಸಾಹಿಬ್‌ಸಿಂಗನಲ್ಲಿಗೆ ಅರಿಕೆ ಯನ್ನು ಕಳುಹಿಸಿದನು ಆದರೂ ಏನೂ ಪ್ರಯೋಜನವಾಗಲಿಲ್ಲ. ಸಾಹಿ ಬ್‌ಸಿಂಗನು 'ಅವರು ನನ್ನ ಮಾತನ್ನು ಗಮನಿಸುವವರಲ್ಲ ಈ ಸಂದರ್ಭ ದಲ್ಲಿ ದೇವರೇ ನಿನಗೆ ಸಹಾಯಮಾಡಬೇಕು'' ಎಂದು ಹೇಳಿ ಕಳುಹಿಸಿದನು. ಹೀಗಿರಲು ಆದಿನ ರಾತ್ರಿಯೇ ದೈವಕೃತವಾಗಿ ಬಿಯಾಸ್‌ನದಿಯಲ್ಲಿ ಅತ್ಯಧಿಕ ಪ್ರವಾಹ ಬಂದು, ಕಾನ್ಹೇಯಾ ಸೈನ್ಯದ ಅನೇಕ ಕಾಲಾಳುಗಳು ಕುದುರೆಗ ಳು, ಒಂಟೆಗಳು, ಸೈನ್ಯಸಾಮಗ್ರಿ ಮುಂತಾಗಿ ಎಲ್ಲವೂ ಕೊಚ್ಚಿಹೋದುವು. ಸದಾಕೌರಳೂ ರಣಜಿತ್‌ಸಿಂಗನೂ ಪ್ರಾಣದೊಂದಿಗುಳಿದು ಪಾರಾಗುವುದೇ ಕಷ್ಟವೆನ್ನಿಸಿತು. ಹೇಗೋ, ಇಬ್ಬರೂ ತಲೆತಪ್ಪಿಸಿಕೊಂಡು ಗುಜರಾತ್ ವಾಲಾ ಪಟ್ಟಣವನ್ನು ಸೇರಿದರು.

ಎಷ್ಟು ಶಕ್ತಳಾದರೂ ಸ್ತ್ರೀಮಾತ್ರಳಾದ ಸಾಡಾಕುವರಳ ಮತ್ತು ತನ್ನ ತಾಯಿಯಾದ ರಾಜಕುವರಳ ಮೇಲ್ಕಂಡಂತಹ ಅವಿವೇಕ ಆಡಳಿತಕ್ಕೆ ಒಳಪಟ್ಟಿರುವುದು ರಣಜಿತ್‌ಸಿಂಗನಿಗೆ ಸಹನವಾಗಲಿಲ್ಲ. ಈ ಇಬ್ಬರಲ್ಲಿ ತಾಯಿಯಾದ ರಾಜಕುವರಳು ಒಂದು ಬಗೆಯ ಹೆಂಗಸು. ಆಕೆಯು ಅಷ್ಟು ಪತಿನಿಷ್ಠಳಾಗಿರಲಿಲ್ಲ. ಅವಳ ಪ್ರೀತಿಗೆ ಪಾತ್ರರಾದವರಲ್ಲಿ ದಿವಾನ್ ಲಕ್ಪತ್ ರಾಯ್ ಎಂಬಾತನೇ ಮುಖ್ಯನಾಗಿದ್ದನು ಅವನು ರಾಜಕುಮಾರನ ಬಾಲ್ಯ ವಯಸ್ಸಿನಲ್ಲಿ ಅವರ ಭೂಸ್ವಾಸ್ಥ್ಯವನ್ನೆಲ್ಲಾ ಮೇಲ್ವಿಚಾರಣೆ ನೋಡಿಕೊಳ್ಳುವ ಅಧಿಕಾರಿಯಾಗಿದ್ದನು. ರಣಜಿತ್‌ಸಿಂಗನು ತನ್ನ ತಾಯಿಯ ಈ ಚರ್ಯೆ ಕ್ಕಾಗಿ ಅಸಹ್ಯಪಟ್ಟು, ಲಕ್ಪತ್‌ರಾಯಿಯನ್ನು ಒಂದು ಅಪಾಯಕರವಾದ ಯುದ್ಧ ಯಾತ್ರೆಯಲ್ಲಿ ನಿಯೋಜಿಸಿ ಸಾಗಿಸಿಬಿಟ್ಟನು. ಆ ಯುದ್ಧದಲ್ಲಿ ಅವನು ಗತಾಯುವಾಗಲು, ಇತ್ತ ರಾಜಕುವರಳೂ ಅದೃಶ್ಯಳಾದಳು. ಕೆಲವರು ಅವಳಿಗೆ ವಿಷಪ್ರಯೋಗವಾಯಿತೆನ್ನುವರು ; ಮತ್ತೆ ಕೆಲವರು ರಣಜಿತನೇ ಅವಳನ್ನು ಸ್ವಹಸ್ತದಿಂದ ವಧಿಸಿದನೆಂಬರು. ಆದರೆ ಶೂರಾಗ್ರಣಿಯಾದ ರಣಜಿತನು ಧರ್ಮಯುದ್ಧದಲ್ಲಲ್ಲದೆ, ಈ ಬಗೆಯ ಹೇಸಿಕಾರ್ಯಕ್ಕೆ ಎಂದೂ ಒಡಂಬಟ್ಟಿರಲಿಕ್ಕಿಲ್ಲವೆಂದು ಊಹಿಸಬಹುದಾಗಿದೆ. ಬಹುಶಃ ಆಕೆಯು ಹೆಚ್ಚು ಕಾರ್ಯಭಾರಗಳಿಗೆ ಪ್ರವೇಶಿಸಲವಕಾಶವಿಲ್ಲದಂತ ಒಂದು ಕೋಟೆಯಲ್ಲಿ ನಿರ್ಬಂಧಿಸಲ್ಪಟ್ಟಿದ್ದಳೆಂಬುದು ಕೆಲವು ಇತಿಹಾಸಕಾರರ ಮತವಾಗಿದೆ; ಅದೇ ಸಹಜವೆಂದು ತೋರುತ್ತದೆ.

ಆದರೆ ಸಾಡಾಕುವರಳ ಆಧಿಪತ್ಯದಿಂದ ಬಿಡುಗಡೆಯಾಗುವುದು ಅಷ್ಟು ಸುಲಭವೆನಿಸಲಿಲ್ಲ ಪ್ರಾರಂಭದಲ್ಲಿ ರಣಜಿತನು ಆ ಅಸಾಧ್ಯಕಾರ್ಯಕ್ಕೆ ಪ್ರಯತ್ನಿಸಲಿಕ್ಕೂ ಇಷ್ಟಪಡಲಿಲ್ಲ. ಆ ಸ್ತ್ರೀಯು ಬಾಲ್ಯವಯಸ್ಸಿನಲ್ಲಿದ್ದ ಅವನಿಗೆ ವಿದ್ಯಾಭ್ಯಾಸ ಮಾಡಿಸುವುದಂತಿರಲಿ ; ಅಜ್ಞಾನಿ ಬಾಲಕನ ಕಪಿಸಹಜವಾದಾಬಾಲ್ಯಚಾಪಲ್ಯವನ್ನು ವೃದ್ಧಿಗೊಳಿಸುವ ಅನೇಕ ಸುಖಸಾಧನಗಳನ್ನೂ ಒದಗಿಸಿ ಅವನನ್ನು ವಿಶೇಷ ವಿಷಯಲೋಲುಪನನ್ನಾಗಿ ಮಾಡಿಬಿಟ್ಟಳು. ರಣಜಿತನಾದರೋ ಪಂಚೇಂದ್ರಿಯಗಳಿಂದಲೂ ಪ್ರಾಪಂಚಿಕ ಸುಖಗಳನ್ನು ಎಷ್ಟು ಮಾತ್ರ ಪಡೆಯಬಹುದೋ ಅಷ್ಟನ್ನೂ ಲೋಪವಿಲ್ಲದೆ ಅನುಭವಿಸತೊಡಗಿದನು. ಧನಸಂಪತ್ತಿಯಿರುವುದು, ಪ್ರಭುತ್ವವಿರುವುದು, ಯೌವನಪ್ರಾರಂಭ ! ಇವು

ಗಳೊಂದಿಗೆ ವಿವೇಕದಿಂದುಂಟಾದ ವಿಚಕ್ಷಣೆಗೆ ಮಾರ್ಗವಿಲ್ಲದ ಮನಸ್ಥಿತಿ ; ಸರಿ, ಮುಂದೆ ಕೇಳುವುದೇನು ? ಮದ್ಯಪಾನ ವ್ಯಭಿಚಾರ ಸ್ತ್ರೀಲೋಲುಪತೆ, ಮುಂತಾದುವುಗಳು ನಿರಂತರ-ನಿತ್ಯಕೃತ್ಯಗಳೋ ಎಂಬಂತೆ ನಡೆಯುಸಾಗಿದುವು ಕೆಲದಿನಗಳು ರಾಜಪುತ್ರನು ಆ ವಿಷಯಸಾಗರದಲ್ಲಿ ತೇಲಿಹೋಗುವನೋ ಎಂಬಂತಿದ್ದಿತು!

ಆದರೆ ಆತನ ಜನ್ಮಾಂತರೀಯ ಸುಕೃತವು ಅಕ್ಷಯದಾದುದಾಗಿತ್ತು ಯೌವನ ಪ್ರಾರಂಭದೆಸೆಯಲ್ಲಾದ ಈ ಬಗೆಯ ಅತ್ಯಾಚಾರಗಳಿಂದಲೂ, ರಣಜಿತನ ದೇಹಶಕ್ತಿಯು ಬಹುದಿನಗಳವರೆಗೆ ಕೆಡಲಿಲ್ಲ; ಮನಶ್ಶಕ್ತಿಯಾದರೂ ಕುಂದಲಿಲ್ಲ. ಅವನ ಜ್ಞಾಪಕಶಕ್ತಿಯು, ಇಷ್ಟು ವೀರ್ಯನಷ್ಟದ ಸಂಭವವಿದ್ದರೂ, ಅಪ್ರತಿಹತವಾದುದಾಗಿದ್ದಿತು. ಇಂತಹ ಶಕ್ತಿಯನ್ನೇ ಜನ್ಮಾಂತರೀಯ ಅ-ದೃಷ್ಟವಾದ ಅಕ್ಷಯಸಿಧಿಯೆಂದೆನ್ನ ಬಹುದಲ್ಲವೆ ? ಈ ಸಮಯದಲ್ಲೇ ರಣಜಿತ್‌ಸಿಂಗನು ಪ್ರಖ್ಯಾತನಾಗುವುದಕ್ಕೆ ಒಂದು ಸೌಲಭ್ಯವೂ ಒದಗಿತು ಹಿಂದೆ ಹಿಂದೂದೇಶದಮೇಲೆ ದಂಡಯಾತ್ರೆ ಮಾಡಿದ್ದ ಅಹಮ್ಮದ್ ಷಹಾನ ಮೊಮ್ಮಗನಾದ ಷಹಾಝಮಾನ್ ಎಂಬೊಬ್ಬ ವೀರನು ತನ್ನ ಆಫ್ಘಾನ್ ಸೈನ್ಯದೊಂದಿಗೆ ದಂಡೆತ್ತಿಬಂದು ೧೭೯೭ರಲ್ಲಿ ಲಾಹೋರ್ ನಗರವನ್ನು ಸ್ವಾಧೀನಪಡಿಸಿಕೊಂಡನು ಕೆಲಕೆಲವು ಸಿಕ್‌ಸರದಾರರು, ಷಹಾಝಮಾನನನ್ನು ಕಂಡು ಕಪ್ಪಕಾಣಿಕೆಗಳನ್ನೊಪ್ಪಿಸಿ, ಅವನ ಅನುಗ್ರಹವನ್ನು ಸಂಪಾದಿಸಿಕೊಳ್ಳಬೇಕಂಬ ಯೋಚನೆಯುಲ್ಲಿದ್ದರು ಅಷ್ಟರಲ್ಲಿಯೇ ಷಹಾಝಮಾನನಿಗೆ ತನ್ನ ಸ್ವದೇಶದಲ್ಲಿ ಶತ್ರುಬಾಧೆಯುಂಟಾದುದರಿಂದ ಅವನು ಒಡನೆ ಹಿಂದಿರುಗಬೇಕಾಯಿತು. ಮಾರ್ಗಮಧ್ಯದಲ್ಲಿ ಝೀಲಂ ನದಿಯನ್ನು ದಾಟುವಾಗ ಪ್ರವಾಹದಲ್ಲಿ ಅವನ ಹನ್ನೆರಡು ಫಿರಂಗಿಗಳು ಮುಳುಗಿಹೋದುವು. ಆಗ ಆತನು ಉಪಾಯರಹಿತನಾಗಿ ರಣಜಿತ್‌ಸಿಂಗನ ಸಹಾಯವನ್ನು ಅಪೇಕ್ಷಿಸಬೇಕಾಯಿತು ಆಗ ಆ ಲಾಹೋರ್ ಪ್ರಾಂತವು, ಆಹುದು-ಅಲ್ಲವೆಂಬಂತೆ ರಣಜಿತನದು ಎಂಬಂತಿದ್ದಿತು ಷಹಾಝಮಾನನು, ತನ್ನಾ ಹನ್ನೆರಡು ಫಿರಂಗಿಗಳನ್ನೂ ನದೀಗರ್ಭದಿಂದ ತೆಗೆಸಿ ಪೆಷಾವರಿಗೆ ಸಾಗಿಸಿಕೊಟ್ಟು ಸಹಾಯಮಾಡುವುದಾದರೆ, ಆ ಲಾಹೋರು ಪ್ರಾಂತವನ್ನೂ ಆ ಪಟ್ಟಣವನ್ನೂ ರಣಜಿತ್‌ಸಿಂಗನಿಗೆ ಬಿಟ್ಟುಕೊಡುವುದಲ್ಲದೆ 'ರಾಜಾ' ಎಂಬ ಬಿರುದನ್ನೂ ಅನುಗ್ರಹಿಸುವುದಾಗಿ

ಛಾಷೆಯಿತ್ತನು. ಮಹತ್ವಾಕಾಂಕ್ಷಿಯಾದ ಆ ತರುಣವೀರನು ಅಂತಹ ಸುಸಂಧಿಯನ್ನು ದುರ್ಲಕ್ಷಿಸುವನೇ ? ಅದಕ್ಕೆ ಒಪ್ಪಿದನು. ಅಂತಯೇ ಅವುಗಳಲ್ಲಿ ಎಂಟು ಫಿರಂಗಿಗಳನ್ನು ತೆಗೆಯಿಸಿ ಪೆಷಾವರಂಗೂ ಸಾಗಿಸಿಕೊಟ್ಟನು. ಹೀಗೆ ರಣಜಿತನಿಗೆ ರಾಜ್ಯಲಾಭವಾದುದಲ್ಲದೆ, ಬಹು ಸುಲಭರೀತಿಯಿಂದಲೇ 'ರಾಜಾ' ಎಂಬ ಪ್ರಶಸ್ತಿಯೂ ಲಭ್ಯವಾಯಿತು. ಅದು ಕೇವಲ ನಾಮಮಾತ್ರದ ರಾಜಪದವಿಯಾಗಿದ್ದರೂ ಅವನು, ತನ್ನ ಸರಿಸಮಾನರಾದ ಸರದಾರರಲ್ಲಿ ಪ್ರತಿಷ್ಠಾವಂತನಾಗಲು ಅದೇ ಎಷ್ಟೋಮಟ್ಟಿಗೆ ಸಹಾಯವನ್ನುಂಟುಮಾಡಿತು.



## ಅಧ್ಯಾಯ ೪ "ಆಡಳಿತ"

ಲಾಹೋರ್ ನಗರವು ಪಂಜಾಬುದೇಶಕ್ಕೆ ರಾಜಧಾನಿ ಅದು ೨,೦೦೦ ವರ್ಷಗಳಿಂದ ಪ್ರಸಿದ್ಧವಾಗಿದ್ದ ಪುರಾತನನಗರವು. ಬಹುದಿನಗಳಿಂದಲೂ ಸಿಕ್ ಸರದಾರರ ವಶದಲ್ಲೇ ಇದ್ದು, ಅವರಲ್ಲಿ ಬಲಶಾಲಿಗಳಾದವರು ಅದನ್ನು ಸ್ವಾಧೀನಪಡಿಸಿಕೊಳ್ಳಲು ಮೇಲೆಮೇಲೆ ಪ್ರಯತ್ನಿಸುತ್ತಿದ್ದು, ಹೀಗೆ ಆ ನಗರವು ಅನೇಕರ ಧಾಳಿಗೆ ಆಕರವಾಗಿದ್ದಿತು ಕೊನೆಗೆ ೧೭೬೪ನೆಯ ಸಂ॥ ದಲ್ಲಿ ಸರದಾರ್ ಲೆಹನಾಸಿಂಗ್ ಮತ್ತು ಗುಜರ್‌ಸಿಂಗ್ ಎಂಬಿಬ್ಬರು, ಒಂದು ಗುಪ್ತಮಾರ್ಗದಿಂದ ಆ ನಗರವನ್ನು ಪ್ರವೇಶಿಸಿ, ನಗರಾಧಿಪತಿಯನ್ನು ಕೊಂದು ಅದನ್ನು ಸ್ವಾಧೀನಗೊಂಡರು. ಅಹಮ್ಮದ್‌ಷಹಾನು ಪಂಜಾಬಿನಮೇಲೆ ದಂಡೆತ್ತಿ ಬಂದಾಗ, ಲಾಹೋರ್ ನಗರವನ್ನು ಸ್ವಾಧೀನಪಡಿಸಿಕೊಳ್ಳಲಾಸಿಸದೆ ತನಗೆ ವಿಧೇಯನಾಗಿ ನಡೆದುಕೊಂಡ ಲೆಹನಾಸಿಂಗನನ್ನೇ ಅದಕ್ಕೆ ಅಧಿಪತಿಯನ್ನಾಗಿರಿಸಿ, ಹೊರಟುಹೋದನು. ಲೆಹನಾಸಿಂಗನ ತರುವಾಯ ಆ ನಗರವು ಅವನ ಮೂವರ ಮಕ್ಕಳ ಸ್ವಾಧೀನಕ್ಕೆ ಬಂದಿತು. ಆದರೆ ಅವರು, ಅಶಕ್ತರೂ ದುರಾಚಾರಿಗಳೂ ಆಗಿ, ಪ್ರಭುಪದಕ್ಕೆ ಶುದ್ಧವಾಗಿ ಅನರ್ಹರಾಗಿದ್ದುದರಿಂದ, ಆ ನಗರವಾಸಿಗಳಿಗೂ ಅವರಲ್ಲಿ ಯಾವ ಗೌರವವೂ ಇಲ್ಲದೆ, ಅವರ ಆಧಿಪತ್ಯವು ತೊಲಗಿದರೆ ಸಾಕೆಂದು ಎಲ್ಲರೂ ಹರಕೆ ಹಾಕುತ್ತಿದ್ದರು.

ಆ ವೇಳೆಗೆ ರಾಜಾ ರಣಜಿತ್‌ಸಿಂಗನು ಅದನ್ನು ಸ್ವಾಧೀನಗೊಂಡನೆಂಬ ವಾರ್ತೆಯೂ ತಿಳಿಯಲು, ಆ ನಗರದ ನಾಗರಿಕರು ಎಷ್ಟೋಮಟ್ಟಿಗೆ ಸಂತೋಷಗೊಂಡಿದ್ದರು ಮತ್ತು ಆತನ ಬರುವಿಕೆಯನ್ನೇ ಹಾರೈಸಿ, ನಗರವನ್ನು ಸಿಂಗರಿಸಿಕೊಂಡಿದ್ದರು. ರಣಜಿತ್‌ಸಿಂಗನೂ ಬಹು ಬಲವಾದ ಸೈನ್ಯಸಹಾಯದೊಂದಿಗೆ ನಡೆದು, ಮಹಾದ್ವಾರಗಳು ತೆರೆಯಲ್ಪಟ್ಟು ನಿರಾತಂಕವಾಗಿದ್ದ ಆ ನಗರವನ್ನು ಬಹು ಸುಲಲಿತವಾಗಿಯೂ ಸಂತೋಷದಿಂದಲೂ, ಪ್ರವೇಶಿಸಿದನು. ಒಡನೆ ಆ ನಗರಾಧಿಪರಾಗಿದ್ದ ಲೆಹನಾಸಿಂಗನ ಮಕ್ಕಳು ತಲೆ ತಪ್ಪಿಸಿಕೊಂಡು ಪಲಾಯನ ಮಾಡಿಬಿಟ್ಟರು.

ಹೀಗೆ ೧೭೯೯ನೆಯ ಸಂವತ್ಸರದ ಜೂಲೈ ಮಾಸದಲ್ಲಿ ಲಾಹೋರ್ ನಗರದಲ್ಲಿ ಕಾಲಿಟ್ಟು ರಣಜಿತ್‌ಸಿಂಗನು ಪ್ರತಾಪಿ ರಾಜನೆನಿಸಿಕೊಂಡನು. ರಣಜಿತ್‌ಸಿಂಗನ ಈ ಪ್ರಾದುರ್ಭಾವವು, ಅನೇಕ ಸಿಕ್‌ಸರದಾರರಿಗೆ ಕಣ್ಣು ಕುಕ್ಕದಿರಲಿಲ್ಲ. ಮುಖ್ಯವಾಗಿ ಆ ಪ್ರಾಂತದ ಸರದಾರ್ ವಂಶದವರಾದ ಭಾಂಗಿ ಸಿಕ್ಕರಿಗಂತೂ ಅದು ಅತಿಶಯ ದ್ವೇಷದಾಯಕವಾಯಿತು. ಒಳಗೊಳಗೆ ರಣಜಿತನ ನಾಶಕ್ಕೆ ಸಂಚುಗಳು ನಡೆಯಲಾರಂಭವಾದುವು ಮಾರನೆಯ ವರ್ಷ ಜಸ್ಸಾಸಿಂಗ್, ಸಾಹಿಬ್‌ಸಿಂಗ್, ಗುಲಾಬ್‌ಸಿಂಗ್ ಎಂಬ ಮೂವರು ಸರದಾರರೊಂದಾಗಿ ರಣಜಿತ್‌ಸಿಂಗನನ್ನು ಕೊಂದುಬಿಡಬೇಕೆಂದೇ ನಿಶ್ಚಯಮಾಡಿಕೊಂಡರು. ಆದರೆ ಅವನು ಅವರ ಬಲೆಗೆ ಸಿಕ್ಕು ಅವರಿಂದ ಕುರಿಯಂತೆ ಕೊಲ್ಲಲ್ಪಡುವಷ್ಟು ತಿಳಿಗೇಡಿಯಾಗಿರಲಿಲ್ಲ! ಮಹಾಸೂಕ್ಷ್ಮಮತಿಯೂ, ರಾಜಮಂತ್ರಪ್ರವೀಣನೂ ಆಗಿದ್ದ ರಣಜಿತನಿಗೆ ಈ ಸಂಗತಿಯು ಹೇಗೋ ತಿಳಿದುಹೋಯಿತು ಒಡನೆ ಬಲವಾದ ಸೈನ್ಯಸಹಾಯದಿಂದ ಹೊರಟು, ಅವರನ್ನು ಮೇಲೆ ಮೇಲೆ ಅನೇಕ ಕಾಳಗಗಳಲ್ಲಿ ಜಯಿಸಿ ಅವರು ತಮ್ಮ ಕೋಟೆಗಳೊಳಕ್ಕೆ ಹೊಕ್ಕು ಅಡಗಿಕೊಳ್ಳುವಂತೆ ಅಟ್ಟಿಬಿಟ್ಟನು. ಪಂಜಾಬಿನಲ್ಲಿ ಲಾಹೋರ್ ಮಾತ್ರವಲ್ಲದೆ ಅಮೃತಸರವೂ ಕೂಡ ಒಂದು ಸುಪ್ರಸಿದ್ಧ ಪಟ್ಟಣವು. ಆ ಪಟ್ಟಣದಲ್ಲಿ ಪುರಾತನಕಾಲದ-'ಷಂಝುಮಾ' ಎಂಬ ಬಹು ಬಲವಾದ ಒಂದು ಫಿರಂಗಿಯಿದ್ದಿತು. ರಣಜಿತ್‌ಸಿಂಗನು ಅದನ್ನು ತನ್ನ ವಶಕ್ಕೆ ವಹಿಸಬೇಕೆಂದು ೧೮೦೨ರಲ್ಲಿ ಆ ಪಟ್ಟಣವನ್ನು ಆಳುತ್ತಿದ್ದ ಭಾಂಗೀ ಸರದಾರರಿಗೆ ನಿರೂಪವನ್ನು ಕಳುಹಿಸಿದನು. ಆದರೆ ಅವರು ಆತನ ನಿರೂಪವನ್ನು

ಮನ್ನಿಸಿ ಅದನ್ನು ವಹಿಸಿಕೊಡಲಿಲ್ಲ. ಒಡನೆ ಕೋಪಾಕ್ರಾಂತನಾದ ಆ ವೀರನು ಬಹುಬಲವಾದ ತನ್ನ ಚತುರಂಗಸೈನ್ಯವನ್ನು ಸಾಗಿಸಿಕೊಂಡುಹೋಗಿ, ಆ ಸರದಾರರ ಮನೆಗಳನ್ನು ಕೊಳ್ಳೇ ಹೊಡೆದು, ಅಮೃತಸರವನ್ನು ಸಂಪೂರ್ಣವಾಗಿ ಸ್ವಾಧೀನಪಡಿಸಿಕೊಂಡುಬಿಟ್ಟನು.

ಇಂತು ಪಂಜಾಬಿನ ಎರಡು ಮುಖ್ಯಪಟ್ಟಣಗಳು ರಣಜಿತ್‌ಸಿಂಗನಿಗೆ ವಶವಾದಂತಾದುವು, ಒಂದು ರಾಜಕೀಯ ಮುಖ್ಯನಗರ, ಇನ್ನೊಂದು ಧಾರ್ಮಿಕ (ಮತಸಂಬಂಧ) ಮುಖ್ಯನಗರ. ಇನ್ನುಮೇಲೆ ಆತನು ಯಾರಿಗೂ ಬೆದರಬೇಕಾದ ಸಂಭವವಿರಲಿಲ್ಲ ಇನ್ನೂ ೨೨ ವರ್ಷ ಪ್ರಾಯದಲ್ಲೇ ರಣಜಿತನು ಹೀಗೆ ಆರಿಭಯಂಕರನಾಗಿ ಸ್ವತಂತ್ರನಾದನು ಪಂಜಾಬಿನ ಯಾವ ವೀರನೂ ಆತನ ಮೇಲೆ ಕೈಯೆತ್ತಲು ಸಾಹಸಗೊಳ್ಳದಂತಾಯಿತು. ಕಾನ್ಹೇಯಾ ಮನೆತನವಂತೂ ಆತನ ಆತ್ಮೀಯದೇ ಆಗಿ, ಅದು ಹೆಚ್ಚು ಕಡಿಮೆ ಆತನ ಸ್ವಾಧೀನದಲ್ಲೇ ಇದ್ದಂತಿತ್ತು ಇನ್ನು ರಾಮಗಾರ್ಹಿಯಾ ವಂಶದ ಜಸ್ಸಾಸಿಂಗನು ವೃದ್ಧನೂ ದುರ್ಬಲನೂ ಆಗಿ ಮೃತ್ಯುದಿನವನ್ನು ಎಣಿಸುತ್ತಿದ್ದನಾದುದರಿಂದ, ಅದೂ ಒಂದೆರಡು ತಿಂಗಳೊಳಗಾಗಿಯೇ ಸ್ವಾಧೀನಕ್ಕೆ ಬರುವುದೆಂಬಂತೆ ತೋರಿತು. ಆದರೆ ಜಸ್ಸಾಸಿಂಗನ ಮಗನಾದ ಜೋಧ್‌ಸಿಂಗನು, ಅಷ್ಟು ಪ್ರಬಲನಲ್ಲದಿದ್ದುದರಿಂದ ತನ್ನ ತಂದೆಯ ಮರಣಾನಂತರ ರಣಜಿತ್‌ಸಿಂಗನ ಶರಣುಹೊಕ್ಕು, ಸಕಲವಿಷಯಗಳಲ್ಲೂ ಆತನಿಗೆ ವಿಧೇಯನಾಗಿಯೇ ಇದ್ದು, ಆತನ ಸಲಹೆಯಂತೆಯೇ ನಡೆದುಕೊಂಡನಾದುದರಿಂದ ರಣಜಿತನೂ ಒಡನೆಯೇ ಅವನಮೇಲೆ ಕೈಮಾಡಲಿಲ್ಲ ಅವನು ರಣಜಿತನ ಅಪ್ಪಣೆಯಿಂದ ಅಮೃತಸರ ಮುಂತಾದ ಪ್ರಾಂತಗಳಲ್ಲಿ ಅನೇಕ ಕೋಟೆಗಳನ್ನು ಸರಿಪಡಿಸಿದುದಲ್ಲದೆ, ಕೆಲವು ಸಣ್ಣ ಪುಟ್ಟ ಕೋಟೆಗಳನ್ನೂ ಕಟ್ಟಿಸಿ, ರಾಜ್ಯವಿಚಾರವನ್ನು ನೋಡಿಕೊಂಡಿದ್ದನು, ಆದರೆ ಅವನು ೧೮೧೫ರಲ್ಲಿ ಮೃತನಾಗಲು, ಅವನ ವಾರಸುದಾರರು ತಮ್ಮತಮ್ಮಲ್ಲೇ ಬಡಿದಾಡಲಾರಂಭಿಸಿದರು. ಒಡನೆ ರಣಜಿತನು ಅವರಮೇಲೆ ದಂಡೆತ್ತಿ ಹೋಗಿ, ರಾಮಗಾರ್ಹಿಯಾ ಮಿಸಲೆಯನ್ನೂ ಅದಕ್ಕೆ ಒಳಿತವಾದ ಅಮೃತಸರ್, ಜಲಂಧರ್, ಗುರುದಾಸಪುರ್ ಮೊದಲಾದ ಪಟ್ಟಣಗಳನ್ನೂ ಅಲ್ಲದೆ, ಇತರ ನೂರಾರು ಚಿಕ್ಕ ಕೋಟೆಕೊತ್ತಲುಗಳನ್ನೂ ತನ್ನ ರಾಜ್ಯಕ್ಕೆ ಸೇರಿಸಿಕೊಂಡುಬಿಟ್ಟನು. ಆದರೆ ಆವರೆಗೂ ಅವುಗಳನ್ನು

ರಕ್ಷಿಸಿಕೊಂಡಿದ್ದ ಸರದಾರರಿಗೆಲ್ಲಾ ತನ್ನ ಸೈನ್ಯದಲ್ಲೂ, ರಾಜ್ಯದ ಇತರ ಭಾಗಗಳಲ್ಲೂ ಬೇರೆ ಬೇರೆ ಉದ್ಯೋಗಗಳನ್ನು ಕೊಟ್ಟು ಅವರನ್ನೂ ಆದರಿಸಿದನು.

ಹನ್ನೊಂದನೆಯದಾಗಿ ಹೆಸರುಕೊಟ್ಟ ನಕ್ಕಾಯಿ ಮನೆತನದ ಗತಿಯಾದರೂ ಹೀಗೇ ಆಯಿತು. ೧೮೧೦ನೆಯ ಸಂವತ್ಸರದ ವೇಳೆಗೆ ಆ ವಂಶದ ಯಜಮಾನನು ಮೃತನಾಗಲು, ಅದು ದುರ್ಬಲವಾಯಿತು. ೧೮೦೨ರಲ್ಲಿ ಈ ಮನೆತನದ ಒಬ್ಬ ಕನ್ಯೆಯನ್ನು ರಾಜನು ಮದುವೆ ಮಾಡಿಕೊಂಡನು. ಆಕೆಯೇ ರಾಜನ ಉದರಸಂಭೂತನಾದ ಒಬ್ಬನೇ ರಾಜಪುತ್ರನ ತಾಯಿಯು ಆದರೂ ಈ ಸಂಬಂಧದಿಂದ ಆಕೆಯ ನಂಟರಿಷ್ಟರಿಗೆ ರಾಜನಿಂದ ಯಾವ ಬಗೆಯ ರಕ್ಷಣೆಯೂ ದೊರೆಯಲು ಆಸ್ಪದವಿರಲಿಲ್ಲ. ರಣಜಿತನ ತಾಯಿಯಾದ ರಾಣಿರಾಜಕುವರಳ ಸೋದರಳಿಯ ಕಹಾನ್‌ಸಿಂಗೆಂಬುವನು ಆ ವಂಶಕ್ಕೆ ಮುಖ್ಯಸ್ಥನಾದನು. ರಣಜಿತನು ಯಾವುದೋ ರಾಜಕಾರ್ಯವನ್ನು ಯೋಚಿಸಿ, ಅವನನ್ನು ತನ್ನ ಆಸ್ಥಾನದಲ್ಲಿ ಬಂದಿರುವಂತೆ ನಿರ್ಬಂಧಿಸಿದನು. ಆದರೆ ಆ ಮಾತು ಕಹಾನ್‌ಸಿಂಗನಿಗೆ ಇಷ್ಟವೆನಿಸಲಿಲ್ಲ ಒಡನೆ ರಾಜನು ದಂಡೆತ್ತಿ ನಡೆದು ನಕ್ಕಾಯಿ ಮಿಸಲೆಯನ್ನೆಲ್ಲಾ ಸಂಪೂರ್ಣವಾಗಿ ಜಯಿಸಿ ತನ್ನ ರಾಜ್ಯಕ್ಕೆ ಸೇರಿಸಿಕೊಂಡುಬಿಟ್ಟನು.

ಸ್ವತಂತ್ರರಾಜ್ಯವೊಂದನ್ನು ಸ್ಥಾಪಿಸಿ, ಅದನ್ನು ನಿರಂಕುಶ ಅಧಿಕಾರದಿಂದ ಪಾಲಿಸಬೇಕೆಂದು ಅಪೇಕ್ಷಿಸುತ್ತಿದ್ದ ರಣಜಿತ್‌ಸಿಂಗನಿಗೆ, ಹೊರಗಿನ ಶತ್ರುಗಳನ್ನು ಜಯಿಸುವುದು ಎಷ್ಟು ಆವಶ್ಯಕವಾಗಿತ್ತೋ, ಗೃಹಚ್ಛಿದ್ರಗಳನ್ನು ಸರಿಗೊಳಿಸಿ, ತನ್ನ ಕುಟುಂಬದಲ್ಲಿದ್ದ ತೊಂದರೆಗಳನ್ನು ನೀಗಿಸಿಕೊಳ್ಳುವುದೂ ಅಷ್ಟೇ ಆವಶ್ಯಕವಾಗಿತ್ತು ತಂದೆ ಮೃತನಾದ ನಂತರ ರಣಜಿತನು ತಾಯಿ ಮತ್ತು ಅತ್ತೆ ಎಂಬ ಇಬ್ಬರು ಹಂಗಸರ ಅಧಿಕಾರಕ್ಕೊಳಪಟ್ಟು-ಬೇಸತ್ತು, ಕೆಲವುಕಾಲ ತೊಂದರೆಪಟ್ಟನಲ್ಲವೆ? ಅವರಿಬ್ಬರಲ್ಲಿ ತಾಯಿಯು ತನ್ನ ಮೇಲಿನ ಅಧಿಕಾರವನ್ನು ಹೇಗೆ ನಿವಾರಿಸಿಕೊಂಡನೆಂಬಂಶವು ಈವರೆಗೇ ಉದಾಹೃತವಾಗಿದೆ ಆದರೆ ಅತ್ತೆಯಾದ ಸಾಡಾಕುವರಳು ಅಷ್ಟು ಸುಲಭಕ್ಕೆ ಬಗ್ಗುವ ಹೆಂಗಸಾಗಿರಲಿಲ್ಲ. ಇಷ್ಟವಿಲ್ಲವಿದ್ದರೂ ಕೆಲವುಕಾಲ ರಾಜನು ಆ ನಿರ್ಬಂಧವನ್ನು ಸಹಿಸಿಕೊಂಡಿರಬೇಕಾಗಿದ್ದಿತು. ಸಾಡಾಕುವರಳ ಅಧಿಕಾ

ರವು ಮನೆಯಲ್ಲಿ ವಿಶೇಷವಾದುದಾಗಿತ್ತು. ರಣಜಿತ್‌ಸಿಂಗನ ಮೊದಲನೆಯ ಪತ್ನಿಯಾದ ಮಹ್ತಾಬ್‌ಕುವರಳು ಸಾಡಾಕುವರಳ ಮಗಳಲ್ಲವೆ? ಅವಳು ಮಹಾರಾಜನಿಗಾಗಿ ಒಬ್ಬ ಪುತ್ರನನ್ನು ಹೆತ್ತು ಒಪ್ಪಿಸದಿದ್ದರೆ, ಅವಳ ಮೇಲೆ ಮಹಾರಾಜನ ಪ್ರೇಮವು ನಿರಂತರವಾಗಿ ಇರಲಾರದೆಂದೂ, ರಾಣಿಯೆಂಬ ಅವಳ ಪ್ರಾಶಸ್ತ್ಯಕ್ಕಾದರೂ ಬೆಲೆಯುಂಟಾಗಲಾರದೆಂದೂ ಯೋಚಿಸಿ ಸಾಡಾಕುವರಳು ಒಂದು ಉಪಾಯ ಮಾಡಿದಳು. ಸದಾ ಯುದ್ಧಜೀವಿಯಾದ ಮಹಾರಾಜನು ದೀರ್ಘಕಾಲದ ಒಂದಾನೊಂದು ಯುದ್ಧಯಾತ್ರೆಗೆಂದು ಹೋಗಿದ್ದು ಹಿಂದಿರುಗಿ ಬರುವವೇಳೆಗೆ ಎಲ್ಲಿಂದಲೋ ಒಂದು ಮಗುವನ್ನು ಸಂಪಾದಿಸಿ, ಅದು ತನ್ನ ಮಗಳಾದ ಮಹ್ತಾಬ್‌ಕುವರಳ ಉದರಸಂಭೂತವಾದುದೆಂದು, ಮಹಾರಾಜನಿಗೆ ಒಪ್ಪಿಸಿದಳು ಆದರೆ ದುರದೃಷ್ಟಿಯಾದ ಆ ಮಗುವು ಒಂದೂವರೆ ವರ್ಷಕಾಲ ಮಾತ್ರ ಬದುಕಿದ್ದು ಸತ್ತುಹೋಯಿತಾದುದರಿಂದ ಸಾಡಾಕುವರಳು ಕೆಲವು ದಿನಗಳು ಹತಾಶಳಂತಾದಳು. ಆದರೂ, ಸಾಹಸಿಯಾದ ಆ ಹೆಂಗಸು ಒಂದೇ ಪ್ರಯತ್ನದಿಂದ ತನ್ನ ಆ ಉದ್ಯೋಗವನ್ನು ಬಿಡಲಿಲ್ಲ. ೧೮೦೭ರಲ್ಲಿ ರಣಜಿತ್‌ಸಿಂಗನು ಸಟ್ಲೆಜ್ ನದೀಪ್ರಾಂತದ ಸ್ವಾಧೀನಕ್ಕೆಂದು ಸೈನ್ಯಸಮೇತನಾಗಿ ರಾಜಧಾನಿಯಿಂದ ಹೊರಟುಹೋಗಿದ್ದ ಕಾಲಾವಧಿಯಲ್ಲಿ ರಾಣಿ ಮಹ್ತಾಬ್‌ಕುವರಳು ಅವಳಿ ಮಕ್ಕಳನ್ನು ಹೆತ್ತಳೆಂಬ ವಾರ್ತೆಯನ್ನು ಹಬ್ಬಿಸಿ, ಮಹಾರಾಜನು ರಾಜಧಾನಿಗೆ ಬಂದೊಡನೆಯೇ ರಾಜಕುಮಾರರೆಂದು ಇಬ್ಬರು ಮಕ್ಕಳನ್ನು ಒಪ್ಪಿಸಿದಳು. ಅವರಲ್ಲೊಂದು ಒಬ್ಬ ನೇಯ್ಗೆವನಿಂದ ಬಳಗೆ ಕೊಂಡ ಮಗುವು; ಮತ್ತೊಂದು ತನ್ನ ಸ್ವಂತ ಜನಾನಾದಲ್ಲಿನ ಒಬ್ಬ ದಾಸಿಯ ಹೊಟ್ಟೆಯಲ್ಲಿ ಹುಟ್ಟಿದುದು! ಸ್ವಭಾವ ಸಂದೇಹಿಯಾದ ರಣಜಿತನು ಮೊದಲಿಗೇ ಅವರಿಬ್ಬರನ್ನೂ ತನ್ನ ಮಕ್ಕಳೆಂದು ಒಪ್ಪಿಕೊಳ್ಳಲಿಲ್ಲ; ಅಲ್ಲದೆ ಆ ಮಕ್ಕಳ ವಿಷಯದಲ್ಲಿ ಯಾವ ಬಗೆಯ ಅಭಿಮಾನ-ಆನಂದಗಳನ್ನೂ ಪ್ರದರ್ಶಿಸಲಿಲ್ಲ. ಆದರೆ ಮಾರನೆಯ ವರ್ಷ ತನಗೆ ಪ್ರಬಲರಾದ ಇಂಗ್ಲಿಷ್ ಫೌಜಿನವರೊಂದಿಗೆ ಯುದ್ಧವೊದಗಿದುದರಿಂದ, ಆಗ ಸಾಡಾಕುವರಳ ಮನಸ್ಸಂತೋಷಪಡಿಸಿ, ಆಕೆಯ ಬೆಂಬಲಕ್ಕಿದ್ದ ರಾಮಗಾರ್ಹಿಯಾ ಸರದಾರರ ಸಹಾಯವನ್ನು ಹೊಂದತಕ್ಕುದು ರಾಜನಿಗೆ ಆವಶ್ಯಕವೆನಿಸಿತು. ಒಡನೆ ರಾಜತಂತ್ರಕುಶಲನಾದ ಆತನು, ಆ ಇಬ್ಬರು ಬಾಲಕ

ರನ್ನೂ ತನ್ನ ಮಕ್ಕಳೆಂದು ಪ್ರೀತಿಸತೊಡಗಿ, ಅವರಿಗೆ ರಾಜಪುತ್ರರೆಂಬ ಬಿರುದನ್ನು ಅನುಗ್ರಹಿಸಿದನು ಅವರಲ್ಲೊಬ್ಬನಾದ ತಾರಾಸಿಂಗನು ಶುದ್ಧ ಮೂಢನು ಷೇರ್‌ಸಿಂಗೆಂಬ ಇನ್ನೊಬ್ಬನು ಬಹು ಸ್ಫುರದ್ರೂಪಿಯೂ, ಧೈರ್ಯಶಾಲಿಯೂ ಆದರೆ ದಡ್ಡನೂ ಆಗಿದ್ದನು.

ಸಮಯಜ್ಞನಾದ ಮಹಾರಾಜನು ಹೀಗೆ ಸಾಡಾಕುವರಳ ಮನಸ್ಸನ್ನು ತೃಪ್ತಿಪಡಿಸಿ, ತನ್ನ ಕೆಲಸವನ್ನು ಸಾಧಿಸಿಕೊಂಡನು ಆದರೂ ಅರಮನೆಯಲ್ಲೂ, ಕಾನ್ಹೇಯಾ ಮನೆತನದಲ್ಲೂ ಅವಳ ಮಹತ್ವವು ಇನ್ನೂ ನಡೆಯುತ್ತಿತ್ತು ಅಲ್ಲದೆ ಅವಳು ಕಾನ್ಹೇಯಾಮಿಸಲಿಗೆ ಅಧಿಪಳಾಗಿರುವವರೆಗೆ ಆ ಪ್ರಾಂತವು ನಿರಾತಂಕವಾಗಿ ತನ್ನ ವಶಕ್ಕೆ ಬಂದಂತಾಗುವುದಿಲ್ಲವೆಂಬ ಚಿಂತೆಯಾದರೂ ಆತನಿಗೆ ತಪ್ಪಲಿಲ್ಲ. ಹಾಗೆ ಆಕೆಯ ಅಧಿಕಾರವನ್ನು ಸಂಪೂರ್ಣವಾಗಿ ತೊಲಗಿಸಬೇಕೆಂಬ ಯೋಚನೆಯಲ್ಲೇ ಇದ್ದ ಆತನಿಗೆ ಒಂದು ಕಾರಣವೂ ದೊರೆಯಿತು. ರಾಜಕುಮಾರ ಷೇರ್‌ಸಿಂಗನು ಹನ್ನೆರಡುವರ್ಷ ಪ್ರಾಯದವನಾದನು; ಆ ವೇಳೆಗೆ ಹಜಾರಾ ಎಂಬಲ್ಲಿದ್ದ ಒಬ್ಬ ತುರುಷ್ಕ ಪ್ರಭುವಿನೊಂದಿಗೆ ಮಹಾರಾಜನಿಗೆ ಯುದ್ಧವೊಂದು ಪ್ರಾಪ್ತಿಸಿತು. ಆ ಯುದ್ಧಕ್ಕಾಗಿ ಕಳುಹಿಸಿದ ದಳದ ನಾಯಕತ್ವವು ಷೇರ್‌ಸಿಂಗನಿಗೆ ನಾಮಮಾತ್ರಕ್ಕೆ ವಹಿಸಲ್ಪಟ್ಟು ಅವನು ದಳದ ಅಧಿಪನಾಗಿ ಕಳುಹಲ್ಪಟ್ಟನು ಆ ಯುದ್ಧದಲ್ಲಿ ಅವನು ಉತ್ತಮರೀತಿಯಲ್ಲಿ ನಡೆದುಕೊಂಡು ಜಯಶಾಲಿಯಾದನೆಂಬ ವಾರ್ತೆಯು ಮಹಾರಾಜನಿಗೆ ತಲುಪಿತು. ಆ ಸಂಧಿಯನ್ನು ಸಾಧಿಸಿ, ಮಹಾರಾಜನು ಸಾಡಾಕುವರಳನ್ನು ಕುರಿತು 'ನಿಮಗಿನ್ನು ವಯಸ್ಸಾಯಿತು, ನಿಮ್ಮ ಪೌತ್ರನಾದ ರಾಜಪುತ್ರ ಷೇರ್‌ಷಹನು ಪ್ರಬುದ್ಧನಾಗಿದ್ದಾನೆ. ಅವನನ್ನು ದತ್ತುಮಾಡಿಕೊಂಡು, ರಾಜ್ಯಭಾರವನ್ನು ಅವನ ವಶಕ್ಕೆ ಕೊಟ್ಟು, ಲೌಕಿಕ ವ್ಯವಹಾರವನ್ನು ಬಿಟ್ಟು ಸ್ವಸ್ಥತೆಯನ್ನು ಹೊಂದುವುದು ಯೋಗ್ಯವೆಂದು' ಸೂಚಿಸಿದನು. ಆದರೆ ಆ ಮುದುಕಿಗೆ ಇನ್ನೂ ಲೌಕಿಕಾಧಿಕಾರ ವೈಭವಗಳ ಆಸೆಯು ತೀರದಿರಲು, ಆಕೆಯು ಅದಕ್ಕೊಪ್ಪದೆ, ಆ ಸ್ಥಳವನ್ನು ಬಿಟ್ಟು ತನ್ನ ರಾಜಧಾನಿಯಾದ ಬಟಾಲಾಕ್ಕೆ ಹೋಗಿ ಅಲ್ಲಿಂದ, ತನ್ನನ್ನು ತಮ್ಮ ಪೋಷಣೆಗೆ ವಹಿಸಿಕೊಂಡು, ರಣಜಿತನನ್ನು ಒಗ್ಗಿಸುವ ಕಾರ್ಯದಲ್ಲಿ ತನಗೆ ಸಹಾಯ ಮಾಡಬೇಕೆಂದು, ಆಗಲೇ ಸ್ವಲ್ಪಸ್ವಲ್ಪ ಪ್ರಾಬಲ್ಯಕ್ಕೆ ಬರುತ್ತಿದ್ದ ಇಂಗ್ಲೀಷ

ರೊಂದಿಗೆ ಸಂಧಾನ ನಡೆಯಿಸತೊಡಗಿದಳು. ಈ ಸಂಗತಿಯು ಮಂತ್ರಕುಶಲನಾದ ರಣಜಿತ್‌ಸಿಂಗನಿಗೆ ತಿಳಿಯಿತು. ಒಡನೆಯೇ, ಆತನು ಆಕೆಯನ್ನು ತನ್ನ ಆಸ್ಥಾನಕ್ಕೆ ಕರೆತರಿಸಿ, ಹಿಂದೆ ವಿನಯಪೂರ್ವಕ ಹೇಳಿದ್ದ ಮಾತುಗಳನ್ನೇ, ಆಗ ಬಹು ಖಂಡಿತವಾಗಿ ಒತ್ತಿಯೊತ್ತಿ ಹೇಳಿದನು ಅದು ಅವಳಿಗೆ ಸಮ್ಮತವಾಗಲಿಲ್ಲವೆಂಬುದನ್ನು ಹೇಳಬೇಕಾದ ಪ್ರಕೃತವೇನು ? ಆ ರಾತ್ರಿಯೇ ಆಕೆಯು ತಪ್ಪಿಸಿಕೊಂಡು ಹೋಗಲು ಪ್ರಯತ್ನಿಸಿದಳು ಆದರೆ ರಾಜನು ಒಡನೆ ಸೈನ್ಯವನ್ನು ಕಳುಹಿಸಿ ಆಕೆಯನ್ನು ಸೆರಗೊಳಿಸಿ, ಹಿಡಿತರಿಸಿ, ಒಂದು ಕೋಟೆಯಲ್ಲಿ ಬಂದಿಯಾಗಿ ಇಟ್ಟುಬಿಟ್ಟನು ಮತ್ತು ಅಚಿರಕಾಲದಲ್ಲೇ ಆಕೆಯ ಆಡಳಿತಕ್ಕೆ ಒಳಪಟ್ಟಿದ್ದ ವಿಸ್ತಾರವಾದ ರಾಜ್ಯಭಾಗವನ್ನೆಲ್ಲಾ ನಿರಾಯಾಸವಾಗಿ ತನ್ನ ಸ್ವಾಧೀನಕ್ಕೆ ತೆಗೆದುಕೊಂಡುಬಿಟ್ಟನು. ಬಟಾಲಾ ಎಂಬ ಊರು ಮಾತ್ರ ಷೇರ್‌ಸಿಂಗನಿಗೆ ಜಹಗೀರಾಗಿ ಕೊಡಲ್ಪಟ್ಟಿತು. ಸಾಡಾಕುವರಳು ಮುಂದೆ ಕೆಲದಿನಗಳು ಮಾತ್ರ ಆ ಸೆರೆಮನೆಯಲ್ಲಿ ಜೀವಿಸಿದ್ದು ತೀರಿಹೋದಳು. ಸಾಡಾಕುವರಳ ದ್ರವ್ಯ ಮತ್ತು ಸೈನ್ಯಸಹಾಯವೇ ರಣಜಿತನು ಲಾಹೋರ್ ಅಮೃತಸರ್ ಪ್ರಾಂತಗಳನ್ನು ಜಯಿಸಿ ಪ್ರಾರಂಭದಲ್ಲಿ ಗದಿಗಟ್ಟಿಕೊಳ್ಳಲು ಬಹುಮಟ್ಟಿಗೆ ಸಹಾಯಕವಾಗಿದ್ದುದರಿಂದ, ಆಕೆಯ ವಿಷಯದಲ್ಲಿ ಕೊನೆಗೆ ಮಹಾರಾಜನು ನಡೆದುಕೊಂಡ ಚರ್ಯೆಯು ಯುಕ್ತವಾದುದಾಗಲಿಲ್ಲ. ಅದನ್ನು ಕೃತಘ್ನತೆಯೆಂದು ಕರೆಯಲು ಯಾವ ಸಂದೇಹವೂ ಇಲ್ಲ ಆದರೆ, ರಾಜ್ಯವನ್ನೂ, ಅಧಿಕಾರ-ಆಡಳಿತಗಳನ್ನೂ ಸಂಪಾದಿಸುವವರು, ಇಂತಹ ಲೌಕಿಕ ಸೂಕ್ಷ್ಮತೆ-ಬಾಂಧವಾಭಿಮಾನಗಳನ್ನು ಗಮನಿಸತೊಡಗಿದರೆ ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುವುದೆಂತು ?



## ಅಧ್ಯಾಯ ೫. "ಇಂಗ್ಲಿಷರೊಂದಿಗೆ ಮೈತ್ರಿ"

ಈ ವೇಳೆಗೆ ಪಂಜಾಬಿನಲ್ಲಿ ಮಹಾರಾಜಾ ರಣಜಿತ್‌ಸಿಂಗನ ಆಡಳಿತವು ನಿರಂಕುಶವಾದುದಾಗಿತ್ತು. ಸಾಮಾನ್ಯವಾಗಿ ಸಟ್ಲೆಜ್ ನದಿಗೆ ಉತ್ತರಭಾಗದಲ್ಲಿದ್ದ ಎಲ್ಲಾ ಸಿಕ್‌ಸರದಾರರೂ ಆತನ ಆಡಳಿತಕ್ಕೆ ಒಳಪಟ್ಟಿದ್ದರು. ಆ

ದರೆ ಮಹಾರಾಜನ ಆಶಾಪಾತ್ರೆಯು ಮಾತ್ರ ಇನ್ನೂ ತುಂಬಿರಲಿಲ್ಲ. ಸಟ್ಲೆಜ್ ನದಿಯ ದಕ್ಷಿಣಕ್ಕಿದ್ದ ಸಂಸ್ಥಾನಗಳನ್ನೂ ಸ್ವಾಧೀನಗೊಳ್ಳಬೇಕೆಂಬ ಆತನ ಹವಣಿಕೆಯು ತಪ್ಪಲಿಲ್ಲ ಆದರೆ ಮುಂದೆ ವ್ಯಕ್ತವಾಗುವಂತೆ ಅದು ಆತನ ಜನ್ಮದಲ್ಲೇ ಸಾಧ್ಯವಾಗಲಿಲ್ಲ.

ಮಹಾರಾಜನು ತನ್ನ ತಂದೆಯ ಮರಣಾನಂತರ ಎಂಟು ಹತ್ತು ವರ್ಷಕಾಲದೊಳಗಾಗಿ, ಹಿಂದಿನ ಅಧ್ಯಾಯಗಳಲ್ಲಿ ಕಂಡಂತೆ ಅನೇಕ ರಾಜ್ಯಭಾಗಗಳನ್ನು ಸಂಪಾದಿಸಿ ಪ್ರತಿಭಾವಂತನಾದನಲ್ಲವೆ! ಆ ವರೆಗೆ ಆತನಿಗೆ ಪಂಜಾಬನ್ನು ಬಿಟ್ಟು, ಹೊರಗೆ ತನ್ನ ದೃಷ್ಟಿಯನ್ನು ಪ್ರಸರಿಸಲು ಅವಕಾಶವೇ ದೊರಕಲಿಲ್ಲ. ಆದರೆ, ೧೯ನೆಯ ಶತಮಾನವು ಪ್ರಾರಂಭವಾಗಲು, ಆ ವೇಳೆಗೆ ಪಂಜಾಬಿನ ಚಿಕ್ಕಪುಟ್ಟ ಸಂಸ್ಥಾನಗಳೆಲ್ಲವೂ ಸ್ವಾಧೀನವಾಗಿದ್ದುದರಿಂದ, ಮಹತ್ವಾಕಾಂಕ್ಷಿಯಾದ ಆ ರಾಜನು, ಹೊರಕ್ಕೂ ಕೈಚಾಚಲಾರಂಭಿಸಿದನು. ಆ ವೇಳೆಗೆ, ಇಂಗ್ಲೀಷರು ಈ ದೇಶದಲ್ಲಿ ಕೆಲಕೆಲ ಭಾಗಗಳಲ್ಲಿ ರಾಜ್ಯವನ್ನು ಸಂಪಾದಿಸಿಕೊಂಡು ಮುಂದೆ ದಿನದಿನಕ್ಕೆ, ಕಂಡಂತೆ-ಕಾಣದಂತೆ, ಮುಖ್ಯವಾಗಿ ಭೇದೋಪಾಯದಿಂದಲೂ, ಅದು ಸಾಗದಿದ್ದಲ್ಲಿ ದಾನ-ಸಾಮಗಳಿಂದಲೂ ಯಾವುದೂ ನಡೆಯದ ವೇಳೆಗಳಲ್ಲಿ ದಂಡೋಪಾಯದಿಂದಲೂ ರಾಜ್ಯಗಳನ್ನು ಗಳಿಸುತ್ತಾ ಇದ್ದರು. ದೂರದರ್ಶಿಯಾದ ಮಹಾರಾಜನು ತಮ್ಮ ದೇಶದಲ್ಲಿ ಪರದೇಶೀಯರಿಂದ ನಿರಾಕ್ಷೇಪಣೀಯವಾಗಿ ಜರುಗುತ್ತಿದ್ದ ಈ ಧಾಳಿಯನ್ನು ಕಣ್ಣಿಟ್ಟು ನೋಡುತ್ತಿದ್ದನು ಅದಕ್ಕೆ ಸಂಬಂಧಪಟ್ಟ ಎಲ್ಲಾ ವಿಚಾರಗಳನ್ನೂ ಕಿವಿಗೊಟ್ಟು ಕೇಳುತ್ತಿದ್ದನು. ಅವರೊಂದಿಗೆ ತಾನು ಹೇಗೆ ನಡೆದುಕೊಳ್ಳಬೇಕೆಂಬ ವಿಚಾರವನ್ನು ಕುರಿತು ದೀರ್ಘವಾಗಿ ಯೋಚಿಸುತ್ತಿದ್ದನು.

ಇಂಗ್ಲೀಷರ ರಾಜ್ಯಭಾರದಲ್ಲಿ ಆ ವರೆಗೆ ದಕ್ಷಿಣದಲ್ಲಿ ಉತ್ತರ ಸರಕಾರದ ಜಿಲ್ಲೆಗಳು ಏರ್ಪಾಡಾಗಿದ್ದುವು ೧೭೯೯ ರಲ್ಲಿ ಮೈಸೂರು ಯುದ್ಧವಾಗಿ ಈ ಪ್ರಾಂತದ ಜಿಲ್ಲೆಗಳೂ ಸೇರಿದುವು. ಅಲ್ಲದೆ ದಕ್ಷಿಣದ ಪ್ರಾಂತಗಳೂ ಕೈವಶವಾಗಿ ಮದ್ರಾಸ್ ಆಧಿಪತ್ಯವೂ ಏರ್ಪಟ್ಟಿತು ಬೊಂಬಾಯಿ ಆಧಿಪತ್ಯದ ಕೆಲಭಾಗಗಳು ಏರ್ಪಟ್ಟಿದ್ದುವು. ಪ್ಲಾಸೀ ಯುದ್ಧವಾದಂದಿನಿಂದ ಬಂಗಾಳದಲ್ಲಿ ಅವರ ಅಧಿಕಾರಕ್ಕೆ ತಡೆಗಡೆಯಿಲ್ಲದಂತಾಗಿತ್ತು; ಉತ್ತರ

ದೇಶದ ಬಂಗಾಳಾ, ಬನಾರಸ್, ಅಯೋಧ್ಯೆ, ಅಲಹಾಬಾದ್, ಕಾನ್‌ಪೂರ್, ಫರೂಕಾಬಾದ್ ಮುಂತಾದ ಅನೇಕ ಪ್ರಾಂತಗಳಮೇಲೆ ಅವರ ಸ್ವಾಮ್ಯವು, ಸ್ಥಾಪನೆಯಾಗಿತ್ತು. ಅಷ್ಟರಲ್ಲಿ ಲಾಸ್ವಾರಿ ಯುದ್ಧವಾಗಿ ಅದರಲ್ಲಿ ಸಿಂಧ್ಯನೂ ಸೋತುಹೋಗಲು ದೆಹಲಿ, ಆಗ್ರಾ, ಶಿರ್ಸಾ, ಹಿಸ್ಸಾರ್ ಮುಂತಾದ ಮಂಡಲಗಳೂ ಅವರ ಅಧೀನಕ್ಕೆ ಒಳಪಟ್ಟುವು—ಸಿಂಧ್ಯನ ಆಡಳಿತವು ಹೀಗೆ ನಾಶವಾಗಲು ಆ ವರೆಗೆ ಅವನ ಅಧೀನಕ್ಕೆ ಒಳಪಟ್ಟಿದ್ದ ಜೀಂಧ್ ಮತ್ತು ಕೈಥಲ್ ಸಂಸ್ಥಾನಗಳ ಸಿಕ್ ಸರದಾರರು ಇಂಗ್ಲೀಷರಮೇಲೆ ಕೃಪಾದಿ ಸ್ನೋತ ಕೊನೆಗೆ ಅವರೊಂದಿಗೆ ಕರಾರುಮಾಡಿಕೊಂಡು ಸ್ನೇಹಿತರಾಗಿ ನಿಂತರು.

ಅಷ್ಟರಲ್ಲೇ ಯಶವಂತರಾವ್ ಹೋಳ್ಕರ್ ಎಂಬ ಮರಾಟಾ ಸರದಾರನು, ತನ್ನ ದೊಡ್ಡದೊಂದು ಸೈನ್ಯದೊಂದಿಗ, ಆವರೆಗೇ ಇಂಗ್ಲೀಷರ ಸ್ವಾಧೀನಕ್ಕೆ ಬಂದಿದ್ದ ದೆಹಲೀ ನಗರವನ್ನು ಮುತ್ತಿದನು. ಆದರೆ ಅಲ್ಲಿ ಏನೂ ಪ್ರಯೋಜನವಾಗಲಿಲ್ಲ. ಕರ್ನಲ್ ಆಕ್ಟರ್‌ಲೋನಿ ಮತ್ತು ಕರ್ನಲ್ ಬರ್ನ್ ಎಂಬಿಬ್ಬರು ಶೂರಸರದಾರರು ಅವನನ್ನು ಅಲ್ಲಿಂದ ತರುಮಿ, ಮುಂದ ಎರಡು ಮೂರು ಯುದ್ಧಗಳಲ್ಲೂ ಸಂಪೂರ್ಣವಾಗಿ ಸೋಲಿಸಿಬಟ್ಟರು. ಹೋಳ್ಕರನ ಸಹಾಯವಿಹೀನನಾಗಿ ಪಾಟಿಯಾಲಾ ರಾಜನನ್ನಾಶ್ರಯಿಸಿದನು. ಅವನೂ ದಿನದಿನಕ್ಕೆ ಬಳೆಯುತ್ತಿದ್ದ ಇಂಗ್ಲೀಷರ ಪ್ರಾಬಲ್ಯಕ್ಕಾಗಿ ಬೆದರಿ, ಅವರ ಶತ್ರುವಾದ ಹೋಳ್ಕರನಿಗೆ ಆಶ್ರಯಕೊಟ್ಟರೆ ತನ್ನ ಬಾಳ್ವೆಯು ನಷ್ಟಗಾಗಲಿಕ್ಕಿಲ್ಲವೆಂದು ಯೋಚಿಸಿ, ಹೋಳ್ಕರನನ್ನು ಅಲ್ಲಿಂದ ಹೊರಡಿಸಿಬಿಟ್ಟನು. ಮುಂದೆ ಎಲ್ಲೂ ಆಶ್ರಯ ದೊರೆಯದಿರಲು ಯಶವಂತರಾಯನು ನೇರವಾಗಿ ಅಮೃತಸರ ನಗರಕ್ಕೆ ನಡೆದು ಮಹಾರಾಜಾ ರಣಜಿತ್‌ಸಿಂಗನನ್ನು ಸಹಾಯ ಬೇಡಿದನು. ಮಹಾರಾಜನು ಸ್ವದೇಶೀಯನಾದ ಆತನಿಗೆ ಸಹಾಯಮಾಡಲು ಸಂತೋಷದಿಂದ ಒಪ್ಪಿಕೊಂಡನು. ವೀರಾಗ್ರಣಿಯಾದ ರಣಜಿತನು ತಮ್ಮ ಶತ್ರುವನ ಬೆನ್ನಹಿಂದೆ ಹಾಕಿಕೊಂಡಿದ್ದಾನಂಬ ವಾರ್ತೆಯು ಇಂಗ್ಲೀಷರಿಗೆ ತಿಳಿಯಿತು. ಇಂಗ್ಲೀಷರಿಗೆ ಈವರೆಗೇ ಹೇಳಿದಂತೆ ಅನೇಕ ಸ್ಥಳಗಳು ಸೇರಿದ್ದರೂ, ಅವು ಸ್ಥಿತಿಯು ಇನ್ನೂ ಸ್ಥಿರಸ್ವರೂಪಕ್ಕೆ ಬಂದಿರಲಿಲ್ಲ. ಅವರ ಆಧಿಪತ್ಯವೂ ಆನಂತೆ ಬೇರುಬಿಟ್ಟುಕೊಂಡಿರಲಿಲ್ಲ. ಆದುದರಿಂದ, ಏಕಾಏಕಿ ಪ್ರಬಲಶತ್ರುನೊಂದಿಗೆ ಯುದ್ಧಕ್ಕೆ ತೊಡಗಲು ಅವರು ಶಂಕಿಸಿದಂತೆ ತೋರಿತು. ಕ

ದಿನಗಳಲ್ಲೇ, ಶತ್ರುಪಕ್ಷದ ಹೋಳ್ಕರನೊಂದಿಗೆ ಒಂದು ಕರಾರನ್ನು ಮಾಡಿಕೊಳ್ಳಲು ಇಂಗ್ಲೀಷ್ ಸರಕಾರದ ಪ್ರತಿನಿಧಿಗಳು ಸಂಧಾನ ನಡೆಯಿಸಿದರು. ಅದರ ಷರತ್ತುಗಳನ್ನು ಅನುಸರಿಸಿ, ಹೋಳ್ಕರನಿಗೆ ಆವರೆಗೆ ಆತನಿಂದ ಕಿತ್ತುಕೊಳ್ಳಲ್ಪಟ್ಟಿದ್ದ ಪ್ರದೇಶಗಳೆಲ್ಲವೂ ಪುನಃ ದೊರೆತುವು. ಅಲ್ಲದೆ ಆ ಸಂದರ್ಭದಲ್ಲೇ ಇಂಗ್ಲೀಷರು, ಮಹಾರಾಜಾ ರಣಜಿತ್‌ಸಿಂಗ್ ಮತ್ತು ಫಾಥೇಸಿಂಗ್ ಇವರುಗಳೊಂದಿಗೆ ಈಸ್ಟಿಂಡಿಯಾ ಕಂಪೆನಿಯು ಪರವಾಗಿ ಒಂದು ಕರಾರು ಮಾಡಿಕೊಂಡರು. ಅದರ ಷರತ್ತುಗಳಂತೆ, ಹೋಳ್ಕರನು ಒಡನೆ ಅಮೃತಸರ್ ನಗರವನ್ನು ಬಿಟ್ಟು ಹೊರಡಬೇಕು ; ಅವನೊಂದಿಗೆ ಮೇಲ್ಕಂಡ ಇಬ್ಬರು ಸಿಕ್ ಸರದಾರರೂ ಯಾವ ಸಂಬಂಧವನ್ನೂ ಇಟ್ಟುಕೊಳ್ಳಕೂಡದು , ಅವನಿಗೆ ಸೈನ್ಯವನ್ನು ಒದಗಿಸಿಯಾಗಲೀ ಮತ್ತಾವ ಬಗೆಯಲ್ಲಿಯಾಗಲೀ ಯಾವ ಸಹಾಯವನ್ನೂ ಮಾಡಕೂಡದು, ಮತ್ತು ಬ್ರಿಟಿಷರಿಗೆ ವಿರೋಧಿಗಳಾದ ಯಾರೊಂದಿಗೂ ಸ್ನೇಹವನ್ನು ಬೆಳೆಯಿಸಕೂಡದು, ಅಲ್ಲದೆ ಮಿತ್ರದ್ರೋಹಕರವಾದ ಯಾವ ಬಗೆಯ ಚರ್ಯೆಗೂ ಅವಕಾಶಕೊಡಕೂಡದು, ಎಂದು ಏರ್ಪಾಡಾಯಿತು. ಈ ಷರತ್ತುಗಳಿಗೆ ಮಹಾರಾಜನೂ ಮತ್ತು ಫಾಥೇಸಿಂಗ್ ಈ ಇಬ್ಬರೂ ಮಾನ್ಯಕೊಟ್ಟು ನಡೆದುಕೊಳ್ಳುವವರೆಗೆ ಬ್ರಿಟಿಷ್ ಸೈನ್ಯಗಳು ಸಿಕ್ ಸಂಸ್ಥಾನಗಳನ್ನು ಪ್ರವೇಶಿಸುವುದಿಲ್ಲವೆಂದೂ, ಬ್ರಿಟಿಷ್ ಅಧಿಕಾರಿಗಳು ಅವುಗಳ ಮುತ್ತಿಗೆ-ವಿಭಾಗ ಮುಂತಾದುವುಗಳಲ್ಲಿ ಯಾವ ಭಾಗವನ್ನೂ ವಹಿಸುವುದಿಲ್ಲವೆಂದೂ ಉಭಯರೂ ಒಪ್ಪಿಕೊಂಡರು. ಹೋಳ್ಕರನು ಅಮೃತಸರದಿಂದ ಹೊರಟುಹೋದನು. ಕೆಲ ದಿನಗಳು ಎಲ್ಲವೂ ಸುಮುಖವಾಗಿದ್ದುವು.

ಸಟ್ಲೆಜ್ ನದಿಯ ಉತ್ತರಭಾಗದ ಮಿಸಲೆಗಳು ರಣಜಿತ್‌ಸಿಂಗನ ಅಧೀನಕ್ಕೆ ಬಂದುವು. ದೆಹಲಿ ಮುಂತಾದ ಭಾಗಗಳು ಈವರೆಗೇ ಇಂಗ್ಲೀಷರ ಅಧಿಕಾರಕ್ಕೆ ಒಳಪಟ್ಟಿದ್ದುವು. ಆದರೆ ದೆಹಲಿಗೂ, ಸಟ್ಲೆಜ್ (ಶತದ್ರು) ನದಿಗೂ ಮಧ್ಯದಲ್ಲಿದ್ದ ಪಾಟಿಯಾಲಾ, ಜಿಂಧ್, ಕೈಥಲ್ ಮುಂತಾದ ಪ್ರಾಂತಗಳವರ ಸ್ಥಿತಿ ಮಾತ್ರ ಬಹು ಶೋಚನೀಯವಾಗಿದ್ದಿತು. ರಣಜಿತ್‌ಸಿಂಗನು ಯಾರಿಗೂ ಸೇರದಿದ್ದ ಸಟ್ಲೆಜ್ ನದಿಯ ದಕ್ಷಿಣಕ್ಕಿದ್ದ ಆ ಪ್ರಾಂತಗಳನ್ನೂ ಜಯಿಸಿ, ಬಹು ದಿನಗಳಿಂದಲೂ ತನಗಿದ್ದ ಆಸೆಯನ್ನು ತೀರಿಸಿಕೊಳ್ಳಬೇಕೆಂದು ಎಣಿಸಿದ್ದನು. ಅಷ್ಟರಲ್ಲಿ ಜಿಂಧ್ ಮತ್ತು ಪಾಟಿಯಾಲಾ ಸಂಸ್ಥಾನ

ಗಳ ಸರದಾರರು ಜಗಳವಾಡಿಕೊಂಡು ಮಧ್ಯಸ್ಥಿಕೆಗಾಗಿ ರಣಜಿತ್‌ಸಿಂಗ ನಲ್ಲಿಗೇ ಓಡಿದರು ಸಮಯವನ್ನು ಕಾಯ್ದುಕೊಂಡು ಕುಳಿತಿದ್ದ ಮಹಾರಾ ಜನು, ಇಷ್ಟು ಸುಲಭವಾಗಿ ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಳ್ಳುವನಲ್ಲ ವಷ್ಟೆ! ಆ ಸಂಧಿಯನ್ನು ಸಾಧಿಸಿ, ದೊಡ್ಡ ಸೈನ್ಯದೊಂದಿಗೆ ನಡೆದು, ನಾರಾ ಯಣಪುರ್, ವಾಡ್ನಿ, ಮೋರಿಂದ ಮುಂತಾದ ಫಿರೋಜ್‌ಪುರ್ ಮಂಡಲದ ಅನೇಕ ಭಾಗಗಳನ್ನು ಸ್ವಾಧೀನಪಡಿಸಿಕೊಂಡನು

ಸಿಕ್‌ಸರದಾರರು ತಮ್ಮ ತಮ್ಮಲ್ಲಿ ಹುಟ್ಟಿದ ವ್ಯಾಜ್ಯವನ್ನು ತೀರಿ ಸಲು ರಣಜಿತ್‌ಸಿಂಗನನ್ನು ಕರೆದುದು, ಬೆಕ್ಕುಗಳು ವ್ಯಾಜ್ಯವಾಡಿಕೊಂಡು ಕೋತಿಯ ಸಹಾಯವನ್ನು ಅಪೇಕ್ಷಿಸಿದಂತಾಯಿತು ಎಂದುಕೊಂಡರು ಅಲ್ಲಿಂದ ಹೊರಟು ಇಂಗ್ಲೀಷರಲ್ಲಿ ಸಹಾಯಬೇಡಿದರು. ಇಂಗ್ಲೀಷರ ಉದ್ದೇಶವೂ ಅದೇ ತಾನೆ! ಆದರೆ ಅದು ಒರಟರಾದ ನಮ್ಮವರ ರೀತಿಯಂತಲ್ಲ, ಅಷ್ಟೆ! ಇಂಗ್ಲೀಷರಿಗೆ ಆ ಸರದಾರರಿಗೆ ಸಹಾಯವಾಡಲು ಇಷ್ಟವಿತ್ತು ಹಾಗೆ ಮಾಡಿದರೆ ತಮ್ಮ ತಮ್ಮ ಷರತ್ತುಗಳಿಗೆ ವಿಘ್ನ ಬಂದು, ಒಂದುವೇಳೆ ಕುಪಿತ ನಾದ ಮಹಾರಾಜನು, ಫ್ರೆಂಚರ ಸಹಾಯ ಪಡೆದು ತಮ್ಮನ್ನು ಎದುರಿಸ ತೊಡಗಿದರೆ, ಏನುಮಾಡಬೇಕೆಂದೂ ಯೋಚಿಸತೊಡಗಿದರು ಅನೇಕ ರಾಜ ಕೀಯ ಸಂಧಾನಗಳು ನಡೆದುವು ಕೊನೆಗೆ ೧೮೦೯ನೆಯ ಏಪ್ರಿಲ್ ೨೫ನೆಯ ದಿನ ಮಹಾರಾಜಾ ರಣಜಿತ್‌ಸಿಂಗನಿಗೂ, ಬ್ರಿಟಿಷ್ ಈಸ್ಟಿಂಡಿಯಾ ಕಂಪನಿಯ ಪ್ರತಿನಿಧಿಗಳಿಗೂ ಒಂದು ಒಪ್ಪಂದವಾಯಿತು ಇದರ ಷರತ್ತುಗಳನ್ನೀರೆಗೆ ಇಂಗ್ಲೀಷರು ಸಟ್ಲೆಜ್ ನದಿಯ ಉತ್ತರಭಾಗದ ಸಿಕ್ ಸಂಸ್ಥಾನಗಳ ಮತ್ತು ಅದರ ಪ್ರಜೆಗಳ ಮೇಲಿನ ಮಹಾರಾಜನ ನಿರಂಕುಶ ಅಧಿಕಾರದಲ್ಲಿ ಯಾವ ಒಗೆಯಿಂದಲೂ ಪ್ರವೇಶಿಸಕೂಡದೆಂದೂ, ಮಹಾರಾಜನೂ ಸಟ್ಲೆಜ್ ನದಿಯ ದಕ್ಷಿಣದ ಸರದಾರರಮೇಲೆ ಕೈಮಾಡದಂತಿರಬೇಕೆಂದೂ, ಉಭಯರೂ ಪರ ಸ್ಪರ ಶತ್ರುಗಳಮೇಲೆ ಯುದ್ಧಹೂಡಿದಾಗ ಸಹಾಯಕರಾಗಬೇಕೆಂದೂ ಗೊ ತ್ತಾಯಿತು ಈಗ ಇಂಗ್ಲೀಷರೊಂದಿಗೆ ಆದ ಈ ಮೈತ್ರಿಯನ್ನು ಮಹಾರಾ ಜನು ಮೂವತ್ತು ವರ್ಷಕಾಲ ಎಂದರೆ ಮರಣಾವಧಿ ಪಾಲಿಸಿದನು. ಇಂಗ್ಲೀ ಷರೂ ಆತನಿಗೆ ಯೋಗ್ಯಗೌರವವನ್ನಿತ್ತು ತಮ್ಮ ಮಾತನ್ನು ಉಳಿಸಿಕೊಂಡು ಬಂದರು.

## ಅಧ್ಯಾಯ ೬. "ಅಂತ್ಯದೆಸೆ-ಮೃತ್ಯು"

ಪೂರ್ವಾಧ್ಯಾಯದ ಅಂತ್ಯಭಾಗದಲ್ಲಿ ಉದಾಹೃತವಾದಂತೆ ಇಂಗ್ಲಿಷರೊಂದಿಗೆ ಮಿತ್ರತ್ವವನ್ನು ಬೆಳೆಸಿದ ಮಹಾರಾಜನು, ದಕ್ಷಿಣ ಪ್ರಾಂತದಲ್ಲಿ ಧಾಳಿಮಾಡಲು ಯತ್ನವಿಲ್ಲದಿರಲು, ಜಯಿಸಲರ್ಹವಾದ ಇತರ ಸ್ಥಳಗಳಾವುವೆಂದು ನೋಡಲಾರಂಭಿಸಿದನು. ಆಗ ಆತನ ದೃಷ್ಟಿಯು ಉತ್ತರಕ್ಕೂ ಪೂರ್ವಪಶ್ಚಿಮಗಳಿಗೂ ತಿರುಗಿತು. ಆ ಪ್ರಾಂತಗಳು ಮುಸಲ್ಮಾನ ಪ್ರಭುಗಳಿಂದ ಪಾಲಿಸಲ್ಪಡುತ್ತಿದ್ದುವು. ಹಿಂದೂಗಳಿಗೆ ವಿರೋಧಿಗಳೂ ಪ್ರಬಲ ಪರಾಕ್ರಮಿಗಳೂ ಆದ ಅವರನ್ನು ಜಯಿಸಬೇಕಾದುದು ಕರ್ತವ್ಯವೆಂದು ರಣಜಿತ್ ಸಿಂಗನಿಗೆ ತೋರಿತು. ಮುಲ್ತಾನ್, ಪೆಷಾವರ್, ಡೆಪರಾತ್ ಮುಂತಾದ ಮಂಡಲಗಳು ಅಂತಹ ಪ್ರಾಂತಗಳಲ್ಲಿ ಮುಖ್ಯವಾದುವು.

೧೮೦೨ ನೆಯ ಸಂ॥ ದಲ್ಲಿ ರಣಜಿತ್‌ಸಿಂಗನು ಮುಲ್ತಾನ್ ಪ್ರಾಂತದ ಸ್ಥಿತಿಗತಿಗಳನ್ನು ತಿಳಿಯಲು ಸೈನ್ಯಸಮೇತನಾಗಿ ಆಕಡೆ ಹೋಗಿದ್ದನು. ಅದನ್ನು ಆಗ ಆಳುತ್ತಿದ್ದ ಮುಜಫರ್‌ಖಾನ್ ಎಂಬಾತನು ಆತನ ಶೌರ್ಯಕ್ಕೆ ಭಯಪಟ್ಟು ತನ್ನ ರಾಜಧಾನಿಯಿಂದ ಮೂವತ್ತುಮೈಲು ದೂರ ಹೊರಟುಬಂದು ಆತನನ್ನು ಎದುರುಗೊಂಡು ಕಪ್ಪಕಾಣಿಕೆಗಳನ್ನೊಪ್ಪಿಸಿದನು. ಮಿತ್ರಭಾವವನ್ನು ಸೂಚಿಸುವ ಚಿಹ್ನೆಯಾಗಿ ಇಬ್ಬರೂ ತಲೆಪಾಗುಗಳನ್ನು ಬದಲಾಯಿಸಿಕೊಂಡರು. ಆಗ ನವಾಬನ ಈ ಬಗೆಯ ಉಪಚಾರದಿಂದ ರಿಕ್ತಹಸ್ತನಾಗಿ ಹಿಂದಿರುಗಬೇಕಾದ ಮಹಾರಾಜನು ಪುನಃ ೧೮೦೬ ರಲ್ಲಿ ಆ ಪ್ರಾಂತ ದಂಡೆತ್ತಿ ನಡೆದನು. ಆ ಸಾರಿ ೭೦,೦೦೦ ರೂಪಾಯಿಗಳ ಕಾಣಿಕೆಯನ್ನು ಕೊಟ್ಟು, ನವಾಬನು ತನ್ನ ಪ್ರಾಂತವನ್ನು ಸುರಕ್ಷಿತವಾಗಿ ಉಳಿಸಿಕೊಂಡನು. ಮುಂದೆ ಈ ಬಗೆಯ ಸುಲಿಗೆಯು ಮೇಲೆಮೇಲೆ ಬಲವಾಗತೊಡಗಿತು! ನವಾಬನು ಈ ಕಾಟವನ್ನು ಸಹಿಸಲಾರದೆ ರೋಸಿ ಎಲ್ಲವನ್ನೂ ಬಿಟ್ಟು ಮಕ್ಕಾಯಾತ್ರೆಗೆ ಹೊರಟುಹೋದನು. ಅಲ್ಲಿಂದ ಹಿಂದಿರುಗಿದಮೇಲೆ ತನ್ನನ್ನು ರಣಜಿತನ ಈ ಬಾಧೆಯಿಂದ ಕಾಪಾಡಬೇಕೆಂದು ಇಂಗ್ಲೀಷರನ್ನು ಕೇಳಿಕೊಂಡನು. ಆದರೆ ಅವರು ಅಷ್ಟು ದೂರದಲ್ಲಿದ್ದ ಮುಲ್ತಾನ್ ವಿಚಾರದಲ್ಲಿ ತಮ್ಮ ಸಹ್ಯಸ್ಥಿತಿಯಲ್ಲಿ ಪ್ರವೇಶಿಸಲಾರೆವೆಂದು ನುಡಿದುಬಿಟ್ಟರು. ರಣಜಿತ್‌ಸಿಂಗನ ಕಾಟವು ವರ್ಷವರ್ಷವೂ ತಪ್ಪಲೇ ಇಲ್ಲ. ಕೊನೆಗೆ ೧೮೧೮ನೆಯ ಸಂ॥ ದಲ್ಲಿ ಬಲವಾದ

ಸಿಕ್ ಸೈನ್ಯದೊಂದಿಗೆ ಫೂಲಸಿಂಗ್ ಎಂಬ ಧೀರನು ಬಂದು ಮುಲ್ತಾನ್ ಪಟ್ಟಣವನ್ನು ಮುತ್ತಿದನು. ನವಾಬನ ಸೈನ್ಯಕ್ಕೂ ಶತ್ರು ಸೈನ್ಯಕ್ಕೂ ಘೋರ ಯುದ್ಧವು ನಡೆಯಿತು. ಸುಲ್ತಾನನ ಐವರು ಮಕ್ಕಳೂ, ವೃದ್ಧನಾದ ಆತನೂ ರಣದೇವತೆಗೆ ಶಿರಸ್ಸನ್ನೊಪ್ಪಿಸಿದರು ಸಿಕ್ ಸೈನಿಕರು ಪಟ್ಟಣವನ್ನು ಕೊಳ್ಳೆ ಹೊಡೆದರು ಮಹಾರಾಜನ ಲಾಹೋರ್ ಖಜಾನೆಗೆ ಈ ಪಟ್ಟಣದ ಕೊಳ್ಳೆಯಿಂದ ಐದು ಲಕ್ಷ ರೂಪಾಯಿಗಳು ಜಮಾ ಆದುವು.

ತರುವಾಯ ಮಹಾರಾಜನ ದೃಷ್ಟಿಯು, ಗಂಭೀರವಾದ-ಪ್ರಕೃತಿಸೌಂದರ್ಯದಿಂದ ನೇತ್ರಾನಂದಕರವಾದ, ಕಾಶ್ಮೀರಪ್ರಾಂತದ ಮೇಲೆ ಬಿತ್ತು. ಪೂರ್ವಕ್ಕೆ ಬಹು ದಿನಗಳಿಂದಲೂ ಹಿಂದೂರಾಜರಿಂದಲೇ ಪಾಲಿತವಾಗಿದ್ದ ಆ ಪ್ರಾಂತವು ಅಕ್ಬರ್ ಚಕ್ರವರ್ತಿಯ ಕಾಲದಲ್ಲಿ ಅಧಿಕಾರಕ್ಕೆ ಒಳಪಟ್ಟಿತು ಅವರು ಆ ಪ್ರಾಂತದಲ್ಲಿ ಸುಂದರವಾದ ಕೋಟೆಗಳನ್ನೂ ಆರಾಮಗಳನ್ನೂ ವಿಹಾರಸ್ಥಳಗಳನ್ನೂ, ದಿವ್ಯ ಮಂದಿರಗಳನ್ನೂ ಕಟ್ಟಿಸಿ, ಪ್ರತಿ ಸಂವತ್ಸರದ ವಸಂತಕಾಲದಲ್ಲೂ, ಆನಂದಪ್ರದಾಯಿನಿಯಾದ ಆ ಪ್ರಾಂತಕ್ಕೆ ವಿಹಾರಾರ್ಥವಾಗಿ ತಪ್ಪದೆ ಬರುತ್ತಿದ್ದರು ಮೊಗಲಾಯರ ತರುವಾಯ ಅದು ಅಫ್ಘಾನರ ಸ್ವಾಧೀನಕ್ಕೆ ಬಂತು. ನಂತರ ಅವರಿಂದ ರಾಜಪುತ್ರರ ವಶವಾಯಿತು. ರಣಜಿತ್‌ಸಿಂಗನು ಆ ಸುಂದರಪ್ರದೇಶವನ್ನು ಜಯಿಸಲೆಳೆಸಿ ಸೈನ್ಯದೊಂದಿಗೆ ನಾಲ್ಕಾರುಸಾರಿ ದಂಡೆತ್ತಿ ನಡೆದನು. ಮಿಕ್ಕ ಎಲ್ಲಾ ಪ್ರಾಂತಗಳಂತೆಯೇ ಅದು ಕೂಡ ಸುಲಭವಾಗಿ ಸ್ವಾಧೀನಕ್ಕೆ ಬರಲಿಲ್ಲ ರಜಪೂತರೂ ಅಫ್ಘಾನರೂ ಎದುರಿಸಿ ಆತನನ್ನು ಎಷ್ಟೋಸಾರಿ ಹಿಂದಕ್ಕಟ್ಟಿದರು ಆದರೂ ದೃಢನಿಶ್ಚಯವುಳ್ಳ ಮಹಾರಾಜಾ ರಣಜಿತ್‌ಸಿಂಗನು ೧೮೧೯ ರಲ್ಲಿ ಆ ಪ್ರಾಂತವನ್ನು ಸ್ವಾಧೀನಗೊಳಿಸಿಕೊಂಡು ಶ್ರೀ ನಗರದಲ್ಲಿ ತನ್ನ ಬಾವುಟವನ್ನು ಎತ್ತಿಸಿಯೇ ಬಿಟ್ಟನು

ಕಾಂಗ್ರಾ ಪ್ರಾಂತವನ್ನು ಸಾಸರ್‌ಸಿಂಗ್ ಎಂಬೊಬ್ಬ ರಜಪೂತವೀರನು ಆಳುತ್ತಿದ್ದನು ಆತನ ಮರಣಾನಂತರ ಮಗನಾದ ಅನುರೋಧಚಂದನೆಂಬುವನು ಪ್ರಭುತ್ವಕ್ಕೆ ಬಂದನು ಆತನ ತಂಗಿಯನ್ನು, ಮಹಾರಾಜನು ತನ್ನ ಪ್ರೇಮಪಾತ್ರನಾದ ಧಯಾನ್‌ಸಿಂಗನ ಮಗ ಹೀರಾಸಿಂಗನಿಗೆ ಲಗ್ನಮಾಡಿಕೊಡಬೇಕೆಂದು, ಹೇಳಿಕಳುಹಿಸಿದನು ಆದರೆ ಅನುರೋಧಚಂದನು ಅದನ್ನು ಲಕ್ಷಿಸದೆ ಹೀನಕುಲಜನಾದ ಅವನಿಗೆ ತನ್ನ ತಂಗಿಯನ್ನು

ಕೊಡಲಾರೆನೆಂದನು. ಆ ಪ್ರತ್ಯುತ್ತರವು ಮಹಾ ಅಭಿಮಾನಿಯಾದ ರಣಜಿತ ನಿಗೆ ಅತಿಶಯ ಕೋಪಸಂತಾಪಗಳನ್ನುಂಟುಮಾಡಲು, ಒಡನೆ ಅಗಾಧಸೈನ್ಯ ದೊಂದಿಗೆ ಆ ಪ್ರಾಂತದಮೇಲೆ ದಂಡೆತ್ತಿ ನಡೆದು ೧೮೨೯ರಲ್ಲಿ ಅವನನ್ನು ಸಂಪೂ ರ್ಣವಾಗಿ ಯುದ್ಧದಲ್ಲಿ ಸೋಲಿಸಿ, ಸದೆದು ಅವನ ಇಬ್ಬರು ತಂಗಿಯರನ್ನೂ ತಾನೇ ಮದುವೆಯಾಗಿಬಿಟ್ಟನು. ಪೆಷಾವರ್ ಪ್ರಾಂತವಾದರೂ ಹೀಗೆಯೇ ಯುದ್ಧ ಮುಖದಿಂದಲೇ ಮಹಾರಾಜನಿಗೆ ವಶವಾಯಿತು.

ಮಹಾರಾಜಾ ರಣಜಿತ್‌ಸಿಂಗನಿಗೆ ಹದಿನೆಂಟುಮಂದಿ ಹೆಂಡತಿಯರು, ಅವರಲ್ಲಿ ಒಂಬತ್ತು ಮಂದಿ ಧಾರ್ಮಿಕ ರೀತಿಯಲ್ಲಿ ಮದುವೆಯಾದವರು ಮಿ ಕ್ಕವರು ದುಪ್ಪಟಿಯನ್ನು ಹೊದ್ದಿಸಿ-ಎಂದರೆ ಕೂಡಿಕೆಯ ಪದ್ಧತಿಯಿಂದ ಜನಾನಾಕ್ಕೆ ಸೇರಿದವರು. ಅವರೆಲ್ಲರಲ್ಲಿ ರಾಣಿ ರಾಜಕುವರ್ ಎಂಬಾಕೆ ಯೊಬ್ಬಳಲ್ಲಿ ಮಾತ್ರವೇ, ರಣಜಿತನಿಗೆ ಖರಕ್‌ಸಿಂಗೆಂಬ ಒಬ್ಬನೇ ಮಗನು ಜನಿ ಸಿದನು. ಆದರೆ, ಇತರ ಪತ್ನಿಯರಲ್ಲಿ ಹುಟ್ಟಿದವರೆಂದು ಅವರ ಸಂಬಂಧಿಗಳು ಅನೇಕ ಮಂದಿಯನ್ನು ಹೆಸರಿಸಿ ಮಹಾರಾಜನಿಗೆ ಮಕ್ಕಳೆಂದು ಒಪ್ಪಿ ಸಿದರು ಆದರೆ ಅವರೆಲ್ಲರೂ ರಾಜನ ಔರಸ ಸಂತತಿಯವರೆಂದು ಒಪ್ಪಿತ ವಾಗಲಿಲ್ಲ ಮಹಾರಾಜನ ತರುವಾಯ ಖರಕ್‌ಸಿಂಗನು ಮಾತ್ರವೇ ಆತನನ್ನು ಅನುಸರಿಸಿ ಪಟ್ಟಕ್ಕೆ ಬಂದನು.

ಮಹಾರಾಜಾ ರಣಜಿತ್‌ಸಿಂಗನು ಪ್ರಾಯದಲ್ಲಿ ಧೀರನಾಗಿದ್ದನು. ಅರಿಭಯಂಕರನಾಗಿದ್ದನು ಯುದ್ಧ ವಿದ್ಯೆಯಲ್ಲಿ ಮಹಾಚತುರನಾಗಿ ದ್ದನು. ಭಯವೆಂಬ ವಸ್ತುವೆಂಥದೆಂಬುದನ್ನು ಅರಿಯದಿದ್ದನು. ಆದುದ ರಿಂದ ಬಹುಸ್ವಲ್ಪವಾಗಿ ತನ್ನ ಹಿರಿಯರಿಂದ ತನ್ನ ಸ್ವಾಧೀನಕ್ಕೆ ಬಂದ ದೇಶವನ್ನೂ-ಸೈನ್ಯವನ್ನೂ ಬಹು ವಿಸ್ತಾರವಾಗಿಯೂ-ಅಸಂಖ್ಯವಾಗಿಯೂ ಹೆಚ್ಚಿಸಿ ಸುತ್ತುಮುತ್ತಿನ ಅನೇಕ ಪ್ರಾಂತಗಳನ್ನು ಸ್ವಾಧೀನಗೊಂಡು ಮಹಾ ರಾಜನೆಂಬ ಶಾಶ್ವತಕೀರ್ತಿಯನ್ನು ಗಳಿಸಿ ರಾಜ್ಯವಾಳಿ ಯಶೋವಂತನಾದನು

ಆದರೆ ರಣಜಿತನು ವಿದ್ಯಾವಂತನಲ್ಲ ವಿಚಕ್ಷಣಮತಿಯುಳ್ಳ. ಅವನ ಬುದ್ಧಿಯು ಯುದ್ಧವಿದ್ಯೆಯಲ್ಲಿ ಕುಶಲವಾಗಿದ್ದಷ್ಟು ಮಿಕ್ಕ ಧಾರ್ಮಿಕ ನೈತಿಕ ವಿಷಯಗಳಲ್ಲಿ ನುರಿತಿರಲಿಲ್ಲ. ಸಾಲದುದಕ್ಕೆ ಈ ಮೊದಲೇ ಹೇಳಲ್ಪಟ್ಟಂತೆ ಸಾಡಾಕುವರಳು ಯೌವನ ಪ್ರಾರಂಭದಲ್ಲೇ ಆತನಲ್ಲಿ ವಿಷಯಾಭಿಲಾಷೆ

ಯನ್ನು ಅತಿಶಯವಾಗಿ ಹೆಚ್ಚಿಸಿಬಿಟ್ಟಿದ್ದಳು ಕುಡಿತ ವ್ಯಭಿಚಾರಾದಿಗಳೂ ಸ್ತ್ರೀಲೋಲುಪತೆಯೂ ಅಳತೆಗೆಟ್ಟು ನಡೆದುದರಿಂದ, ರಾಜನ ವಜ್ರದೇಹವು ಝುರ್ಝುರೀಭೂತವಾಯಿತು ವಯಸ್ಸು ಕಳೆದಂತೆಲ್ಲಾ ದೇಹವು ಬಹು ಮಟ್ಟಿಗೆ ಗಳಿತವಾಯಿತು ೧೮೩೪ರಲ್ಲಿ ಪಾರ್ಶ್ವವಾಯುವು ಹೊಡೆದು ಮಹಾರಾಜನ ಎಡಭಾಗದ ದೇಹವನ್ನೇ ಬೀಳಿಸಿಬಿಟ್ಟಿತು. ಆದರೂ ಮಹಾರಾಜನ ದರ್ಪವು ಯಾವ ಭಾಗದಲ್ಲೂ ಕುಂದಲಿಲ್ಲ! ಮುಂದಾದರೂ ಮಹಾರಾಜನು ಜಾಗ್ರತನಾಗಲಿಲ್ಲ ಮದ್ಯಪಾನಾದಿಗಳು ಕಡಮೆಯಾಗಲೇ ಇಲ್ಲ ೧೮೩೮ರಲ್ಲಿ ಪಾರ್ಶ್ವವಾಯು ವ್ಯಾಧಿಯು ಮತ್ತೊಂದುಸಾರಿ ಸಂಭವಿಸಿತು ತರುವಾಯ ರಾಜನು ಒಂದುವರ್ಷಕಾಲಮಾತ್ರ ಜೀವಿಸಿದ್ದನು ಆ ವರ್ಷಕಾಲವೂ ಬಹು ದುರ್ಬಲನಾಗಿ, ಹತಜೀವಿಯಾಗಿ ಹಾಸಿಗೆ ಹಿಡಿದೇ ಬಿದ್ದಿದ್ದನು.

೧೮೩೯ನೆಯ ಸಂವತ್ಸರದಲ್ಲಿ ಮಹಾರಾಜನಿಗೆ ೫೯ನೆಯ ವಯಸ್ಸು ಪ್ರಾಪ್ತವಾಗುತ್ತಿರಲು ಕೊನೆಗಾಲವು ಸಮೀಪಿಸಿದಂತೆ ತೋರಿತು ಮಹಾರಾಜನು ತನ್ನ ಹಾಸಿಗೆಯ ಸಮೀಪಕ್ಕೆ ತನ್ನ ಮಗ ಖರಕ್‌ಸಿಂಗನನ್ನು ಕರೆಸಿ ಅವನನ್ನೇ ತನ್ನ ತರುವಾಯ ಗದ್ದಿಗೆಗೆ ಏರತಕ್ಕವನೆಂದೂ ತನ್ನ ಪ್ರೀತಿಗೆ ಪಾತ್ರನಾದ ಧಯಾನ್‌ಸಿಂಗನು ಮಂತ್ರಿಯಾಗಿರಬೇಕೆಂದೂ ನಿರ್ಧರಿಸಿದನು ತರುವಾಯ ತನ್ನ ಕೊನಗಾಲವನ್ನು ಅರಿತವನಾಗಿ ಸಿಕ್ ಮತಸ್ಥಾಪಕನಾದ ಬಾಬಾನಾನಕ್ ಸಾಧುವಿನಲ್ಲಿ ತನಗಿದ್ದ ಅತ್ಯಂತ ಗುರುಭಕ್ತಿಯನ್ನು ಪ್ರದರ್ಶಿಸುವಂತೆ ಆ ಗುರುವಿನ ಜನ್ಮಸ್ಥಾನವಾದ ನಾನ್‌ಖಾನಾ ಕ್ಷೇತ್ರದಲ್ಲಿ ಬಡಬಗ್ಗರಿಗಾಗಿ ೨೫ ಲಕ್ಷ ದ್ರವ್ಯವನ್ನು ದಾನ ಕೊಡಬೇಕೆಂದು ಆಜ್ಞಾಪಿಸಿದನು ತರುವಾಯ ಶಾಂತಮನಸ್ಕತೆಯಿಂದ ೧೮೩೯ನೆಯ ಸಂವತ್ಸರದ ಜೂನ್ ೨೭ನೆಯ ದಿನ ದೀರ್ಘನಿಶ್ವಾಸ ಬಿಟ್ಟು ಪರಲೋಕಯಾತ್ರೆಮಾಡಿದನು



## ಉಪಸಂಹಾರ.

ಕೇವಲ ಯುದ್ಧಜೀವಿಯಾದ ರಾಜಾ ರಣಜಿತ್‌ಸಿಂಗನ ಈ ಜೀವಿತ ಚಿತ್ರವು, ಯುದ್ಧವಿಚಾರದ ರಕ್ತಕಲೆಗಳಿಂದಲಲ್ಲದೆ ಮತ್ತೇತರಿಂದ ಲಿಖಿತವಾದೀತು! ಆತನ ಆದ್ಯಂತ ಜೀವಿತವೂ, ಈವರೆಗೆ ಕಂಡಂತೆ, ಸೈನ್ಯವನ್ನು ಶೇಖರಿಸುವಿಕೆ, ಕುದುರೆಗಳನ್ನು ತಯಾರಿಸುವಿಕೆ, ಫಿರಂಗಿ ಮದ್ದುಗುಂಡುಗ

ಳನ್ನು ಸಂಪಾದಿಸುವಿಕೆ, ಅವುಗಳ ಶೇಖರ-ಸಂರಕ್ಷಣಗಳಿಗಾಗಿ ದ್ರವ್ಯ-ಅದರ ಸಂಪಾದನೆಗಾಗಿ ಆತುರಗೊಳ್ಳುವಿಕೆ, ಅದಕ್ಕಾಗಿ ಪರರಮೇಲೆ ಧಾಳಿ ಮಾಡು ವಿಕ, ಯುದ್ಧ-ಕೊಳ್ಳೆ-ಕೊಲೆ ಸುಲಿಗೆಗಳು ಮುಂತಾದವುಗಳಲ್ಲೇ ಪರ್ಯವಸಾನವಾಯಿತು. ಆದರೂ ಆತನು ಕ್ರೂರಿಯಲ್ಲ, ಶೂರನು ಯುದ್ಧದಲ್ಲಿ ಶತ್ರುಗಳನ್ನು ಜಯಿಸಿ, ಜಿತರಾದ ಅವರನ್ನು ಅವಮಾನಗೊಳಿಸಿ ಕೊಲ್ಲುತ್ತಿರಲಿಲ್ಲ. ಅವರಿಗೆ ತನ್ನ ಸೈನ್ಯದಲ್ಲಾಗಲೀ, ಅಂಗರಕ್ಷಕ ಶಾಖೆಯಲ್ಲಾಗಲೀ, ಅಥವಾ ರಾಜ್ಯದ ಇತರ ಭಾಗಗಳಲ್ಲಿಯಾಗಲಿ ಅಧಿಕಾರಗಳನ್ನು ಕೊಟ್ಟು ಆದರಿಸುತ್ತಿದ್ದನು. ತಂದೆ ಸಾಯುವ ಕಾಲದಲ್ಲಿ ಅತ್ಯಲ್ಪವಾಗಿದ್ದ ತನ್ನ ಸೈನ್ಯವನ್ನು ಅತಿಶಯ ಅಭಿವೃದ್ಧಿಗೊಳಿಸಿದನು ಆತನ ಕೊನೆಗಾಲದಲ್ಲಿ, ಸೈನ್ಯದಲ್ಲಿ ರೆಗ್ಯುಲರ್ ಇನ್‌ಫೆಂಟ್ರಿ (ಪದಾತಿಸೈನ್ಯ) ೫೪,೭೫೬ ರೆಗ್ಯುಲರ್ ಕೇವಲ್ರಿ (ತಯಾರಾದ ರಾವುತರ ಸೈನ್ಯ) ೬,೭೩೫ ಇರ್‍ರೆಗ್ಯುಲರ್ ಕೇವಲ್ರಿ (ತಯಾರಾಗದ ರಾವುತರ ಸೈನ್ಯ) ೧೬,೨೯೨ ಆರ್ಟಿಲರಿ (ಫಿರಂಗಿಗಳವರ ಸೈನ್ಯ) ೧೦,೯೭೮, ಕ್ಯಾಮುಲ್ ಷಿವಲ್ಸ್ (ಒಂಟೆಯ ಸವಾರರು) ೫೮೪, ಇತರ ೮೨೭, ಇಷ್ಟುಮಟ್ಟಿಗಿದ್ದುವು. ತನ್ನ ಸೈನ್ಯವನ್ನು ಪೂರ್ವದ ದೇಶೀಯ ಯುದ್ಧಪದ್ಧತಿಗಳಲ್ಲಿ ಮಾತ್ರವಲ್ಲದೆ, ಫ್ರೆಂಚ್ ಮತ್ತು ಇಂಗ್ಲೀಷ್ ದಳಪತಿಗಳನ್ನು ತಂದಿಟ್ಟು, ಪಾಶ್ಚಾತ್ಯರೀತಿಯ ಯುದ್ಧವಿದ್ಯೆಯಲ್ಲಿಯೂ ಶಿಕ್ಷಣೆಯನ್ನಿತ್ತನು. ಯುದ್ಧವೇ ಜೀವಿತವಾಗಿ ಅಂತಹ ತನ್ನ ಜೀವಿತಕ್ಕೆ ಸೈನ್ಯ-ಸೈನಿಕರೇ ಪ್ರಾಣವಾದುದರಿಂದ, ಅವರ ರಕ್ಷಣೆ-ಅವರ ತೃಪ್ತಿಯೇ ಪರಮಸಾಧನವಲ್ಲವೆ? ಆದುದರಿಂದ ಉಪಾಯಜ್ಞನಾದ ರಣಜಿತನು ಅವರ ಸಂತೋಷಕ್ಕಾಗಿಯೇ ಆಗಾಗ್ಗೆ ಅನೇಕ ಉತ್ಸವ-ವೈಭವಗಳನ್ನು ನಡೆಯಿಸುತ್ತಿದ್ದನು. ಅವರಿಗೆ ಅನೇಕ ಬಹುಮಾನಗಳನ್ನು ಕೊಟ್ಟು ಆದರಿಸುತ್ತಿದ್ದನು. ಸಿಕ್ ಸೈನಿಕರನ್ನು ತನ್ನ ಪ್ರಾಣವೋ ಎಂಬಂತೆ ಅಭಿಮಾನವಿಟ್ಟು ರಕ್ಷಿಸುತ್ತಿದ್ದನು ಅವರಿಗೆ ವೇತನವನ್ನಾದರೂ ಕೈಹಿಡಿಯದೆ ಬಹು ಧಾರಾಳವಾಗಿ ಕೊಡುತ್ತಿದ್ದನು. ದಳಪತಿಗಳಿಗೆ ೫-೧೦ ಸಾವಿರ ರೂಪಾಯಿಗಳನ್ನು ಕೊಡುತ್ತಿದ್ದನೆಂದು ಕೇಳಿಕೆಯುಂಟು. ಹೀಗೆಂದು ಆತನು ಸಾಧುಗಳನ್ನೂ, ದೇವಸ್ಥಾನ-ಧರ್ಮಸ್ಥಳಗಳನ್ನೂ ದುರ್ಲಕ್ಷಿಸಿದನೆಂದು ಅರ್ಥವಲ್ಲ! ಶತ್ರುಗಳನ್ನು ಮರ್ದಿಸಿ ದ್ರವ್ಯವನ್ನು ಹೇಗೆ ಗಳಿಸುತ್ತಿದ್ದನೋ, ಹಾಗೆಯೇ ಉದಾರತೆಯಿಂದ ದಾನಮಾಡುತ್ತಲೂ ಇದ್ದನು ನಾನ್‌ಖಾನಾ ಸಾಧುಗಳಿಗೆಂದು ಮರಣಕಾಲದಲ್ಲಿ ಕೊಟ್ಟ ೨೫ ಲಕ್ಷ ದ್ರವ್ಯವಲ್ಲದೆ, ಅಮೃತಸರ್ ಮುಂತಾದ ಸ್ಥಳಗಳಲ್ಲಿದ್ದ ಸಿಕ್ಕರ ಪೂಜ್ಯಸ್ಥಳಗಳಿಗೂ, ಅಲ್ಲದೆ ಹಿಂದೂ ದೇವಾಲಯಗಳಿಗೂ ಬ್ರಾಹ್ಮಣರಿಗೂ ಸುಮಾರು ಎರಡುಕೋಟಿ ದ್ರವ್ಯವನ್ನು ದಾನಮಾಡಿದನಂತೆ ಅವನ ಬುದ್ಧಿಯು ಪಾರತ್ರಿಕ ತಾತ್ವಿಕ ವಿಚಾರಗಳಲ್ಲಿ ನಿರತವಾದುದಲ್ಲವಾದುದರಿಂದ, ಐಹಿಕವಾಗಿ ಆತನು ದ್ರವ್ಯ, ಮುತ್ತು ರತ್ನಗಳು, ವಜ್ರವೈಢೂರ್ಯ

ಗೋಮೇಧಿಕ ಪುಷ್ಯರಾಗಾದಿಗಳು ಮುಂತಾದುವುಗಳನ್ನು ಅಪಾರವಾಗಿ ಸಂಪಾದಿಸಿದನೆಂಬುದನ್ನು ಮಾತ್ರವೇ ಉದಾಹರಿಸಿ ಆತನ ಅತಿಶಯವನ್ನು ಹೊಗಳಬೇಕಾಗಿದೆ. ನಮ್ಮ ಕರ್ಣಾಟಕದಲ್ಲಿ ಎಂದರೆ, ಹಂಪೆಯಲ್ಲಿ ದೊರೆತು ಪ್ರಪಂಚದಲ್ಲೇ ಅಮೌಲ್ಯವಾದುದೆನ್ನಿಸಿಕೊಂಡು, ಈಗ ಬ್ರಿಟಿಷ್ ಪ್ರಭುಗಳ ಕಿರೀಟದಲ್ಲಿ ಮುಖ್ಯಮಣಿಯಾಗಿ ವಿರಾಜಿಸುತ್ತಿರುವ ಕೋಹಿನೂರ್ ವಜ್ರವು ರಣಜಿತ್‌ಸಿಂಗನಲ್ಲಿದ್ದುದು ಅಲ್ಲದೆ ಆತನಲ್ಲಿ ೧೪ ತೊಲೆಗಳು ತೂಗುತ್ತಿದ್ದ ಒಂದು ದೊಡ್ಡ ಕೆಂಪು ಇದ್ದಿತಂತೆ! ಅಷ್ಟು ಐಶ್ವರ್ಯದಿಂದ ಅನೇಕ ಭಾಗವನ್ನು ಆತನು ಮರಣಕಾಲದಲ್ಲಿ ಮುಕ್ತಹಸ್ತನಾಗಿ ದಾನಮಾಡಿದನು.

ಮಹಾರಾಜಾ ರಣಜಿತ್‌ಸಿಂಗನ ತರುವಾಯ ಆತನ ವಜ್ರಮುಷ್ಟಿಯಲ್ಲಡಗಿದ್ದ ಸಿಕ್ ಸೈನ್ಯವೂ, ಪಂಜಾಬು ರಾಜ್ಯವೂ ಗಂಟುಬಿಚ್ಚಿದ ನೆಲ್ಲಿಕಾಯಿಯ ಮೂಟೆಯಂತಾಯಿತು. ಸಿಕ್ಕರು ಕೇವಲ ಶೂರರಾಗಿದ್ದರು ಮಾತ್ರ, ಆದರ ವಿಚಕ್ಷಣ ಮತಿಗಳಲ್ಲ! ಆದುದರಿಂದ ಅವರು ತಮ್ಮ ತಮ್ಮಲ್ಲೇ ಬಡಿದಾಡಿಕೊಂಡು ಆತನ ತರುವಾಯ ಇಂಗ್ಲೀಷರ ಪ್ರಬಲದಳವನ್ನು ಎದುರಿಸಿ ಒಂದೆರಡು ಯುದ್ಧಗಳಲ್ಲೇ ಛಿನ್ನಾಭಿನ್ನವಾಗಿ ಚದುರಿಸಲ್ಪಟ್ಟು-ಶತ್ರುಗಳಿಗೆ ಆಯುಧಗಳನೊಪ್ಪಿಸಿ ಕೈಕಟ್ಟಿಕೊಂಡು ನಿಲ್ಲುವ ಸ್ಥಿತಿಗೆ ಬಂದು, ಪರಾಧೀನತೆಯನ್ನು ಹೊಂದಿದರು. ಆದರೂ ಇಂದು ಬ್ರಿಟಿಷ್ ಸೈನ್ಯದಲ್ಲಿ ಶೂರಸಂಗಡವೆಂದು ಹೆಸರುವಾಸಿಯಾಗಿರುವವರು ನಮ್ಮ "ಪಂಜಾಬಿನ ಸಿಂಹ"ದ ಅನುಯಾಯಿಗಳಾದ ಈ ಸಿಕ್ ಸರದಾರರೇ!

ಯಾವ ರಾಜಾ ರಣಜಿತ್‌ಸಿಂಗನು, ಮಹಾಪ್ರತಾಪಿಯಾಗಿ, ಶೂರನಾಗಿ ಧೀರನಾಗಿ, ಏಕಮತ್ಯಪ್ರಭುತ್ವದಿಂದ ಅಜೇಯರೆನಿಸಿಕೊಂಡ ಆಂಗ್ಲೇಯ ರಾಜ್ಯಾಂಗದವರಿಗೆ ಐಶ್ವರ್ಯಪದವಿ ಶೌರ್ಯಪ್ರತಾಪಾದಿಗಳಲ್ಲಿ ಸಮಾನನಾಗಿ, ನಾಲ್ವತ್ತು ವರ್ಷಕಾಲ ರಾಜ್ಯಭಾರಮಾಡಿ ಖಂಡಾಂತರಗಳಲ್ಲೂ ತನ್ನ ಕೀರ್ತಿ ಪ್ರತಿಷ್ಠೆಗಳನ್ನು ಹರಹಿಸಿದನೋ, ಅಂತಹ ಶಕ್ತಿ ಸಾಮರ್ಥ್ಯಶೌರ್ಯ ಧೈರ್ಯಾದಿಗಳೂ ದಾರ್ಢ್ಯವೂ ನಮ್ಮ ರಾಜರಿಗೂ ಲಭ್ಯವಾಗಲಿ! ತರಗೆಲೆಗಳು ಅದುರಿದರೆ ಬೆದರಿಬೀಳುವಂತಹ ಹೇಡಿಜೀವಿತವು ನಾಶವಾಗಿ, ನಮ್ಮವರು ಇಂತಹ ರಣಧೀರರ ಆದರ್ಶದಿಂದ, ಹಿಮವದ್ಗಿರಿಯನ್ನಾದರೂ ಎದುರಿಸುವಂತಹ ವಜ್ರಹೃದಯರಾಗಲಿ! ಇಂತಹ ವೀರಾಗ್ರಣಿಗಳ ಜೀವಿತಗಳು ಕಣ್ಣೆದುರಿಗಿರಲು ನಮ್ಮವರು, ತಾವು ಶಕ್ತಿಹೀನರು-ನರಕುರಿಗಳು ಎಂಬ ಭಾವನೆಯನ್ನು ದೂರಮಾಡಿ ನರವೀರರೆನ್ನಿಸಲಿ; ಸಿಂಹ ಶಾಬಗಳೆನ್ನಿಸಲಿ, ಪ್ರತಾಪನಿಧಿಗಳೆನ್ನಿಸಲಿ! ಸರ್ವೇಶ್ವರನು ಅಂತಹ ಸ್ಥಿತಿಯನ್ನು ಕರ್ಣಾಟಕರಿಗೆ-ಭಾರತೀಯರಿಗೆ, ದಯೆಗೈದು ಅನುಗ್ರಹಿಸಿ ರಕ್ಷಿಸಲಿ.

ತಥಾಸ್ತು.



—॰ ಶ್ರೀರಾಮಸಹಾಯಂ ॰—

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

---

**ಮುನ್ನುಡಿ:—**

ಅದ್ವೈತಸಿದ್ಧಾಂತವನ್ನು ಪ್ರತಿಪಾದಿಸಿ ಶ್ರೀಶಂಕರಾಚಾರ್ಯರು ಹೇಗೆ ಅಖಂಡ ಕೀರ್ತಿಯನ್ನು ಗಳಿಸಿದರೋ, ವಿಶಿಷ್ಟಾದ್ವೈತಸಿದ್ಧಾಂತವನ್ನು ಸ್ಥಾಪಿಸಿ ಶ್ರೀರಾಮಾನುಜಾಚಾರ್ಯರು ಹೇಗೆ ಜಗತ್ಪ್ರಸಿದ್ಧರೆನ್ನಿಸಿದರೋ, ಹಾಗೆಯೇ ದ್ವೈತಮತಸಿದ್ಧಾಂತವನ್ನು ಸ್ಥಾಪಿಸಿ ಶ್ರೀಮನ್ಮಧ್ವಾಚಾರ್ಯರಾದರೂ ಅಜರಾಮರವಾದ ಕೀರ್ತಿಯನ್ನು ಸಂಪಾದಿಸಿದರು. ಯೋಚಿಸುವುದಾದರೆ ಲೋಕದಲ್ಲಿನ ಸಮಸ್ತ (ಮತ) ಧರ್ಮಗಳ ಮುಖ್ಯಾಭಿಪ್ರಾಯಗಳೂ, ಈ ಮೂರು ತತ್ವಸಿದ್ಧಾಂತಗಳ ಮೇರೆಯನ್ನು ಮೀರಿ ಹೋಗಲಾರವೆನ್ನಬಹುದು. ಜೀವ ಮತ್ತು ಈಶ್ವರರ ಐಕ್ಯಭಾವ-ಭಿನ್ನಭಾವಗಳ ವಿಷಯದಲ್ಲೂ, ಪ್ರಕೃತಿ-ಪುರುಷರ ಕರ್ತೃತ್ವ ವಿವೇಚನೆಯ ವಿಷಯದಲ್ಲೂ ಪ್ರಪಂಚದ ವಿವಿಧ ಕಾಲ-ದೇಶಗಳ ತತ್ವಶಾಸ್ತ್ರಜ್ಞರು ಮಾಡಿರುವ ವಿಚಾರಗಳಾದರೂ, ಈ ಮೂರು ತತ್ವಗಳ ಸರಹದ್ದನ್ನು ದಾಟಿ ಹೋಗಲಾರವು. ಕೆಲವು ಮತಗಳು ಜ್ಞಾನವೇ ಮುಖ್ಯವೆಂದು ಹೇಳುವುವು, ಮತ್ತೆ ಕೆಲವು ಭಕ್ತಿಯ ಶ್ರೇಷ್ಠತೆಯನ್ನು ಸಾರುವುವು, ಬೇರೆ ಕೆಲವು ಕರ್ಮದ ಅವಶ್ಯಕತೆಯನ್ನು ಪ್ರತಿಪಾದಿಸುವುವು, ಇನ್ನು ಕೆಲವು ಈ ಮೂರರಲ್ಲಿ ಒಂದೆರಡರ ಸಮ್ಮಿಶ್ರಣದಿಂದ ಕೂಡಿರುವುವು. ಎಂತೂ ಸೂಕ್ಷ್ಮರೀತಿಯಿಂದ ನೋಡುವುದಾದರೆ, ಬಾಹ್ಯಕ್ಕೆ-ನಾಮರೂಪಕ್ರಿಯಾ ಕಲಾಪಗಳಲ್ಲಿ ಎಷ್ಟು ವ್ಯತ್ಯಾಸವಿರುವಂತೆ ತೋರಬಹುದಾದರೂ, ಪೃಥ್ವಿಯ ಯಾವ ಮತವಾದರೂ, ಅಲಂಘ್ಯವಾದ ಪ್ರಕೃತಿ ತತ್ವಗಳೋ ಎಂಬಂತಿರುವ ಈ ತ್ರಿಮತಸಿದ್ಧಾಂತಗಳಲ್ಲಿ ಯಾವುದಾದರೊಂದನ್ನು ಬಿಟ್ಟು ಮುಂದಕ್ಕೆ ಹೋಗುವಂತಿಲ್ಲ. ಇಂತಹ ಅದ್ವಿತೀಯ ತತ್ವಸಿದ್ಧಾಂತ ರತ್ನಗಳನ್ನು ಪ್ರಪಂಚಕ್ಕೆ ಒದಗಿಸಿಕೊಡುವ ಮಹತ್ಸೌಭಾಗ್ಯವು, ಅನಾದಿಕಾಲದಿಂದಲೂ ನಮ್ಮ ಮಾತೃಭೂಮಿಯಾದ ಈ ಭಾರತದೇಶಕ್ಕೆ

ಪ್ರಾಪ್ತನಾಗುತ್ತಿರುವುದೇ ಅವರ ಸ್ವಾಭಾವಿಕ ಜೀವನತತ್ವವೇನೆಂಬುದನ್ನು ನಿರ್ಧರಿಸಲು ಸಾಕಾದ ಕಾರಣವಾಗಿದೆ ಅದೊಂದೇ, ಭಾರತೀಯರು ಜಗತ್ತಿನಲ್ಲಿ ಗೌರವನೀಯರಾಗಿ ಬಾಳಲು, ಸಾಕಾದ ಆಧಾರವಾಗಿದೆ ಆದರಲ್ಲೂ ಅಮೌಲ್ಯ ತತ್ವಸಿದ್ಧಾಂತ ಪ್ರತಿಪಾದಕರಾದ ಇಂತಹ ಜಗತ್ಪ್ರಸಿದ್ಧ ವ್ಯಕ್ತಿಗಳು ಮೂವರ ಜನನಸ್ಥಾನವೂ ಕಾರ್ಯಕ್ಷೇತ್ರವೂ ಆಗಿ ಕಳೆಗೊಂಡ ನಮ್ಮ ಈ ಕರ್ಣಾಟಕ ದೇಶದ ಲಭ್ಯವಾದರೂ ಸಾಮಾನ್ಯವಾದುದಲ್ಲ! ಕನ್ನಡಿಗರು, ತಮ್ಮ ನಾಡಿನಲ್ಲಿದ್ದ ತಮ್ಮ ಪೂರ್ವಜರು, ಆಸೇತು ಹಿಮಾಚಲವಾಗಿ ಅನೇಕ ಸಾರಿ ಸಂಚರಿಸಿ, ಧಾರ್ಮಿಕ ದಿಗ್ವಿಜಯಮಾಡಿ, ಧರ್ಮಸಾಮ್ರಾಜ್ಯ ಚಕ್ರವರ್ತಿಗಳಾಗಿದ್ದರೆಂದು ಹೆಮ್ಮೆಗೊಂಡು ಕಾರ್ಯತತ್ಪರರಾಗಲು ಇದೇ ಸಾಕಾದ ಆಧಾರಸ್ತಂಭವಾಗಿದೆ.

ನಮ್ಮ ಪ್ರಕೃತ ಕಥಾನಾಯಕರಾದ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು (ಶ್ರೀಮನ್ಮಧ್ವಾಚಾರ್ಯರು) ಭಕ್ತಜನಕಲ್ಪತರುವಾದ ಶ್ರೀಹರಿಯೇ ಸರ್ವೋತ್ತಮದೈವವೆಂದು, ಆ ಜಗದಾದಿಕಾರಣನ ಪಾದಪದ್ಮಗಳಲ್ಲಿ ಅನನ್ಯಶ್ರದ್ಧಾಭಕ್ತಿಗಳನ್ನಿಟ್ಟುಕೊಂಡಿದ್ದ-ಮತ್ತು ಅದರಂತೆಯೇ ಬೋಧಿಸಿದ ಭಕ್ತಶಿರೋಮಣಿಗಳು! ಶ್ರೀಮದಾನಂದತೀರ್ಥಾಚಾರ್ಯರು ಅಗಾಧವಾದ ಶಾಸ್ತ್ರಮಹೋದಧಿಯನ್ನು ಕಡೆದು, ಮಹಾಗೂಢವಾದ- ಅತ್ಯಂತ ಸೂಕ್ಷ್ಮವಾದ ಜೀವಬ್ರಹ್ಮರ ನಿಶ್ಚಯಸ್ವರೂಪವನ್ನೂ, ಪಂಚಭೇದಗಳನ್ನೂ, ತಾರತಮ್ಯ ರಹಸ್ಯವನ್ನೂ ಕಂಡುಹಿಡಿದು ಪ್ರಪಂಚದಲ್ಲಿ ಮಹಾಮೇಧಾವಿಗಳೆಂದು ಹೆಸರ್ಗೊಂಡವರಲ್ಲಲ್ಲಾ ಅದ್ವಿತೀಯರೆಂದೂ-ಪೂರ್ಣಪ್ರಜ್ಞರೆಂದೂ, ಪ್ರಖ್ಯಾತರಾದ ಜ್ಞಾನಿಶಿರೋಮಣಿಗಳು. ಶ್ರೀಮದಾನಂದತೀರ್ಥರು, ಇನ್ನೂ ಆಟಪಾಟಗಳಲ್ಲಿ ನಲಿಯುತ್ತಿರಬೇಕಾದಂತಹ ಚಿಕ್ಕವಯಸ್ಸಿನಲ್ಲೇ ತಾಯಿ-ತಂದೆ, ಬಂಧು-ಬಾಂಧವರು, ಮನೆ-ಬಾಗಿಲು, ಆಸ್ತಿ-ಪಾಸ್ತಿಗಳನ್ನು ತೊರೆದು, ದೇಹಸೌಖ್ಯಕ್ಕಾಸಿಸದೆ, ಕಾಯಕಷ್ಟಕ್ಕೆ ಬೆದರದೆ,-ಸುತ್ತಲಿರುವ ಹುಲ್ಲೆಮೊಲಗಳನ್ನು ಕಣ್ಣೆತ್ತಿಯೂ ನೋಡದೆ ಒಂದೇ ನೆಗೆತಕ್ಕೆ ಕರಿಯ ಕುಂಭಸ್ಥಳಕ್ಕೇ ಹಾರುವ ಮೃಗೇಂದ್ರಕುಂಜರನಂತೆ-ಮತ್ತೇನನ್ನೂ ಅಪೇಕ್ಷಿಸದೆ ಕೇವಲ ತತ್ವಾನ್ವೇಷಣೆಯ ಮಹದುದ್ದೇಶಕ್ಕಾಗಿಯೇ-ಬ್ರಹ್ಮಚರ್ಯಾಶ್ರಮದಿಂದ ಒಂದೇ ಸಾರಿಗೆ ಸನ್ಯಾಸಾಶ್ರಮವನ್ನು ಸ್ವೀಕರಿಸಿ ಮೆರೆದ ವೈರಾಗ್ಯಶಿ

ರೋಮಣಿಗಳು! ನಮ್ಮ ಶ್ರೀಮದಾನಂದತೀರ್ಥರು ವೇದಶಾಸ್ತ್ರಪುರಾಣಾದಿ ಗಳಿಗನುಸಾರವಾಗಿ ತಾವು ಸಿದ್ಧಾಂತೀಕರಿಸಿದ ದ್ವೈತಮತ ಪ್ರತಿಪಾದನ ಗಾಗಿ-ಅದರ ಪ್ರಚಾರಕ್ಕಾಗಿ, ರಾಜಾಧಿರಾಜರನ್ನು ಆಶ್ರಯಿಸಲಿಲ್ಲ! ಅವರ ಸೈನ್ಯಸಹಾಯಗಳನ್ನು ಅಪೇಕ್ಷಿಸಲಿಲ್ಲ! ಅಸಂಖ್ಯಧನರಾಶಿಯನ್ನು ಬಯಸಲಿಲ್ಲ! ಅಥವ ಇಂದೇ ಕೋಟ್ಯಾಂತರಮಂದಿ ತಮ್ಮ ಅಭಿಪ್ರಾಯವನ್ನು ಕೈಕೊಂಡು ತಮ್ಮನ್ನು ಆಶ್ರಯಿಸಬೇಕೆಂದಾದರೂ ಆಶಿಸಲಿಲ್ಲ! ಅವರ ಜೈತ್ರಯಾತ್ರ ಯೆಂದರೆ ಪರಮಶಾಂತವಾದುದು, ಸಮಾಧಾನ ಯುಕ್ತವಾದುದು, ಅಹಿಂಸಾ ಮಯವಾದುದು. ನಿಶ್ಶಸ್ತ್ರ ಜೈತ್ರಯಾತ್ರೆಯದು!—

ತಮಗೆ ಹಿಂದೆ ಅವತರಿಸಿ ಮತಸ್ಥಾಪನ ಮಾಡಿದ ಶ್ರೀಶಂಕರಾಚಾ ರ್ಯ-ಶ್ರೀರಾಮಾನುಜಾಚಾರ್ಯರುಗಳಂತೆಯೇ ಶ್ರೀಮಧ್ವಾಚಾರ್ಯರೂ ತಮ್ಮ ದ್ವೈತಸಿದ್ಧಾಂತವನ್ನು ವೇದಶಾಸ್ತ್ರ ಪುರಾಣಗಳ ತಳಹದಿಯಮೇಲೆ ಯೇ ಸ್ಥಾಪಿಸಿದರು ತಮ್ಮ ಸಿದ್ಧಾಂತ ಪ್ರತಿಪಾದನೆಗಾಗಿ ಉಪನಿಷತ್ತು ಗಳು ಬ್ರಹ್ಮಸೂತ್ರಗಳು ಭಗವದ್ಗೀತೆಗಳೆಂಬ ಪ್ರಸ್ಥಾನತ್ರಯಕ್ಕೆ ದ್ವೈತಸಿ ದ್ಧಾಂತಾನುಸಾರವಾಗಿ ಭಾಷ್ಯಗಳನ್ನು ರಚಿಸಿ ಆಚಾರ್ಯಪೀಠವನ್ನೇರಿದರು ಅಷ್ಟು ಮಾತ್ರವಲ್ಲ, ತಮ್ಮ ಸಿದ್ಧಾಂತದ ನಿಜ್ಜಯಸ್ವರೂಪವನ್ನು ನಿಸ್ಸಂಶಯ ರೀತಿಯಿಂದ ವ್ಯಕ್ತಗೊಳಿಸಲು ಅವಿನಾಶಿಗಳಾದ ಮೂವತ್ತೇಳು ಗ್ರಂಥರತ್ನ ಗಳನ್ನು ಸೃಷ್ಟಿಮಾಡಿ ಪ್ರಪಂಚಕ್ಕೆ ದಾನಮಾಡಿ, ಪರಮೋದಾರ ಚರಿತರ ನ್ನಿಸಿದರು ಅವರು ಪ್ರತಿಪಾದಿಸಿರುವ ಯುಕ್ತಿಯುಕ್ತವಾದ ಅಭಿಪ್ರಾಯ ಗಳೂ, ಬಹು ಸೂಕ್ಷ್ಮತರಗಳಾದ ತತ್ವರಹಸ್ಯಗಳನ್ನೂ ಭೇದಿಸಿ ಕಂಡು ಹಿಡಿದಿರುವ ಅಪೌಲ್ಯ ಸಿದ್ಧಾಂತಗಳೂ, ಆ ದೇವವಾಣಿಯನ್ನು ತಡಬಡೆಯಿ ಲ್ಲದೆ ಗಂಗಾಪ್ರವಾಹದಂತೆ ಉಪಯೋಗಿಸಿ ರಚಿಸಿರುವ ಶ್ರೀಹರಿಯ ಸ್ತುತಿ ಪರಸ್ತೋತ್ರಪಾಠಗಳೂ, ಅವರ ವಿದ್ವತ್ತೆ, ಪ್ರಜ್ಞಾಸೂಕ್ಷ್ಮತೆಗಳನ್ನು ತೋರಿಸಲು ಸಾಕಾದ ಸಾಕ್ಷ್ಯಗಳಾಗಿವೆ—ಅಲ್ಲದೆ ಶ್ರೀಮದಾಚಾರ್ಯರು. ಪಾದಚಾರಿಗಳಾಗಿಯೇ ಭಾರತದೇಶದ ಎಲ್ಲಾ ಪ್ರದೇಶಗಳಲ್ಲೂ ಸಂಚರಿಸಿ, ಅತಿಶೀತಳಸ್ಥಳವಾದ ಹಿಮವದ್ಗಿರಿ ಪ್ರಾಂತದಲ್ಲೂ ವಾಸಿಸಿ, ಮತ್ತು ದೇಹಬಲ ಪ್ರದರ್ಶಕಗಳಾದ ಇನ್ನೂ ಅನೇಕ ಕಾರ್ಯಗಳನ್ನು ನಡಯಿಸಿ, ತ ಮ್ಮ ಬ್ರಹ್ಮಚರ್ಯ ರಕ್ಷಣೆಯ-ದೇಹದಾರ್ಢ್ಯದ ಮಹತ್ವಗಳನ್ನು ಪ್ರಕಾ

ಕಗೊಳಿಸಿರುವರು  ದೇಹವೆಂಬ ಪವಿತ್ರ ದೇವಾಲಯದಲ್ಲಿ  ವಾಸಿಸಿದ್ದ ಪರಮ ಪುರುಷನಾದ ಶ್ರೀಹರಿಯ ದಿವ್ಯಮಹಿಮೆಯನ್ನು ತಿಳಿದ ಮಹಾಪುರುಷರವರು. ಅವರ ಜೀವಿತಚರಿತ್ರವಿದು  ಇಂತಹ ಧರ್ಮೋದ್ಧಾರಕರ-ದೇಶೋದ್ಧಾರಕರ ಚರಿತ್ರೆಗಳನ್ನು ಓದಿಯೇ ನಮ್ಮ ಭಾರತೀಯ ಬಾಲಕರೂ-ತರುಣರೂ ಮುಖ್ಯವಾಗಿ ನಮ್ಮ ಕರ್ನಾಟಕರೂ ನರಕೇಸರಿಗಳಾಗಬೇಕು,  ವೀರವರರೆನಿಸಬೇಕು! ಆದುದರಿಂದ ಅಂತಹ ಜೀವಿತಗಳನ್ನು  ಕರ್ನಾಟಕ ಜನಾಂಗಕ್ಕೆ ಒದಗಿಸಲು ಶಕ್ತ್ಯನುಸಾರ  ಹಣಗುತ್ತಿರುವ ಈ ಗ್ರಂಥಮಾಲೆಗೆ ಕರ್ನಾಟಕ ಬಾಂಧವರು ಸ್ವಹಸ್ತಪರಹಸ್ತಗಳಿಂದ ಯೋಗ್ಯಸಹಾಯವನ್ನೊದಗಿಸಿ, ಅದರ ಸೇವಾಕಾರ್ಯವು ಸಾರ್ಥಕಗೊಳ್ಳುವಂತೆ ಮಾಡಬೇಕಾಗಿ ಪ್ರಾರ್ಥಿಸುತ್ತೇವೆ —

ಬೆಂಗಳೂರು ಸಿಟಿ.<br>
೩೦—೯—೧೯೨೬

ಇತಿ ಸುಜನ ವಿಧೇಯ,<br>
**ಯಂ ರಾಮರಾವ್.**



**ಶ್ಲೋಕ:** — ಪ್ರಥಮೋಹನುಮನ್ನಾಮ । ದ್ವಿತೀಯೋ ಭೀಮ ಏವ ಚ ॥<br>
ಪೂರ್ಣಪ್ರಜ್ಞಸ್ತೃತೀಯಸ್ತು । ಭಗವತ್ಕಾರ್ಯಸಾಧಕಃ ॥



**ವೃತ್ತ:** — ನಮಸ್ತೇ ಪ್ರಾಣೇಶ ಪ್ರಣತವಿಭವಾಃ ಯಾವನಿಮಗಾಃ ।<br>
ನಮಸ್ಸ್ವಾಮಿನ್ ರಾಮಪ್ರಿಯತಮ ಹನೂಮನ್ ಗುರುಗುಣ<br>
ನಮಸ್ತುಭ್ಯಂ ಭೀಮ ಪ್ರಬಲತಮ ಕೃಷ್ಣೇಷ್ಟಭಗವನ್ ।<br>
ನಮಶ್ಶ್ರೀಮನ್ಮಧ್ವ ಪ್ರದಿಶಸುದೃಶನ್ನೋ ಜಯಜಯ ॥



**ಶ್ಲೋಕ:** — ಏಕವಿಂಶತಿ ಕುಭಾಷ್ಯದೂಷಕಂ ।<br>
ಬ್ರಹ್ಮಸೂತ್ರಗಣ ಭಾಷ್ಯಮುದ್ಭುತಂ ॥<br>
ಅಪ್ಯದೂಷ್ಯಮತ ನೋದನಂತಧೀ ।<br>
ಭೂರ್ತಭಾವಿಭವ ದಾತ್ಮಭಿಃಕ್ವಚಿತ್ ॥



ಸುಬೋಧ ಕುಸುಮಾಂಜಲಿ ಗ್ರಂಥಮಾಲಾ



ದ್ವೈತಮತಸ್ಥಾಪಕರಾದ ಶ್ರೀ ಮಧ್ವಾಚಾರ್ಯರು

ಶ್ರೀರಾಮಸಹಾಯಂ

ದ್ವೈತಮತಸ್ಥಾಪಕರಾದ

ಶ್ರೀ

# ಮಧ್ವಾಚಾರ್ಯರು



ಅಧ್ಯಾಯ ೧ "ಮಧ್ಯಗೇಹಭಟ್ಟರು"

ಪವಿತ್ರತಮವಾದ-ನಮ್ಮ ಮಾತೃಭೂಮಿಯಾದ ಈ ಭಾರತದೇಶವು ಸರ್ವೇಶ್ವರನ ಕೃಪಾಕಟಾಕ್ಷಕ್ಕೆ--ಪೃಥ್ವಿಯ ಇತರ ದೇಶಗಳಿಗಿಂತಲೂ ಹೆಚ್ಚಾಗಿ ಪಾತ್ರವಾಗಿದೆ-ಎಂಬ ಮಾತು ಕೇವಲ ಅಲಂಕಾರಿಕವಲ್ಲ! ಏಕೆಂದರೆ, ಆ ಭಗವಾನನಿಂದ ನಿಯಮಿಸಲ್ಪಟ್ಟ ಆಜ್ಞೆಗಳನ್ನು ಅಕ್ಷರಶಃ ತಾವು ಪಾಲಿಸಿ, ಅವುಗಳನ್ನು ಜನಸಾಮಾನ್ಯವು ಅನುಸರಿಸಲು ತಕ್ಕಂತೆ ಸಿದ್ಧಗೊಳಿಸಿ-ಬೋಧಿಸಿ, ಲೋಕಕ್ಕೆ ತರಣೋಪಾಯವನ್ನು ತೋರಿಸಿಕೊಟ್ಟು ಮಹೋಪಕಾರ ಮಾಡುತ್ತಿರುವ ಅನೇಕ ಮಂದಿ ಮಹಾತ್ಮರಿಗೆ ಜನ್ಮ ಕೊಡುವ ಲಭವನ್ನು ಮೇಲೆ ಮೇಲೆ ಈ ದೇಶವೇ ಹೊಂದುತ್ತಿರುವುದು ಮನುಷ್ಯನಾಗಿ ಜನ್ಮವೆತ್ತಿದವನು, ಲೌಕಿಕ ಭೋಗ ಭಾಗ್ಯಗಳನ್ನೂ, ಐಶ್ವರ್ಯ ಪದವಿಗಳನ್ನೂ, ವೃತ್ತಿಪಶುಕ್ಷೇತ್ರಗಳನ್ನೂ ಎಷ್ಟು ಅಧಿಕ ಪ್ರಮಾಣದಿಂದ ಗಳಿಸಿದರೂ ಆ ಎಲ್ಲವನ್ನೂ ಇಲ್ಲೇ ಬಿಟ್ಟು ಒಂದು ದಿನ ಹೊರಡದಿದ್ದರೆ ತೀರದು ಹಾಗೆ ಹೋಗತಕ್ಕ ಜೀವನು ಹೊಂದಬಹುದಾದ ಸದ್ಗತಿ ಅಥವ ದುರ್ಗತಿಗಳು ಅವನ ಆತ್ಮಿಕೋನ್ನತಿ ಮಾನಸಿಕ ಬೆಳೆವಣಿಗೆಗಳನ್ನು ಆಧರಿಸುವುವು. ವಿವೇಕ ವಿಜ್ಞಾನಾದಿಗಳನ್ನು

ಗಳಿಸಿ ಸಕಲ ಪ್ರಾಣಿವರ್ಗಗಳಲ್ಲಿ ಶ್ರೇಷ್ಠನೆನಿಸಿಕೊಂಡ ಮಾನವನೂ ಇಂತಹ ಜನ್ಮ ಸಾರ್ಥಕ್ಯದ ಮಾರ್ಗವೇನೆಂದು ಹುಡುಕಿಕೊಂಡು ಅದನ್ನು ಅನುಸರಿಸಿ ನಡೆಯದಿದ್ದರೆ, ಇನ್ನು ಅಜ್ಞಾನಿಗಳಾದ ಪಶುಪಕ್ಷಿ ಮೃಗ ಕ್ರಿಮಿಕೀಟಾದಿಗಳು ಮುಕ್ತವಾಗಲು ಸಾಧ್ಯವಿರುವುದೇ ?—

ಶ್ರೀಮದ್ಭಗವದ್ಗೀತಾ ಪ್ರವಚಕನಾದ ಶ್ರೀಕೃಷ್ಣಪರಮಾತ್ಮನು ಅರ್ಜುನನನ್ನುದ್ದೇಶಿಸಿ ನುಡಿದಿರುವ ಅಮೃತಮಯ ವಾಕ್ಯಗಳಲ್ಲಿ ಮನುಷ್ಯಜನ್ಮಸಾರ್ಥಕ್ಯಕ್ಕೆ ಸಾಧಕಗಳಾದ ಅನೇಕ ಮಾರ್ಗಗಳು ಉಕ್ತವಾಗಿವೆ ಅವುಗಳನ್ನು ಶ್ರೀಕೃಷ್ಣಮೂರ್ತಿಯು ವಿಶದವಾಗಿ ಬೋಧಿಸಿದ್ದಾನೆ *"ಅರ್ಜುನಾ ನನ್ನಲ್ಲಿ ಮನಸ್ಸನ್ನಿರಿಸು, ಜ್ಞಾನವನ್ನೂ ನನ್ನಲ್ಲಿಯೇ ಇರಿಸು, ಎಂದರೆ ನೀನು ನನ್ನಲ್ಲೇ ವಾಸ ಮಾಡುವವನಾಗುವಿ. ಹಾಗೆ ನನ್ನಲ್ಲಿಯೇ ಚಿತ್ತವನ್ನಿಡಲು ನೀನು ಅಶಕ್ತನಾದರೆ ಅಭ್ಯಾಸಬಲದಿಂದ ನನ್ನನ್ನು ಹೊಂದಲು ಯತ್ನಮಾಡು. ಹಾಗೆ, ಅಭ್ಯಾಸಯೋಗಮಾಡಲೂ ನೀನು ಅಸಮರ್ಥನಾದರೆ ನನಗೆ ಪ್ರೀತಿಕರಗಳಾದ ಕರ್ಮಗಳನ್ನು ಮಾಡು ಹೀಗೆ ಫಲಾಪೇಕ್ಷಾ ರಹಿತನಾಗಿ ಮಾಡುವ ವಿಹಿತಕರ್ಮಗಳಿಂದ ಜ್ಞಾನಿಯಾಗಿ ಜನ್ಮ ಸಾರ್ಥಕ್ಯವನ್ನು ಹೊಂದುವಿ. ಇದರಿಂದ ಕರ್ಮ ಮಾಡುವಿಕೆಯು ಎಲ್ಲಕ್ಕಿಂತಲೂ ಕೀಳಾದುದೆಂದು ಎಣಿಸಬೇಡ. (ಹಟಯೋಗಾದಿ) ಅಭ್ಯಾಸಗಳಿಗಿಂತಲೂ ಜ್ಞಾನಶ್ರೇಷ್ಠವು, ಜ್ಞಾನಕ್ಕಿಂತಲೂ ಧ್ಯಾನಶ್ರೇಷ್ಠವು; ಧ್ಯಾನಕ್ಕಿಂತಲೂ ಫಲಗಳಲ್ಲಿ ಅಪೇಕ್ಷೆಯಿಲ್ಲದೆ ಮಾಡುವ ಕರ್ಮವು ಶ್ರೇಷ್ಠವು, ಹೀಗೆ ಮಾಡುವ ನಿಷ್ಕಾಮ ಕರ್ಮದಿಂದಲೇ ಶಾಂತಿಯುಂಟಾಗುವುದು" ಎಂದು ಅಪ್ಪಣೆ ಕೊಡಿಸಿರುತ್ತಾನೆ.

ಭಾರತದೇಶದ ಮತಸಿದ್ಧಾಂತಗಳ ಬೆಳೆವಣಿಗೆಯ ಚರಿತ್ರೆಯಲ್ಲಿ ಶ್ರೀಕೃಷ್ಣಪರಮಾತ್ಮನ ಮೇಲ್ಕಂಡ ಈ ಸಂದೇಶವು ಕಾರ್ಯಕಾರಿಯಾಗಿ ಹೇಗೆ ಕ್ರಮರೀತಿಯಿಂದ ನಡೆದುಬಂದಿದೆ ಯೆಂಬುದು ಸೂಕ್ಷ್ಮರೀತಿಯಿಂದ ವಿಚಾರಿಸಿದರೆ ಗೋಚರವಾಗುವುದು. ಭಾರತಯುದ್ಧ ಕಾಲದಲ್ಲಿ ಭಗವಾನನು ಏರ್ಪಡಿಸಿದ ಈ ಸಿದ್ಧಾಂತಗಳು ಕಾಲಾನುಸಾರ ನಷ್ಟವಾಗಿ, ಪ್ರಾಣಿಹಿಂಸೆ-ಅರ್ಥರಹಿತವಾದ ಯಜ್ಞಯಾಗಾದಿಗಳು-ಕರ್ಮಭ್ರಷ್ಟತೆ ಮುಂತಾದುವು

*ಶ್ರೀಮದ್ಭಗವದ್ಗೀತಾ. ಅಧ್ಯಾಯ. ೧೨. ಶ್ಲೋ. ೮-೧೨.

ಗಳು ಪ್ರಬಲಿಸಿದ್ದಾಗ, ಭಗವಾನ್‌ಬುದ್ಧದೇವನು ಅವುಗಳನ್ನು ನೀಗಿಸಲೋಸುಗ ಅಗಾಧ ಸ್ವಾರ್ಥತ್ಯಾಗ ಮಾಡಿ ಭೂತದಯೆ-ಅಹಿಂಸಾದಿ ತತ್ವಗಳನ್ನು ಸ್ಥಾಪಿಸಿದ್ದನಷ್ಟೆ! ಅವುಗಳೂ ಕೆಲಕಾಲ ವೃದ್ಧಿಯಾಗಿ ತರುವಾಯ ಕಳೆಗುಂದಿದುವು ಆಗ ಉಂಟಾದ ಅವ್ಯವಸ್ಥೆಯನ್ನು ಸರಿಗೊಳಿಸಲು ಮಹಾಮಹಿಮರಾದ ಶ್ರೀಶಂಕರಾಚಾರ್ಯರವರು ಅವತರಿಸಿ, ಕೇವಲ ಬಾಲ್ಯದಲ್ಲೇ ಸನ್ಯಾಸವನ್ನು ಸ್ವೀಕರಿಸಿ, ಅಹರ್ನಿಶಿ ಶ್ರಮಿಸಿ, ಅನೇಕಾನೇಕ ಗ್ರಂಥಗಳನ್ನು ರಚಿಸಿ, ಜ್ಞಾನ ಮಾರ್ಗದ ಶ್ರೇಷ್ಠತೆಯನ್ನೂ ಅದ್ವೈತಸಿದ್ಧಾಂತವನ್ನೂ ಬೋಧಿಸಿದರು ಕಾಲವು ಸಾಗಿದಂತೆಲ್ಲಾ ಲೋಕವು ಆ ಅಮೌಲ್ಯ ತತ್ವಗಳನ್ನೂ ಅಪಾರ್ಥ ಮಾಡಿಕೊಂಡು, ಭ್ರಷ್ಟಮಾರ್ಗಗಳನ್ನು ಹಿಡಿಯತೊಡಗಿತು. ಆಗ, ಜನಗಳಿಗೆ ಗೊತ್ತಾಗಿ-ಕಣ್ಣೆದುರಿಗಿರುವಂತೆ ಒಂದು ಧ್ಯೇಯವನ್ನಿಟ್ಟು, ಅಭ್ಯಾಸ ಮೂಲವಾಗಿ ಅವರು ಜನ್ಮಸಾರ್ಥಕ್ಯವನ್ನು ಹೊಂದುವಂತೆ ಮಾಡಬೇಕೆಂಬ ಆಶಯದಿಂದಲೋ, ಎಂಬಂತೆ ಅಪಾರ ದಯಾನಿಧಿಗಳಾದ ಶ್ರೀಮದ್ರಾಮಾನುಜಾಚಾರ್ಯರವರು ಶ್ರೀವಿಷ್ಣುಮೂರ್ತಿಯ ಪೂಜೆ-ಭಜನೆ-ಸೇವೆಗಳನ್ನು ಮಾಡಿ ಕೃತಕೃತ್ಯರಾಗುವ ಮಾರ್ಗವನ್ನು ಲೋಕಕ್ಕೆ ತೋರಿಸಿಕೊಟ್ಟರು. ಈ ಅಭ್ಯಾಸ ಮಾರ್ಗವೂ ಒಂದು ಭಾಗದಲ್ಲಿ ಕ್ರಮವಾಗಿ ಅಭಿವೃದ್ಧಿಯಾಗುತ್ತಿದ್ದಿತು. ಆದರೆ, ಸರ್ವಜ್ಞನಾದ ಭಗವಾನನು, ಸೃಷ್ಟಿಶ್ರೇಷ್ಠನಾದ ಮಾನವನು ಜನ್ಮವನ್ನೆತ್ತಿದುದೇ ತಪ್ಪಾಯಿತೋ ಎಂಬಂತೆ ಈ ಜನ್ಮಬಂಧನದಿಂದ ನಿವೃತ್ತನಾಗಲು, ಜ್ಞಾನಿಯಾಗುತ್ತೇನೆಂದು ನಿಷ್ಕರ್ಮಿಯಾಗಿ ನಿರ್ವಿಣ್ಣನಾಗಿ ಸುಮ್ಮನೆ ಕುಳಿತು ಬಿಡುವುದನ್ನಾಗಲೀ ಅಥವ ಇತರ ಯಾವ ಕಾರ್ಯವನ್ನೂ ಗಮನಿಸದೆ ಕೇವಲ ತನ್ನ ಪೂಜೆ ಭಜನೆ-ಸೇವಾದಿಗಳಲ್ಲಿ ನಿಂತು ಬಿಡುವುದನ್ನೇ ಆಗಲಿ ಮೆಚ್ಚಲಾರನಲ್ಲವೆ? ಏಕೆಂದರೆ ಸರ್ವೇಶ್ವರನಿಂದ ಸೃಷ್ಟವಾಗಿ ಪಾಲಿಸಲ್ಪಡುತ್ತಿರುವ ಈ ಜಗತ್ತು ಸುಸ್ಥಿತಿಯಿಂದ ಮುಂಮುವರಿದು ನಡೆಯಬೇಕಾದುದೂ ಆತನಿಗೆ ಪ್ರಿಯಕರವಾದ ವಿಷಯವೇ! ಅದನ್ನು ಹಾಗೆ ನಡೆಯಿಸಿಕೊಂಡು ಹೋಗತಕ್ಕವನು, ವ್ಯಕ್ತದೃಷ್ಟಿಗಂತೂ, ಸರ್ವೇಶ್ವರನ ರಾಯಭಾರಿಯೋ ಎಂಬಂತಿರುವ ಮಾನವನೇ ಅಲ್ಲದೆ ಬೇರೆ ಯಾರು? ಅಂತಹ ಶ್ರೇಷ್ಠಜೀವಿಯಾದ ಮಾನವನು "ನಾನು ಪ್ರಪಂಚದಲ್ಲಿ ಹುಟ್ಟಿದುದೇ ಮಹದಪರಾಧವಾದ ಕಾರ್ಯ! ಸಾಧ್ಯವಾದಷ್ಟು ಜಾಗ್ರತೆ ಈ

ಬಂಧನದಿಂದ ಬಿಡಿಸಿಕೊಂಡು ಓಡಿಹೋಗಬೇಕು!'' ಎಂದು ಸಕಲ ಪ್ರಾಪಂಚಿಕ ವೃತ್ತಿಗಳಲ್ಲಿಯೂ ಉದಾಸೀನ ಭಾವವನ್ನು ತಳೆದರಾಗಲೀ-ಅಥವ ''ನನ್ನನ್ನು ಈ ಬಂಧನದಿಂದ ಬಿಡಿಸು ಪ್ರಭುವೇ!'' ಎಂದು ಸರ್ವಕಾಲವೂ ಪ್ರಾರ್ಥಿಸಿ, ಸ್ವಾಮಿಯನ್ನು ಕಾಡಿ ಬೇಡಿ ಮೊರೆಯಿಟ್ಟುಕೊಂಡಿರುವುದರಲ್ಲಾಗಲೀ ಕಾಲ ಕಳೆಯತೊಡಗಿದರೆ ಪ್ರಪಂಚ ವ್ಯಾಪಾರವು ಸಾಗುವ ಬಗೆಯಾವುದು? ಸಂಸಾರವು ದುಃಖಮಯವಾದುದೇ, ಈ ಸಂಸಾರ ಬಂಧನದಿಂದ ಬಿಡಿಸಿಕೊಂಡು ಹೋಗಿ ಮುಕ್ತನಾಗತಕ್ಕದ್ದೂ ಆವಶ್ಯಕವೇ ಆದರೂ ಇರುವಷ್ಟು ದಿನವೂ ''ಇಹಜೀವಿತವು ದುಃಖಮಯವಾದುದು, ನನ್ನ ಈ ಜನ್ಮವು ಹೀನವಾದುದು, ನಾನು ಮಹಾ ಪಾಪಿ-ನೀಚ'' ಎಂದು ಮುಂತಾಗಿ ತನ್ನ ಇರುವಿಕೆಯನ್ನು ಹಳಿದುಕೊಂಡು ತನ್ನ ಜೀವನವನ್ನೇ ನರಕಕೂಪವನ್ನಾಗಿ ಮಾಡಿಕೊಂಡರೆ ಯಾವ ಪುರುಷಾರ್ಥಸಾಧನೆಯಾದಂತಾಯಿತು? ಹಾಗಲ್ಲದೆ, ಇದೇ ಪ್ರಾಪಂಚಿಕ ಜೀವಿತದಲ್ಲೇ 'ನಾನು-ನನ್ನದು' ಎಂಬ ಆಸೆ ಮೋಹ ಮಮತೆಗಳನ್ನು ಮಾತ್ರ ಬಿಟ್ಟು, ಸಕಲ ಲೌಕಿಕ ಕಾರ್ಯಗಳನ್ನೂ 'ನಾನು ಕರ್ತನಲ್ಲ' ಎಂಬ ಮನೋಭಾವನೆಯಿಂದ, ''ಈ ಎಲ್ಲಾ ಕೆಲಸಗಳನ್ನೂ ಜಗದ್ರಕ್ಷಕನಾದ ಆ ಸರ್ವೇಶ್ವರನ ಪ್ರೀತಿಗಾಗಿ ಮಾಡುತ್ತೇನೆ'' ಎಂಬ ಘನವಾದ ಉದ್ದೇಶದಿಂದ ಪ್ರೇರಿತನಾಗಿ ಮಾಡತೊಡಗಿದರೆ ಅದೇ ಸಂಸಾರವೇ ಸುಖಮಯವಾಗಿರುವುದಲ್ಲವೆ? ಇಂತಹ 'ನಿಷ್ಕಾಮ' ವೆಂಬ ಜಿಡ್ಡನ್ನು ಕೈಗೆ ಸವರಿಕೊಂಡು, ಲೋಕವ್ಯವಹಾರವೆಂಬ ಹಲಸಿನ ಹಣ್ಣನ್ನು ಬಿಚ್ಚತೊಡಗಿದರೆ ಅದರ ಹಾಲು ಕೈಗೆ ಮೆತ್ತದೆ-ಅಸಹ್ಯಕರವಾಗದೆ ಇರಬಹುದಲ್ಲವೆ?—

ಪ್ರಪಂಚದ ಸುಸ್ಥಿತಿಗೆ ಯಾವ ಯಾವ ಕಾಲಕ್ಕೆ ಯಾವುದು ಆವಶ್ಯಕವಾದದು ಎಂಬುದು ಅಜ್ಞಾನಿಗಳಾದ ನಮಗಿಂತಲೂ ಸರ್ವೇಶ್ವರನೂ ಸರ್ವಜ್ಞನೂ ಆದ ಆ ಜಗತ್ಪ್ರಭುವಿಗೆ ಗೋಚರವಿರುವುದೆಂಬ ವಿಷಯದಲ್ಲಿ ಸಂದೇಹವೇನು ? ಅದರಂತೆಯೇ ಕಾಲಕಾಲಕ್ಕೆ ಆವಶ್ಯಕವಾದ ಸಕಲ ಸಾಧನಗಳನ್ನೂ ಆತನು ಒದಗಿಸುತ್ತಿರುವನು. ಕ್ರಿಸ್ತಶಕದ ೧೦-೧೧ನೆಯ ಶತಮಾನಗಳ ಕಾಲದಲ್ಲಿ ನಮ್ಮ ಈ ಮಾತೃಭೂಮಿಯು ಕ್ರೂರಿಗಳಾದ ಮಹಮ್ಮದೀಯರ ಧಾಳಿಗೆ ಒಳಪಟ್ಟಿತು ಹನ್ನೆರಡು ಹದಿನೂರನೆಯ ಶತಮಾನಗಳ ವೇಳೆಗೆ ಅವರಿಂದ ನಮ್ಮವರಿಗುಂಟಾಗುತ್ತಿದ್ದ ಬಾಧೆಯು ಸಹಿಸಲಶಕ್ಯವಾಯಿತು. ಅವರು

ತಮ್ಮ ಮತಧರ್ಮಗಳನ್ನು ಶಸ್ತ್ರಮೂಲಕವಾಗಿ ಪ್ರಚಾರಗೊಳಿಸತೊಡಗಿದರು. ಅವರ ಹಿಂಸೆಯನ್ನು ಸಾಧು ಸ್ವಭಾವರಾದ ಭಾರತೀಯರು ತಾಳಲಾರದೆ ತತ್ತಳಿಸತೊಡಗಿದರು. ಆವರಿಗೆ ಬಹುಮಟ್ಟಿಗೆ ಪ್ರಚಾರಗೊಂಡಿದ್ದ ಶಾಂಕರ ಮತದ ಜಗನ್ಮಿಥ್ಯಾ ಸಿದ್ಧಾಂತವು ಭೀತರಾದ ಆ ಜನಗಳಿಗೆ ಆಗ ಹುಲ್ಲು ಅವಲಂಬನವಿತ್ತಂತೆ ತೋರಿತು. ಆ ಕಷ್ಟಕಾಲದಲ್ಲಿ ಮಹಮ್ಮದೀಯರ ಶಸ್ತ್ರಕ್ಕಂಜಿ ಭೀತರಾದ ಆ ಜನರು, ಶ್ರೀಮಚ್ಛಂಕರಾಚಾರ್ಯರೇ ಉಗ್ಗಡಣೆ ಘೋಷಿಸಿದ 'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ' ಎಂಬ ಮಹಾವಾಕ್ಯರತ್ನವನ್ನು ಮರೆತು ತಮ್ಮ ಮಾತೃಭೂಮಿಯ ವಿಷಯದಲ್ಲೂ, ಲೌಕಿಕ ಜೀವಿತದ ವಿಷಯದಲ್ಲೂ ಮೇಲ್ಕಂಡ ಜಗನ್ಮಿಥ್ಯಾ ತತ್ವವನ್ನು ಆರೋಪಿಸಿ ಅಭಿಮಾನ ಶೂನ್ಯರಾಗತೊಡಗಿದರು. ಮತ್ತೆ ಕೆಲವರಿಗೆ "ಎಲ್ಲವೂ ಆತ್ಮಸ್ವರೂಪವೇ! ಅವರಿಗೂ ನಮಗೂ ಭೇದವೇನು? ಪ್ರಪಂಚವೇ ಭ್ರಾಂತಿಸ್ವರೂಪವಾದುದಾಗಿರುವಲ್ಲಿ ಸ್ವೀಯ ಪರಕೀಯವೆಂಬ ಈ ಭಾವನೆಯೇಕೆ?" ಎಂದು ಮುಂತಾಗಿ ತೋರಿ, ಅವರೂ ಶತ್ರುಗಳ ದಮನದಲ್ಲಿ ಮನಸ್ಸು ಮಾಡದೆ ಕಣ್ಣುಮರೆಯಾಗಿ ಪ್ರಾಣಗಳನ್ನುಳಿಸಿಕೊಂಡರು. "ಈ ಜಗತ್ತಿನಲ್ಲಿ ಯಾರಿಗೆ ಯಾರೂ ಇಲ್ಲ, ಎಲ್ಲರೂ ಅವರವರ ಕರ್ಮಾನುಸಾರ ಸುಖ ದುಃಖಾನುಭವ ಮಾಡಬೇಕಾಗಿರುವಾಗ, ಯಾರು ಅಳಿದರೆ ನಮಗೇನು, ಯಾರು ಉಳಿದರೆ ನಮಗೇನು?" ಎಂದು ಮುಂತಾಗಿ ಯೋಚಿಸಿ ಸ್ವಜನ ದೇಶಾಭಿಮಾನಗಳನ್ನು ಕೈಬಿಟ್ಟವರು ಕೆಲವರು! ಮತ್ತೆ ಕೆಲವರು, "ನಾನು ಆತ್ಮಸ್ವರೂಪನು, ನನಗೆ ಈ ಪ್ರಪಂಚದಿಂದ ಏನೂ ಆಗಬೇಕಾದುದಿಲ್ಲ. ನಾನು ಇಲ್ಲಿ ಮಾಡಬೇಕಾದ ಕಾರ್ಯವೂ ಇಲ್ಲ. ಈ ಮಾಯಾಮಯವಾದ ಜಗತ್ತಿನಿಂದ ತಪ್ಪಿಸಿಕೊಂಡು ಹೋಗಲು, ಇತರ ಹವ್ಯಾಸಗಳ ಗೊಡವೆಯನ್ನು ಹಚ್ಚಿಕೊಳ್ಳದೆ ಯೋಗಿಯಾಗಿ ಆತ್ಮಸಿದ್ಧಿಯನ್ನು ಹೊಂದಿದರಾಯಿತು." ಎಂದುಕೊಂಡರು. ಹಾಗೆ ಆತ್ಮಸಿದ್ಧಿಯನ್ನು ಹೊಂದಬೇಕೆಂಬ ಮಹದುದ್ದೇಶದಿಂದ ಲೌಕಿಕವನ್ನು ತ್ಯಜಿಸಿದ್ದರೆ ಅಂತಹ ಬ್ರಹ್ಮನಿಷ್ಠರಿಗೆ ಜಗತ್ತೇ ವಂದಿಸುವುದು. ಆದರೆ ಭೀತರಾಗಿ ಜೀವಗಳ್ಳರಾದ ಜನಸಾಮಾನ್ಯರೂ ಆ ವೇದಾಂತ ಅದ್ವೈತ ತತ್ವ ಸಿದ್ಧಾಂತಗಳ ಮರೆಯಲ್ಲಡಗಿ ಪ್ರಾಣಧನಮಾನಗಳನ್ನುಳಿಸಿಕೊಳ್ಳಲೆಳಸಿದರು. ಜನಾಂಗಕ್ಕೆ ಜ್ಞಾನಬೋಧೆ ಮಾಡುವ ಬ್ರಹ್ಮವರ್ಗವೇ ಮೇಲ್ಕಂಡಂತೆ ನಿರ್ವಿ

ಜ್ಞಾತೆಯನ್ನು ಹೊಂದಿ ತಟಸ್ಥರಾಗೊಡನೆಯೇ, ಯೋಗ್ಯಮಾರ್ಗದರ್ಶಕರಿಲ್ಲದ ಕ್ಷತ್ರಿಯರೂ ವೈಶ್ಯರೂ ಮನಬಂದ ಮಾರ್ಗದಲ್ಲಿ ನಡೆಯತೊಡಗಿದರು. ಶತ್ರುಗಳ ಧಾಳಿಗೊಳಪಟ್ಟರು. ಸರ್ವಸ್ವವನ್ನೂ ಸೂರೆಗೊಟ್ಟರು. ಆ ಸಂದರ್ಭದಲ್ಲಿ ಜನಮನಕ್ಕೆ ಅಂಟಿದ್ದ ಆ ಜಾಡ್ಯವನ್ನು ಪರಿಹರಿಸಿ, ಅವರಲ್ಲಿ ಮನೆಮಾಡಿಕೊಂಡಿದ್ದ ಹೇಡಿತನ-ಪ್ರಗಲ್ಭತನಗಳನ್ನು ನೀಗಿಸಿ, ಅವರನ್ನು ಹುರಿದುಂಬಿಸಿ—"ನಾಹಂಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮಚಾಖಿಲಂ" ಎಂಬ ಘನತಾತ್ಪರ್ಯವನ್ನಿಟ್ಟುಕೊಂಡು ನಿಷ್ಕಾಮಕರ್ಮಮಾಡುವ ಮಾರ್ಗವನ್ನು ಬೋಧಿಸಿ, ಕಾರ್ಯತತ್ಪರರಾಗುವಂತೆ ಮಾಡಬಲ್ಲ ಒಬ್ಬ ವಿಭೂತಿಯ ಆಗಮನವು ಅವಶ್ಯಕವೆಂಬಂತೆ ತೋರಿತು ಅಂತೆಯೇ, ಯಾರು ತ್ರೇತೆಯಲ್ಲಿ ಶ್ರೀರಾಮನ ದೂತನಾಗಿ, ಅತಿಶಯ ಕಾರ್ಯತತ್ಪರನಾಗಿ, ಮಹಾತೇಜಸ್ವಿಯಾಗಿ, ಶ್ರೀಮದಾಂಜನೇಯನೆಂಬ ನಾಮಧೇಯದಿಂದ ಪ್ರಖ್ಯಾತನಾಗಿದ್ದನೋ, ಮತ್ತಾರು, ದ್ವಾಪರದಲ್ಲಿ ಪಾಂಡವಶ್ರೇಷ್ಠನೆನ್ನಿಸಿ, ಬಲಪರಾಕ್ರಮಧುರ್ಯನಾಗಿ, ಅಜೇಯನಾಗಿ, ಧೈರ್ಯಶೌರ್ಯನಿಧಿಯೆಂದು ಪ್ರಸಿದ್ಧನಾಗಿ ಗದಾಯುಧಧಾರಿಯಾಗಿ ಧರ್ಮಸಂಗ್ರಾಮದಲ್ಲಿ ತೊಡಗಿದ್ದನೋ, ಆ ಹರಿಭಕ್ತ ಶಿರೋಮಣಿಯೇ ಕಲಿಯುಗದಲ್ಲಿ ವ್ಯಾಪ್ತವಾಗಿದ್ದ ಈ ದುರಂತ ಕಷ್ಟದಿಂದ ಭಾರತೀಯರನ್ನು ಕಡತೇರಿಸಿ, ಅವರಲ್ಲಿ ನವಚೈತನ್ಯವನ್ನುಂಟುಮಾಡುವ ಮಹತ್ಕಾರ್ಯ ಸಾಧನೆಗಾಗಿ ಅವತರಿಸಿದನು ಹಾಗೆ ಲೋಕೋದ್ಧಾರಕನ್ನಾಗಿ ಅವತರಿಸಿದ ಮಹಾಪುರುಷರೇ ಮಹಾನುಭಾವರಾದ ಶ್ರೀಮನ್ಮಧ್ವಾಚಾರ್ಯರು!—

ಭಾರತದೇಶದ ಪಶ್ಚಿಮ ಸಮುದ್ರ ತೀರವು ನೋಟಕ್ಕೆ ಅತ್ಯಂತ ರಮಣೀಯವಾದ ಅನೇಕ ಪ್ರಾಕೃತಿಕ ಸನ್ನಿವೇಶಗಳಿಂದ ಕೂಡಿದೆ. ತಗ್ಗಿನಿಂದ ಮೈದಾನಕ್ಕೆ, ಮನೋಹರವಾದ ಗದ್ದೆ ತೋಟಗಳ ಮೈದಾನ ಪ್ರಾಂತದಿಂದ, ಗುಡ್ಡಬೆಟ್ಟಗಳ ಪ್ರಾಂತಕ್ಕೆ-ಅವುಗಳಿಂದ ಮಹೌನ್ನತ್ಯ ಪ್ರದೇಶಗಳಾಗಿ ಹಿಮದಿಂದ ಮುಚ್ಚಲ್ಪಟ್ಟಿರುವ ಪಶ್ಚಿಮಘಟ್ಟ ಪ್ರಾಂತಗಳಿಗೆ, ಹೀಗೆ ನೆಲವು ಏರುತ್ತೇರುತ್ತಾ, ಕ್ರಮವಾಗಿ ಒಂದೊಂದನ್ನಾಗಿ ನೋಡಿಕೊಂಡು ಹೋಗುವ ಮನುಷ್ಯನ ದೃಷ್ಟಿಮೂಲಕವಾಗಿ ಅವನ ಮನಸ್ಸಿಗೂ ಉನ್ನತಿಯನ್ನುಂಟುಮಾಡುವಂತಿದೆ. ಶ್ರೀಪರಶುರಾಮಕ್ಷೇತ್ರವೆಂದು ಪ್ರಸಿದ್ಧವಾದ ಈ ಪ್ರಾಂತವನ್ನು

ಗಮನಿಸುತ್ತಿ ನೋಡುವ ಪ್ರಕೃತಿ ಪರೀಕ್ಷಕರಿಗೆ ಇದು ಒಂದು ಕಾಲದಲ್ಲಿ ತಪ್ಪದೆ ಸಮುದ್ರತಳವಾಗಿತ್ತೆಂದು ತೋರುವುದಕ್ಕೆ ಹೆಚ್ಚು ಆಧಾರಗಳು ದೊರೆವುವು. ಈ ಪ್ರಾಂತವು ವರ್ಷದಲ್ಲಿ ಯಾವಾಗಲೂ ಕಡಿಮೆಯಿಲ್ಲದ ಜಲಾಧಾರದಿಂದ ಸೊಂಪಾಗಿ ಬೆಳೆದ ವೃಕ್ಷಪಂಕ್ತಿಗಳಿಂದ ಕೂಡಿ ಸುಂದರವಾಗಿ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತಿದೆ.

ಈ ಪ್ರಾಂತದಲ್ಲಿ 'ರಜತಪೀಠಪುರ' ವೆಂಬ ದಿವ್ಯಕ್ಷೇತ್ರವು ಬಹು ಕಾಲದಿಂದಲೂ ಪ್ರಸಿದ್ಧವಾಗಿದೆ. ಈ ಕ್ಷೇತ್ರದಲ್ಲಿ ನಲಿಗೊಂಡಿರುವ ದೇವಮೂರ್ತಿಗಳ ಸಾನ್ನಿಧ್ಯದಿಂದ ಈ ಸ್ಥಳಕ್ಕೆ 'ರಜತಪೀಠಪುರ' ಮತ್ತು 'ಉಡುಪಿ' ಎಂಬ ಹೆಸರುಗಳು ಪ್ರಾಪ್ತವಾಗಿವೆ. ಈ ಉಡುಪೀ ಕ್ಷೇತ್ರವು ಶ್ರೀಮನ್ಮಧ್ವಾಚಾರ್ಯರಿಂದ ಪ್ರತಿಷ್ಠಿತನಾದ ಶ್ರೀಕೃಷ್ಣದೇವಾಲಯಕ್ಕಾಗಿ ಪ್ರಸಿದ್ಧವಾಗುವುದಕ್ಕೆ ಬಹು ಕಾಲ ಪೂರ್ವದಿಂದಲೂ ಅಲ್ಲಿ ಈಗಲೂ ಇರುವ ಶ್ರೀಚಂದ್ರಮೌಳೀಶ್ವರ ಮತ್ತು ಶ್ರೀಅನಂತೇಶ್ವರ ಸ್ವಾಮಿಯ ದೇವಾಲಯಗಳಿಗಾಗಿ ಪ್ರಸಿದ್ಧಿಗೊಂಡಿದ್ದಿತು. 'ಉಡುಪ' ಎಂಬ ಸಂಸ್ಕೃತಪದಕ್ಕೆ ಚಂದ್ರನೆಂಬ ಅರ್ಥವುಂಟಷ್ಟೆ! ಈ ಕಾರಣದಿಂದ 'ಉಡುಪಿ' ಎಂಬುದು, ಶ್ರೀಚಂದ್ರಮೌಳೀಶ್ವರನಿಗೆ ಒಂದು ಹ್ರಸ್ವನಾಮವಾಯಿತು. ಮತ್ತು ಈ ಉಡುಪ ವಿಭೂಷಿತನಾದ ಚಂದ್ರಮೌಳೀಶ್ವರನ ಆವಾಸಸ್ಥಾನವಾದುದರಿಂದ ಅದು ಉಡುಪಿ ಎಂಬ ನಾಮದಿಂದಲೇ ಪ್ರಸಿದ್ಧವಾಯಿತು. ಅಲ್ಲದೆ ಅನಂತೇಶ್ವರ ದೇವಾಲಯದಲ್ಲಿ ಸ್ವಾಮಿಯ ಪೀಠವು ರಜತಮಯವಾಗಿದೆ, ಎಂದರೆ ಶುದ್ಧ ಬೆಳ್ಳಿಯಿಂದಲೇ ನಿರ್ಮಿತವಾಗಿದೆ. ಹಾಗೆ ರಜತಪೀಠದಿಂದ ವಿಭೂಷಿತನಾದ ಸ್ವಾಮಿಯ ಸಾನ್ನಿಧ್ಯದಿಂದ ಸುಪ್ರಸಿದ್ಧವಾದ ಆ ಕ್ಷೇತ್ರವು ರಜತಪೀಠಪುರವೆಂಬ ನಾಮಧೇಯದಿಂದ ಕರೆಯಲ್ಪಡುವುದಾದರೂ ಅನ್ವರ್ಥವಾಗಿಯೇ ಇದೆ-ಅಲ್ಲದೆ ಆ ಪ್ರಾಂತದಲ್ಲಿ ಶಿವಳ್ಳಿಯೆಂಬ ಮಾತು ಸರ್ವಸಾಧಾರಣವಾಗಿದೆ. ಈ ಮಾತೂ, ಬೆಳ್ಳಿಯಿಂದ ನಿರ್ಮಿತವಾದ ಪೀಠದಮೇಲೆ ಮುಹೂರ್ತ ಮಾಡಿರುವ ಶಿವನನ್ನೇ ಹೆಸರಿಸುವ 'ಶಿವ-ಬೆಳ್ಳಿ' ಎಂಬ ಮಾತುಗಳ ಸೇರ್ಪಿಕೆಯ ಅಪಭ್ರಂಶ ಸ್ವರೂಪವೇ ಆಗಿ ಅರ್ಥವತ್ತಾಗಿಯೇ ಇದೆ.

ಈ ಪಶ್ಚಿಮ ಸಮುದ್ರತೀರದಲ್ಲಿ ವಾಸಿಸುವ ಬ್ರಾಹ್ಮಣರಲ್ಲಿ ಮುಖ್ಯವಾಗಿ ಕೊಂಕಣಿಗಳು, ಸಾರಸ್ವತರು ಮತ್ತು ಶಿವಳ್ಳಿಯವರೆಂದು ಮೂರು

ಪಂಗಡಗಳುಂಟು. ಇವರಲ್ಲಿ ಶಿವಳಿಯವರು ತುಳುವಶಾಕ್ತನಾದವರು. ಮಧ್ವಾಚಾರ್ಯರ ಕಾಲಕ್ಕೆ ಹಿಂದ ಇವರು ಅದ್ವೈತ ಸಂಪ್ರದಾಯದ ಗ್ರಂಥಗಳನ್ನೇ ಆಧಾರ ಗ್ರಂಥಗಳನ್ನಾಗಿಟ್ಟುಕೊಂಡು, ಪ್ರತಿಯೊಬ್ಬ ಅಕ್ಷಸ್ಥನಾದ ಬ್ರಾಹ್ಮಣನೂ ಅವುಗಳಲ್ಲಿ ತನ್ನಿಂದ ಸಾಧ್ಯವಿದ್ದಷ್ಟು ಗಳಿಸಿ ಪಾಂಡಿತ್ಯವನ್ನು ಸಂಪಾದಿಸಿ ಪ್ರಸಿದ್ಧಿಗೆ ಬರಲು ಆಶಿಸುತ್ತಿದ್ದ ಪದ್ಧತಿಯಿತ್ತು. ಆದರೂ ಈ ಶಿವಳಿಯವರಲ್ಲಿ ವೈಷ್ಣವ ಸಾಂಪ್ರದಾಯವೇ ಹೆಚ್ಚು. ವೈಷ್ಣ ಸಂಪ್ರದಾಯದವರಲ್ಲಿ ಏಕಾದಶಿಯ ಆಚರಣೆಗೆ ಮಹತ್ವ ಬಹಳ. ಇದರಿಂದೇ ಆ ಪ್ರಾಂತ ಹರಿಹರೇಶ್ವರ, ಅನಂತೇಶ್ವರ, ಶಂಕರನಾರಾಯಣ ಮೂರ್ತಿಗಳೇ ಹೆಚ್ಚಾಗಿದ್ದು, ಶಿವವಿಷ್ಣುಗಳಲ್ಲಿ ಅಂತಹ ಭೇದಭಾವವಿಲ್ಲದೆಯೇ ಪೂಜಾ-ಆರಾಧನೆಗಳು ನಡೆಯುತ್ತಾ ಬಂದುವು.—

ಆ ಕಾಲದಲ್ಲಿ ಅಲ್ಲಿಯ ಬ್ರಾಹ್ಮಣರಿಗೆ ಶ್ರೀಶಂಕರಾಚಾರ್ಯ ವಿರಚಿತಗಳಾದ ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸುವ ಗ್ರಂಥಗಳೇ ಮುಖ್ಯಾಧಾರಗಳಾಗಿದ್ದರೂ, ವಿದ್ಯಾವಂತರು ಅವುಗಳನ್ನೇ ಪಠಿಸುತ್ತಿದ್ದರೂ, ಆತ್ಮಸಿದ್ಧಿಯನ್ನು ಹೊಂದುವಿಕೆ, ಜೀವನಿಗೂ ಬ್ರಹ್ಮನಿಗೂ ಭೇದವಿಲ್ಲ, ಈ ದೃಶ್ಯವಾದ ಜಗತ್ತು ಸುಳ್ಳು, ನಾನೇ ಈಶ್ವರನೆಂಬ ಕೆಲವು ಅದ್ವೈತ ಸಿದ್ಧಾಂತಗ ವಿಚಾರದಲ್ಲಿ ಜನಗಳ ಮನಸ್ಸು ನಿಶ್ಚಯಾಭಿಪ್ರಾಯವನ್ನು ಗ್ರಹಿಸಲಾರದೆ ಒಂದು ಬಗೆಯ ಸಂಶಯಸ್ಥಿತಿಗೆ ಒಳಗಾಯಿತು. ತನ್ನ ತಪ್ಪನ್ನು ಮನ್ನಿ ಕೋರಿದ ಇಷ್ಟಾರ್ಥಗಳನ್ನಿತ್ತು ಕಾಪಾಡುವ ಭಕ್ತವತ್ಸಲನಾದ ಪರಮಪಿತನಾದ ದಯಾಮಯನಾದ ಭಗವಂತನನ್ನು, ಪೂಜಿಸಿ, ಭಜಿಸಿ, ಪಾದಕ್ಕೆರದ್ದು ಮನಸಾರೆ ಸೇವಿಸುವ ಭಕ್ತಿಪರವಶಸ್ಥಿತಿಯುಳ್ಳವರು, ನಾನೇ ಈಶ್ವರನೆಂಬ ಸಿದ್ಧಾಂತವನ್ನು ಸಮರ್ಥಿಸುವ ಶಾಸ್ತ್ರಚರ್ಚೆಯನ್ನೂ-ವಿಚಾರತರಂಗವನ್ನೂ ಒಪ್ಪಲಾರರಲ್ಲವೆ! ಅಲ್ಲಿನ ಆಗಿನವರ ಸ್ಥಿತಿಯು ಹಾಗಿದ್ದು, ತಮ ಆ ಸ್ಥಿತಿಯನ್ನು ಸರಿಗೊಳಿಸಿ ಯುಕ್ತಮಾರ್ಗವನ್ನು ತೋರಿಸಿ ಕೊಡಬಲ್ಲ ಮಹನೀಯರಾರೂ ಇಲ್ಲವೆ ಎಂಬ ಚಿಂತೆಯು ಅನೇಕರನ್ನು ಆವರಿಸಿತ್ತು. ಹಾ ಅಹರ್ನಿಶಿ ವ್ಯಸನಪಟ್ಟು ಬೆಂದುಬೆಂಡಾಗುತ್ತಿದ್ದವರಲ್ಲಿ ಪುರುಷೋತ್ತಮ ತೀರ್ಥರೆಂದು ಪ್ರಖ್ಯಾತರಾಗಿದ್ದ ಶ್ರೀ ಅಚ್ಯುತಪ್ರೇಕ್ಷಾಚಾರ್ಯರೇ ವಷ್ಠರು. ಇವರು ಮೇಲೆ ಹೇಳಲ್ಪಟ್ಟ ಶ್ರೀಮದನಂತೇಶ್ವರಸ್ವಾಮಿಯ ನ

ಆರಾಧಿಸುತ್ತಾ, "ಪ್ರಭುವೆ, ಜನಮನವನ್ನು ಮುಸುಕಿರುವ ಈ ಅಜ್ಞಾನಾಂಧಕಾರವನ್ನು ತೊಲಗಿಸಿ ಸುಜ್ಞಾನವೆಂಬ ಸೂರ್ಯಪ್ರಕಾಶದಲ್ಲಿ ಲೋಕವನ್ನು ನಡೆಯಿಸಬಲ್ಲ ಮಹಾ ಪುರುಷನೊಬ್ಬನನ್ನು ಅನುಗ್ರಹಿಸು" ಎಂದು ರಾತ್ರಿ ಹಗಲೂ ಪ್ರಾರ್ಥಿಸಿಕೊಳ್ಳುತ್ತಿದ್ದರು

ಹೀಗಿರುವಲ್ಲಿ ಆ ದೇವಸ್ಥಾನದಲ್ಲಿ ಪ್ರತಿವರ್ಷವೂ ನಡೆಯುತ್ತಿದ್ದ ರಥೋತ್ಸವದಲ್ಲೊಂದುದಿನ ಅಲ್ಲೇ ಗುಂಪಿನಲ್ಲಿದ್ದ ಒಬ್ಬ ಶ್ರೋತ್ರಿಯನ ಮೇಲೆ ಸ್ವಾಮಿಯ ಆವೇಶ ಬಂದಂತಾಗಿ ಅವನು ಅಲ್ಲಿದ್ದ ಎತ್ತರವಾದ ಧ್ವಜಸ್ತಂಭದ ಮೇಲಕ್ಕೇರಿ, ನರ್ತನ ಮಾಡುತ್ತಾ, ಸುತ್ತಲೂ ಸೇರಿದ್ದ ಜನಗಳನ್ನು ನೋಡಿ, ಎರಡು ಕೈಗಳನ್ನೂ ಮೇಲಕ್ಕೆತ್ತಿಕೊಂಡು "ಎಲೈ ಜನಗಳಿರಾ, ಚಿಂತಿಸಬೇಡಿ. ಇನ್ನು ಸ್ವಲ್ಪ ಕಾಲದಲ್ಲೇ, ನಿಜವಾದ ತತ್ವ ಸಿದ್ಧಾಂತಗಳನ್ನು ಬೋಧಿಸಿ, ಜನಮನಕ್ಕೆ ಅಂಟಿದ ಈ ಸಂಶಯ ವ್ಯಾಧಿಯನ್ನು ನಿವಾರಿಸಲು ಶಕ್ತನಾದ ಮಹಾ ಪುರುಷನೊಬ್ಬನು ನಿಮ್ಮಲ್ಲೇ ಅವತರಿಸುವನು" ಎಂದು ಗಟ್ಟಿಯಾಗಿ ಕೂಗಿದನು ಅದನ್ನು ಕೇಳಿದ ಎಲ್ಲರೂ ವಿವಿಧ ರೀತಿಗಳಿಂದ ಮಾತನಾಡಿಕೊಳ್ಳುತ್ತಾ ತಮ್ಮ ತಮ್ಮ ಮನೆಗಳನ್ನು ಸೇರಿದರು ಆ ಮಾತು ಎಲ್ಲರಿಗಿಂತಲೂ, ಬಹು ದಿನಗಳಿಂದ ಆ ವಿಷಯದಲ್ಲೇ ಅತಿಶಯ ಯೋಚಿಸುತ್ತಿದ್ದ ಶ್ರೀ ಅಚ್ಯುತಪ್ರೇಕ್ಷರ ಮೇಲೆ ಹೆಚ್ಚು ಪರಿಣಾಮವನ್ನುಂಟು ಮಾಡಿತು ಅವರು ಆ ಮಹಾಪುರುಷನು ಯಾರ ಉದರದಲ್ಲಿ ಜನಿಸುವನೋ, ಎಲ್ಲಿ ಹೇಗೆ ಪ್ರಕಟವಾಗುವನೋ ಎಂದು ಸದಾ ಚಿಂತಿಸುತ್ತಿದ್ದರು. ಎಂತೂ ಅಂತಹ ಪುರುಷಶ್ರೇಷ್ಠನೊಬ್ಬನು ಜನಿಸಲಿರುವನೆಂಬ ವದಂತಿಯೇ ಅವರ ಮನಸ್ಸಿಗೆ ಎಷ್ಟೋಮಟ್ಟಿಗೆ ಸಂತುಷ್ಟಿಯನ್ನುಂಟುಮಾಡಿರಲು, ಅವರು ಇನ್ನೂ ಹೆಚ್ಚು ಶ್ರದ್ಧಾಭಕ್ತಿಗಳಿಂದ ಸ್ವಾಮಿಯ ಆರಾಧನೆಯಲ್ಲಿ ತೊಡಗಿದರು ಹಾಗೆ ಆ ಭವಿಷ್ಯವಾಣಿಯಂತೆ, ಜನಿಸಿದವರೇ ನಮ್ಮ ಕಥಾನಾಯಕರಾದ ಶ್ರೀಮನ್ಮಧ್ವಾಚಾರ್ಯರು ಆ ಕ್ಷೇತ್ರಕ್ಕೆ ಸಮೀಪದಲ್ಲೇ ವಾಸಿಸಿದ್ದ ಮಧ್ಯಗೇಹಭಟ್ಟರೆಂಬ ಸತ್ಪುರುಷರೇ ಅವರ ಜನಕರು ಅವರ ವಿಚಾರವೇ ಸಂಬಂದನ್ನು ಮುಂದಿನ ಅಧ್ಯಾಯದಲ್ಲಿ ಓದೋಣ. —



ಅಧ್ಯಾಯ ೨ "ಆಚಾರ್ಯರ ಜನನ-ಬಾಲ್ಯ

"ಮಧ್ಯಗೇಹಭಟ್ಟ" ನೆಂಬುದು ಆತನ ಅಂಕಿತನಾಮವಲ್ಲ! ಆತ ಗೊತ್ತಾದ ಹೆಸರು ಇಂಥದೆಂದು ಎಲ್ಲೂ, ಯಾವ ಗ್ರಂಥದಲ್ಲೂ ಹೇಳಲ್ಪಟ್ಟಿಲ್ಲ ಆತನು ಉಡುಪಿಗೆ ಸಮೀಪದಲ್ಲೇ ಇರುವ ದೇವಗಿರಿ ಎಂಬ ಗುಡ್ಡದ ಅಡಿಭಾ ದಲ್ಲಿರುವ ಶಿವರೂಪ್ಯವೆಂಬ ಗ್ರಾಮದಲ್ಲಿ ವಾಸಿಸುತ್ತಿದ್ದನು. ಆತನು ದೈ ಭಕ್ತನು, ಶ್ರೋತ್ರಿಯನು, ಸದಾಚಾರಸಂಪನ್ನನು. ಶಾಸ್ತ್ರಪುರಾಣಾದಿಗಳಲ್ಲಿ ಅತಿಶಯ ಪಾಂಡಿತ್ಯವುಳ್ಳವನಾಗಿ ಆ ಭೂಸುರೋತ್ತಮನು ಸಕಲರ ಪ್ರೀ ವಿಶ್ವಾಸ ಗೌರವಗಳಿಗೂ ಪಾತ್ರನಾಗಿ ಲೋಕಯಾತ್ರೆಯನ್ನು ಸಾಗಿಸುತ್ತಿ ದ್ದನು. ಹಿಂದೆ, ಬ್ರಾಹ್ಮಣ ಧರ್ಮವನ್ನು ಪುನರುದ್ಧಾರ ಮಾಡಿದ ಕಾ ದಲ್ಲಿ ಶ್ರೀಶಂಕರಾಚಾರ್ಯರು, ಎಲ್ಲರೂ ಹಿಂದಿದ್ದ ಆ ಬೌದ್ಧ ನಾಮಗಳನ್ನು ಬಿಟ್ಟು ಭಟ್ಟರು-ಶಾಸ್ತ್ರಿಗಳು ಎಂಬ ಹೆಸರುಗಳನ್ನಿಟ್ಟುಕೊಳ್ಳಬೇಕೆಂದು ಕೊಟ್ಟಿ ದ್ದ ಸಂದೇಶವನ್ನನುಸರಿಸಿ ಆ ಕಾಲದಲ್ಲಿ ವಿಪ್ರರು, ಭಟ್ಟರು-ಶಾಸ್ತ್ರಿಗಳ ಎಂಬ ಗೌರವನಾಮದಿಂದಲೇ ಸಂಬೋಧಿಸಲ್ಪಡುತ್ತಿದ್ದರು. ನಮ್ಮ ಕಥಾ ನಾಯಕರ ತಂದೆಯು, ಮಹಾ ಪಂಡಿತನೂ, ನಿಸ್ಪೃಹಿಯೂ, ಆಚಾರನಿಷ್ಠ ನೂ ಆಗಿ ಯಾವಾಗಲೂ ತನ್ನ ಮನೆಯಲ್ಲೇ ಇದ್ದುಕೊಂಡು ಪುರಾಣಪುಣ್ಯ ಕಥೆಗಳನ್ನು ಹೇಳುತ್ತಾ ಇದ್ದುದರಿಂದ ಎಲ್ಲರೂ ಆತನನ್ನು ಆತನ ಹೆಸರೇ ನೆಂದು ಪ್ರಶ್ನಿಸದೆ ಭಟ್ಟರು-ಭಟ್ಟರು ಎಂದೇ ಕರೆಯಸಾಗಿದರು. ಆತನ ಮ ನೆಯೂ ಗ್ರಾಮದ ಮಧ್ಯಭಾಗದಲ್ಲಿದ್ದುದರಿಂದ 'ನಡುವಂತಿಲ್ಲಾಯ' ಎಂಬ ತ ಳುಮಾತಿನ ಸಂಸ್ಕೃತಾಭಿಪ್ರಾಯವುಳ್ಳ 'ಮಧ್ಯಗೇಹ' ದ ಭಟ್ಟರು, ಅಥ 'ಮಧ್ಯಗೇಹಭಟ್ಟ' ರೆಂಬ ನಾಮವೇ ಆತನಿಗೆ ಅಂಕಿತನಾಮವೋ ಎಂಬಂ ಆಗಿಹೋಯಿತು. ಎಲ್ಲರೂ ಆತನನ್ನು ಆ ಹೆಸರಿನಿಂದಲೇ ತಿಳಿಯುತ್ತಿದ್ದರು

ಕೆಲದಿನಗಳಮೇಲೆ, ಆ ವಿಪ್ರನು ಶಿವರೂಪ್ಯ ಗ್ರಾಮವನ್ನು ಬಿಟ್ಟು ಉಡ ಪಿಗೆ ದಕ್ಷಿಣಭಾಗಕ್ಕಿದ್ದು ಪಾಜಕಕ್ಷೇತ್ರವೆಂದು ಈಗಲೂ ಪ್ರಸಿದ್ಧವಾಗಿರು ಒಂದು ಹಳ್ಳಿಗೆ ಹೋಗಿ ಅಲ್ಲೇ ತನ್ನ ವರೊಂದಿಗೆ ವಾಸಿಸುತ್ತಿದ್ದನು ವೇದವ ಯೆಂಬ ಸತ್ಕುಲಪ್ರಸೂತೆಯೂ, ಗುಣಾಢ್ಯಳೂ ಆದ ಸ್ತ್ರೀಯು ಆತನ ಗೃಹ ವನ್ನಲಂಕರಿಸಿದ್ದಳು. ಮಧ್ಯಗೇಹಭಟ್ಟನು, ಸ್ಮೃತಿಪುರಾಣಾದಿಗಳಲ್ಲಿ ಗೃಹ ಸ್ಥಾಶ್ರಮಿಯು ಹೇಗೆ ನಡೆಯಬೇಕೆಂದು ವಿಧಿಸಲ್ಪಟ್ಟಿದೆಯೋ ಅದಕ್ಕೆ ಸ್ವಲ

ವನಾತ್ರವೂ ವಿರೋಧವುಂಟಾಗದಂತೆ, ಸ್ನಾನ ಸಂಧ್ಯಾ ಜಪತಪ ಪಾರಾಯಣಾದಿ ನಿತ್ಯಕರ್ಮಗಳಲ್ಲೂ, ವ್ರತನಿಯಮ ಉಪಾವಾಸಾದಿಗಳಲ್ಲೂ ನಿರತನಾಗಿದ್ದ ನು. ಗೃಹಸ್ಥ ಧರ್ಮಕ್ಕೆ ಅತಿಥಿಸೇವೆಯು ಬಹು ಮುಖ್ಯವಾದುದೆಂಬುದ ನ್ನು ಆತನು ಚೆನ್ನಾಗಿ ಗ್ರಹಿಸಿದ್ದು ಅತಿಥಿ ಅಭ್ಯಾಗತರ ಆದರಣೆಯಲ್ಲಿ ಆತನು ಬಹು ಶ್ರದ್ಧಾಭಕ್ತಿಗಳನ್ನಿಟ್ಟುಕೊಂಡಿದ್ದನು ಮುಖ್ಯವಾಗಿ ದ್ವಿಜನು ಹೇಗಿ ರಬೇಕೆಂದು ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟಿದೆಯೋ ಅದಕ್ಕೆ ಲೇಶವೂ ವ್ಯತ್ಯಾಸವಿಲ್ಲ ದಂತೆ, ತನ್ನ ಆಚರಣೆಯನ್ನಿಟ್ಟುಕೊಂಡಿದ್ದನು.

ಮಧ್ಯಗೇಹಭಟ್ಟನು ವೈದಿಕ ಬ್ರಾಹ್ಮಣನಾದರೂ ಪರಾಶ್ರಯದಿಂದಲೇ ಜೀವಿಸಬೇಕಾಗಿರಲಿಲ್ಲ ಆತನಿಗೆ ಕೆಲವು ಹೊಲ ಗದ್ದೆಗಳಿದ್ದು ಆತನೂ ಮನೆ ಯಲ್ಲಿ ದನಕರುಗಳನ್ನಿಟ್ಟುಕೊಂಡಿದ್ದನು. ಆ ಹೊಲಗದ್ದೆಗಳನ್ನು ರೈತರು ಆತನಿಗಾಗಿ ಸಾಗುವಳಿಮಾಡಿ ಬೆಳೆದ ಕಾಳುಕಡ್ಡಿಗಳಲ್ಲಿ ಆತನಿಗೆ ಭಾಗ ವನ್ನು ಕೊಡುತ್ತಿದ್ದರು. ಈ ಉತ್ಪನ್ನವು ಆತನನ್ನು ಶ್ರೀಮಂತನನ್ನಾಗಿಸ ದಿದ್ದರೂ ನಾಲ್ಕು ಮಂದಿಯಲ್ಲಿ ಗೌರವಸ್ಥನಾಗಿ ಜೀವಿಸಲು ಸಾಕಾಗುತ್ತಿದ್ದಿತು.

ಮಧ್ಯಗೇಹಭಟ್ಟನು ಭಕ್ತಿಪರಮನಸ್ಥಿತಿಯುಳ್ಳವನು. ದೇವರು ನಿರ್ಗುಣನು ಜಗತ್ತು ಮಾಯಾಸ್ವರೂಪವಾದುದು ಎಂಬ ಅದ್ವೈತ ವಿಚಾರ ಗಳ ವಿಷಯದಲ್ಲಿ ಆತನ ಮನಸ್ಸಿನಲ್ಲಿ ಗೂಢವಾದ ಸಂದೇಹಗಳಿದ್ದುವು ಆ ತನು, ತನ್ನ ಗ್ರಾಮದ ಹತ್ತಿರವಿದ್ದ ವಿಮಾನಗಿರಿಯೆಂಬ ಗುಡ್ಡದ ಮೇಲಕ್ಕೇ ರಿ ಅಲ್ಲಿದ್ದ ಪರಶುರಾಮತೀರ್ಥ, ಗದಾತೀರ್ಥ, ಬಾಣತೀರ್ಥ, ಜ್ಞಾನತೀರ್ಥ ಗಳೆಂಬ ಪುಣ್ಯತೀರ್ಥಗಳಲ್ಲಿ ಸ್ನಾನ ಮಾಡುವನು ಶ್ರೀಪರಶುರಾಮದೇವರ ಆಶ್ರಮವೆಂದು ಪುರಾಣಪ್ರಸಿದ್ಧವಾಗಿದ್ದ ಆ ನಿರ್ಮಲವಾದ ಪುಣ್ಯಸ್ಥಳಗಳಲ್ಲಿ ಕುಳಿತು, ತನ್ನ ಕುಲಸ್ವಾಮಿಯಾದ ಅನಂತೇಶ್ವರನನ್ನು ಧ್ಯಾನಿಸುವನು. ಪರಿಶುದ್ಧವಾದ ಆ ಸ್ಥಳದಲ್ಲಿ ಆತನಿಗೆ, ಶ್ರೀಪರಶುರಾಮರ ದಿವ್ಯಮಹಿಮೆ ಯೂ ಅವರ ಪರಾಕ್ರಮವೂ, ಅವರು ಸಮುದ್ರರಾಜನಿಂದ ಭೂಮಿಯನ್ನು ಬಿಡಿಸಿಕೊಂಡು ತಮ್ಮ ಹೆಸರಿನಿಂದ ಪ್ರಸಿದ್ಧವಾದ ಆ ಕ್ಷೇತ್ರವನ್ನು ಸ್ಥಾಪಿಸಿ ದುದೂ ಮಹದಾಶ್ಚರ್ಯವನ್ನುಂಟುಮಾಡುವುವು. ತನಗೂ ಶ್ರೀಪರಶುರಾಮ ರಂತೆ ದೇವತೆಗಳಿಂದಲೂ ಮಾನವರಿಂದಲೂ ಪೂಜಿತನಾಗಲು ಅರ್ಹನಾದ, ಯಶಶ್ವಿಯಾದ ಪುತ್ರನೊಬ್ಬನು ಜನಿಸಬೇಕೆಂದು ಅಪೇಕ್ಷಿಸುವನು. ಆತನಿಗೆ

ಪಾಪ, ಈವರೆಗೇ ಇಬ್ಬರು ಗಂಡುಮಕ್ಕಳು ಹುಟ್ಟಿ ಚಿಕ್ಕಂದಿನಲ್ಲೇ ಮೃತರಾಗಿ ಒಂದು ಹೆಣ್ಣು ಮಗು ಮಾತ್ರ ಜೀವಂತವಾಗಿದ್ದಿತು. ಅಲ್ಲದೆ ವಂಶೋದ್ಧಾರಕನಾದ ಪುತ್ರನೊಬ್ಬನಿಲ್ಲದಿದ್ದರೆ, ತನ್ನ ಜನ್ಮವು ಸಾರ್ಥಕವಾಗಲಾರದೆಂದೂ, ತನಗೂ ತನ್ನ ಪಿತೃಗಳಿಗೂ ಸದ್ಗತಿಯು ದೊರೆಯಲಾರದೆಂದೂ ಆತನು ಸದಾ ಚಿಂತಿಸುತ್ತಿದ್ದನು. ಆದರೆ ದೈವಭಕ್ತನಾದ ಆತನು ಕೇವಲ ಚಿಂತಿಸುವುದರಲ್ಲೇ ಕಾಲಹರಣ ಮಾಡಲಿಲ್ಲ! ತನ್ನ ಕುಲಸ್ವಾಮಿಯಾದ ಅನಂತೇಶ್ವರನನ್ನು ಭಕ್ತಿ ಶ್ರದ್ಧೆಗಳಿಂದ ಆರಾಧಿಸತೊಡಗಿದನು ತಾನಿದ್ದ ಪಾಜಕಕ್ಷೇತ್ರದಿಂದ ದಿನವೂ ಉಡುಪಿಗೆ ನಡೆದು, ಶ್ರೀ ಅನಂತೇಶ್ವರನನ್ನು ಪ್ರದಕ್ಷಿಣೆ ನಮಸ್ಕಾರ ಸ್ತೋತ್ರ ಸೇವೆಗಳಿಂದ ಆರಾಧಿಸುತ್ತಾ ದೇವಾಲಯದ ಒಳಪ್ರಾಕಾರದಲ್ಲೇ ಕುಳಿತು, ಸದ್ಗ್ರಂಥಗಳನ್ನು ಪಾರಾಯಣ ಮಾಡುತ್ತಾ ತನ್ನನ್ನು ಪುನ್ನಾಮ ನರಕದಿಂದ ಉದ್ಧಾರ ಮಾಡಲು ಶಕ್ತನಾದ-ಭಕ್ತಿ ಶ್ರದ್ಧಾದಿಗಳನ್ನು ಗಳಿಸಿ ತೇಜಸ್ವಿಯಾದ, ಒಬ್ಬ ಕುಮಾರನನ್ನು ಕರುಣಿಸು ಪ್ರಭುವೇ ಎಂದು ತನ್ನಾ ಇಷ್ಟದೈವವನ್ನು ಸದಾ ಬೇಡಿಕೊಳ್ಳುತ್ತಿದ್ದನು

ಮಧ್ಯಗೇಹಭಟ್ಟನೂ ವೇದವತಿಯೂ ಪುತ್ರಾರ್ಥಿಗಳಾಗಿ ಹೀಗೆ ಹನ್ನೆರಡು ವರ್ಷಕಾಲ ಅನಂತೇಶ್ವರ ಸ್ವಾಮಿಯನ್ನು ಆರಾಧಿಸಿದರು ಕೊನೆಗೊಂದು ರಥೋತ್ಸವದ ದಿನ, ಪೂರ್ವಾಧ್ಯಾಯದ ಅಂತ್ಯಭಾಗದಲ್ಲಿ ಹೇಳಿದಂತೆ ದೇವಸ್ಥಾನದಲ್ಲಿ ಹೇಳಲ್ಪಟ್ಟ ಭವಿಷ್ಯವಾಣಿಯು, ಮಧ್ಯಗೇಹಭಟ್ಟನಿಗೆ, ತನ್ನ ಪ್ರಾರ್ಥನೆಗೆ, ತನ್ನ ಇಷ್ಟದೈವವಾದ ಅನಂತೇಶ್ವರನಿಂದ ಬಂದ ಪ್ರತ್ಯುತ್ತರವೋ ಎಂಬಂತೆ ತೃಪ್ತಿಯನ್ನುಂಟುಮಾಡಿತು. ಆ ಮಾತನ್ನು ನೆನೆಸಿಕೊಂಡಂತೆಲ್ಲಾ ಆ ಮಹಾಪುರುಷನು ತನ್ನ ಮನೆಯಲ್ಲೇ ಜನಿಸತಕ್ಕವನೆಂದು ಆತನ ಮನಸ್ಸಿನಲ್ಲಿ ಬೋಧೆಯಾಗುವುದು. ಹೀಗೆ ಮತ್ತೊಬ್ಬರಿಗೆ ಹೇಳದಿದ್ದರೂ, ತನ್ನಲ್ಲಿ ತಾನೇ ಬಾಯಿಂದ ಉಚ್ಚರಿಸಲಾಗದ ಅದೊಂದು ಬಗೆಯ ಆನಂದ ಸಂಭ್ರಮಗಳಿಂದ ಕೂಡಿ ಆ ಸಾತ್ವಿಕ ಬ್ರಾಹ್ಮಣನು ಸ್ವಾಮಿಯನ್ನು ಆರಾಧಿಸುತ್ತಾ, ಅತಿಥಿಅಭ್ಯಾಗತರನ್ನು ಸೇವಿಸುತ್ತಾ, ಪತ್ನಿಯೊಡಗೂಡಿ ಯುಕ್ತಸಾಂಸಾರಿಕ ಸುಖಾನುಭವಮಾಡುತ್ತಾ ಸಮಾಧಾನದಿಂದ ಇದ್ದನು.

ಗಂಡಹೆಂಡಿರಿಬ್ಬರೂ ಸತ್ಪುತ್ರನನ್ನು ಪಡೆಯಬೇಕೆಂದು, ಮೇಲ್ಕಂಡಂತೆ ವ್ರತಾಚರಣೆಯಲ್ಲಿದ್ದು ದೇಹದಂಡನೆ ಮಾಡುತ್ತಿರಲು, ಅವರ ದೇಹಮನೋ

ಬುದ್ಧಿಗಳು ಪರಿಶುದ್ಧವಾದುವು. ಮುಂದೊಂದು ದಿನದಲ್ಲಿ ಸಾಧ್ವಿಯಾದ ಶ್ರೀವೇದವತೀದೇವಿಯು ಗರ್ಭಧಾರಣ ಮಾಡಿದಳು. ಅವತಾರ ಪುರುಷರು ಸ್ತ್ರೀಗರ್ಭದಲ್ಲಿ ಜನಿಸುವುದಕ್ಕೂ, ಸಾಮಾನ್ಯರು ಜನಿಸುವುದಕ್ಕೂ ಮಹದಂತರವುಂಟು! ಸಾಮಾನ್ಯರು ಸ್ತ್ರೀಪುರುಷರ ಎಂದರೆ ಮಾತಾಪಿತೃಗಳ ಶುಕ್ಲ ಮತ್ತು ಶೋಣಿತಗಳ ಸಂಬಂಧದಿಂದ ಪಿಂಡೋತ್ಪತ್ತಿಯನ್ನು ಹೊಂದಿ ಗರ್ಭಯಾತನೆಯನ್ನು ಅನುಭವಿಸಿ ಲೋಕದಲ್ಲಿ ಜನಿಸುವರು. ಅವತಾರ ಪುರುಷರಾದರೆ ಹಾಗಲ್ಲ ಅವರು ಶುಕ್ಲಶೋಣಿತ ಸಂಬಂಧವನ್ನೂ, ಗರ್ಭಯಾತನೆಯನ್ನೂ ಅನುಭವಿಸದೆಯೇ, ತಮ್ಮ ಇಚ್ಛಾ ಮಾತ್ರದಿಂದ ಸಿದ್ಧವಾದ ದೇಹವಲ್ಲೇ ಪ್ರವೇಶಿಸುವರೆಂದು ಉಕ್ತವಾಗಿದೆ ಶ್ರೀಮಧ್ವವಿಜಯಾದಿ ಗ್ರಂಥಗಳಲ್ಲಿ ಶ್ರೀವಾಯುದೇವರ ಅವತಾರಗಳೆಂದು ವರ್ಣಿತರಾಗಿರುವ ನಮ್ಮ ಕಥಾನಾಯಕರೂ ಹಾಗೆಯೇ ಪರಿಶುದ್ಧರಾಗಿ ಅವತರಿಸಿದ ಮಹಾಪುರುಷರು

ಶ್ರೀವೇದವತೀದೇವಿಯ ಗರ್ಭವು ದಿನದಿನಕ್ಕೆ ಬೆಳೆಯಲಾಗಿತು ಆಕೆಯ ಮುಖಮಂಡಲವು ಕಾಂತಿಯುಕ್ತವಾಯಿತು ನಡಿಗೆಯು ಮಂದವಾಯಿತು ಆದರೆ ಮನಸ್ಸು ತಿಳಿವಾಗಿ ಪರಿಶುದ್ಧವಾಯಿತು ಮನಸ್ಸಿನಲ್ಲಿ ವಿವಿಧ ಘನ ವಿಚಾರಗಳು ತೋರುವುವು ಶ್ರೀಅನಂತೇಶ್ವರನಲ್ಲಿ ಅನಿರ್ವಚನೀಯವಾದ ಭಕ್ತಿಭಾವವು ಉದಯಿಸಿತು ಪುರಾಣಪುಣ್ಯಕಥೆಗಳನ್ನು ಕೇಳುವುದರಲ್ಲೂ, ಶ್ರೀಹರಿಯ ಗುಣಮಹಿಮೆಗಳನ್ನು ಕೀರ್ತಿಸುವುದರಲ್ಲೂ, ಆಕೆಯ ಅಪೇಕ್ಷೆಯು ತೀರದಾಯಿತು ತನ್ನ ಪತ್ನಿಯು ಗರ್ಭಧಾರಣ ಮಾಡಿದ ಸಂಗತಿಯು, ಮಧ್ಯಗೇಹಭಟ್ಟನ ಆಸೆಅಭಿಲಾಷೆಗಳನ್ನು ಮುಗಿಲು ಮುಟ್ಟಿಸಿತು ಆತನು ಆಕೆಯ ಮೇಲ್ಕಂಡಂತಹ ಬಯಕೆಗಳನ್ನು ಕಂಡು, ಸೂಕ್ಷ್ಮಮತಿಯಾದುದರಿಂದ, ತಮ್ಮ ಅಷ್ಟು ದಿನದ ತಪಃಫಲವಾಗಿ ಸಂಪೂರ್ಣಪ್ರಕಾಶಕನಾದ ಸತ್ಪುತ್ರನೇ ಜನಿಸಲಿರುವನೆಂದು ನಿಶ್ಚಯಮಾಡಿದ್ದನು ಹೀಗಿರುವಲ್ಲಿ ಆ ಪುಣ್ಯಗರ್ಭಕ್ಕೆ ನವಮಾಸಗಳು ತುಂಬಿ-ಹತ್ತನೆಯ ತಿಂಗಳೂ ಕಳೆಯಿತು ಮುಂದ ಶ್ರೀ ಶಾಲಿವಾಹನ ಶಕ ೧೦೪೦ಕ್ಕೆ ಸರಿಯಾದ (ಕ್ರಿ ಶ ೧೧೧೮) ವಿಳಂಬಿನಾಮ ಸಂವತ್ಸರದ ಆಷಾಢ ಬಹುಳ ಚತುರ್ಥೀ ಬುಧದಿನದ ಶುಭ ಮುಹೂರ್ತದಲ್ಲಿ, ಸಕಲ ಗ್ರಹಗಳೂ ಉಚ್ಚಸ್ಥಾನದಲ್ಲಿದ್ದು ಮಂಗಳಕರಗಳಾಗಿರಲು, ಕ್ಷೀರಸಾಗರದಲ್ಲಿ ಕೌಸ್ತುಭರತ್ನವು ಹುಟ್ಟಿಬಂದಂತೆ, ಹಾಗೆ ಬಳೆದ

ಆ ಪೂರ್ಣಗರ್ಭದಿಂದ, ಸಕಲ ಆಸ್ತಿಕಜನಮನಾನಂದಕರವಾದ ಒಂದು ಪುತ್ರ ರತ್ನವು ಜನಿಸಿತು. ಆಗ ದಿಕ್ಕುಗಳು ಪ್ರಸನ್ನವಾದುವು ತಣ್ಣವಾದ, ಸುವಾಸನೆಯಿಂದ ಕೂಡಿದ ಮಂದಮಾರುತವು ಬೀಸಿತು. ಸಕಲರ ಮನಸ್ಸಿಗೂ ಬಹು ಸಂತೋಷವುಂಟಾಯಿತು. ಅಲ್ಲದೆ, ಅಂತರಿಕ್ಷದಲ್ಲಿ ಕರ್ಣಾನಂದಕರಗಳಾದ ದಿವ್ಯವಾದ್ಯ ವಿಶೇಷಗಳು ಬಾರಿಸಲ್ಪಟ್ಟುವೆಂದೂ ಶ್ರೀಮದಾಚಾರ್ಯರ ಚರಿತ್ರಗ್ರಂಥಗಳು ಹೇಳುತ್ತವೆ

ವಿಪ್ರಶ್ರೇಷ್ಠನಾದ ಮಧ್ಯಗೇಹಭಟ್ಟನ ಮನೆಯಲ್ಲಿ ಪುತ್ರೋದಯವಾಯಿತೆಂಬ ವಾರ್ತೆಯು ಒಡನೆ ಆ ಗ್ರಾಮವಲ್ಲಿ ವ್ಯಾಪಿಸಿತು ಸಜ್ಜನನಾದ ಆತನ ಮತ್ತು ಸಾಧ್ವೀಮಣಿಯಾದ ವೇದವತಿಯ ಮೇಲೆ ಆ ಕ್ಷೇತ್ರವಾಸಿಗಳ ಪ್ರೇಮವೆಷ್ಟೋ! ಕ್ಷಣಕಾಲದೊಳಗಾಗಿ, ಎಲ್ಲಾ ಮನೆಗಳವರೂ ಬಂದು ಪ್ರಸವಗೃಹದಲ್ಲಿ ಮೊರದಲ್ಲಿ ಮಲಗಿಸಲ್ಪಟ್ಟಿದ್ದ ತೇಜಸ್ವಿಯಾದ, ದಿವ್ಯಸುಂದರ ವಿಗ್ರಹದ ಆ ಬಾಲಚೂಡಾಮಣಿಯನ್ನು ಕಂಡು, ಆ ದಂಪತಿಗಳ ಪುಣ್ಯಪ್ರಭಾವವನ್ನು ಬಹು ಬಗೆಯಿಂದ ಕೀರ್ತಿಸಿದರು ಕಣ್ಣುಗಳಿಂದ ಆನಂದಬಾಷ್ಪಗಳನ್ನು ಸುರಿಸುತ್ತಾ, ಆ ಕಂದನು ಸಹಸ್ರಾಯುಷ್ಮಂತನಾಗಿ ಬಾಳಲೆಂದು ಸಾಧ್ವೀಮಣಿಯರು ಆಶೀರ್ವದಿಸಿದರು ವೃದ್ಧರಾದ ಬೇರೆ ಕೆಲವರು ಕೆಲ ಕಾಲದ ಹಿಂದೆ ಶ್ರೀ ಅನಂತೇಶ್ವರ ದೇವಾಲಯದಲ್ಲಾದ ಭವಿಷ್ಯವಾಣಿಯನ್ನು ಪೂರ್ತಿಗೊಳಿಸಲಿಕ್ಕಾಗಿ, ಯಾವನಾದರೊಬ್ಬ ಮಹಾಪುರುಷನು ಈ ಶಿಶುರೂಪಿನಿಂದ ಜನಿಸಿರುವನೋ ಎಂದು ಸಂದೇಹಿಸಿದರು! ಒಡನೆ ಆ ವಾರ್ತೆಯೇ ಒಬ್ಬರ ಬಾಯಿಂದ ಮತ್ತೊಬ್ಬರ ಕಿವಿಗೆ ಬಿದ್ದು, ಎಲ್ಲರೂ ವರ್ಣಿಸಲಾಗದ ಒಂದೊಂದು ಬಗೆಯ ಆನಂದ ಸಂಭ್ರಮಗಳಿಂದ ಕೂಡಿ, ಜಾಗಟೆ, ಮದ್ದಳೆ, ಶಂಖ, ಕೊಂಬು ಕಹಳೆಗಳನ್ನು ಬಾರಿಸಿ, ಕೋಲಾಹಲದಿಂದ ತಮ್ಮ ಮನಸ್ಸಿನ ಸಂತೋಷವನ್ನು ವ್ಯಕ್ತಗೊಳಿಸಿದರು

ಪ್ರಸವವಾದಾಗ ಮಧ್ಯಗೇಹಭಟ್ಟನು ಮನೆಯಲ್ಲಿರಲಿಲ್ಲ ಆತನು ಎಂದಿನಂತೆ ಅನಂತೇಶ್ವರಸ್ವಾಮಿಯ ದರ್ಶನಕ್ಕಾಗಿ ಉಡುಪಿಗೆ ಹೋಗಿ, ಸ್ವಾಮಿಯ ದರ್ಶನ ಮಾಡಿಕೊಂಡು ಹಿಂದಿರುಗಿ ತನ್ನ ಗೃಹಾಭಿಮುಖವಾಗಿ ಬರುತ್ತಿದ್ದನು ಮಧ್ಯಮಾರ್ಗದಲ್ಲೇ ದಿವ್ಯವಾದ್ಯಗಳೂ-ಸಹವಾಸಿಗಳ ಕೋಲಾಹಲಗಳೂ ಆತನಿಗೆ ಕೇಳಿಸಿದುವು ಸ್ವಲ್ಪ ದೂರ ಬರುವುದರೊಳಗಾಗಿಯೇ,

ತನ್ನ ಮನೆಯಲ್ಲಿ ಪುತ್ರೋದಯವಾದ ವೃತ್ತಾಂತವೂ, ಪರಿಪೂರ್ಣ ಸುಂದರ ವಿಗ್ರಹದಿಂದಲೂ, ಸಕಲ ಸಲ್ಲಕ್ಷಣಗಳಿಂದಲೂ ದೇವಕುಮಾರನಂತೆ ಒಪ್ಪುತ್ತಿದ್ದ ತನ್ನ ಕಂದನ ರೂಪು ತೇಜಸ್ಸಂಪತ್ತಿಯೂ ವರ್ಣಿಸಲ್ಪಟ್ಟುವು ಆ ವೃತ್ತಾಂತವನ್ನು ಕೇಳಿ ಚಿರವ್ಯಸನಿಯಾದ ಭಟ್ಟನ ಕಣ್ಣುಗಳಿಂದ, ಮಾರ್ಗ ಕಾಣದಂತೆ ಆನಂದಾಶ್ರುಗಳು ಸುರಿದುವು ಮಾತನಾಡಲು ಬಾರದಂತೆ ಕತ್ತಿನ ನರಗಳು ಉಬ್ಬಿಕೊಂಡುವು ಮಹಾ ಆಸ್ತಿಕಶಿರೋಮಣಿಯಾದ ಆತನು, ಭಕ್ತವತ್ಸಲನಾದ ತನ್ನ ಇಷ್ಟದೈವವನ್ನು ಮನಸ್ಸಿನಲ್ಲೇ ನೂರಾರುಸಾರಿ ಸ್ಮರಿಸಿಕೊಳ್ಳುತ್ತಾ, ಮನೆಗೆ ಬಂದು, ಮಗುವಿನ ಮುದ್ದುಮುಖವನ್ನು ಕಂಡು ಕಡುಸಂತುಷ್ಟನಾದನು ಸ್ನೇಹಿತರೂ ನೆರೆಹೊರೆಯ ವಿಪ್ರರೂ ಬಂದು ಭಟ್ಟನ ಭಾಗ್ಯೋದಯವನ್ನು ವರ್ಣಿಸುತ್ತಾ, ಭಗವತ್ಕೃಪೆಗೆ ಪಾತ್ರನಾದ ಆತನನ್ನು ಬಹು ಬಗೆಯಿಂದ ಅಭಿನಂದಿಸಿದರು ಧನವಂತನಾದ ನೆರೆಯ ಬ್ರಾಹ್ಮಣನೊಬ್ಬನು, ಒಡನೆ ಕರುಸಹಿತವಾದ ಹಸುವೊಂದನ್ನು ಮಗುವಿನ ಹಾಲಿಗೆಂದು ಕೊಟ್ಟನು. ಭಟ್ಟನು ಎಲ್ಲರಿಗೂ ತನ್ನ ಕೃತಜ್ಞತೆಯನ್ನು ಸೂಚಿಸುತ್ತಾ, ಮಂದಹಾಸಯುಕ್ತನಾಗಿ, ಒಡನೆ ಸ್ನಾನಮಾಡಿ ಬಂದು, ಬೆಣ್ಣೆಜೇನುತುಪ್ಪಗಳನ್ನು ಸುವರ್ಣಪಾತ್ರೆಯೊಂದರಲ್ಲಿ ಮರ್ದಿಸಿಕೊಂಡು, ವೇದಮಂತ್ರೋಚ್ಚಾರ ಪೂರ್ವಕವಾಗಿ ಚಿನ್ನದ ದರ್ವಿಯಿಂದ ಅದನ್ನು ಮಗುವಿನ ಬಾಯಿಗೆ ಹಚ್ಚಿ, ಜಾತಕರ್ಮ ವಿಧಿಯನ್ನು ನೆರವೇರಿಸಿದನು

ಪ್ರಸವಗೃಹದಲ್ಲಿ ಹತ್ತು ದಿನಗಳೂ ಸುರಕ್ಷಿತವಾಗಿ ಕಳೆದುವು! ಮಂಗಳಸ್ನಾನವಾಯಿತು. ಹನ್ನೊಂದನೆಯ ದಿನ ನಾಮಕರಣ ಮಹೋತ್ಸವವನ್ನು ಅತ್ಯುತ್ಸಾಹದಿಂದಲೂ ಬಹು ವಿಜೃಂಭಣೆಯಿಂದಲೂ ನಡೆಯಿಸಿದರು ವಿದ್ವಾಂಸನಾದ ಮಧ್ಯಗೇಹಭಟ್ಟನು, ತನ್ನ ಕಂದನು, ವಾಯುದೇವನ ಅಂಶಸಂಭೂತನೆಂಬುದನ್ನು ತಿಳಿದನೋ ಎಂಬಂತೆ, ವಾ ಎಂದರೆ ಜ್ಞಾನ ತದ್ರೂಪನಾದ, ಅಸುದೇವ ಎಂದರೆ ಪ್ರಾಣದೇವನೆಂಬರ್ಥವುಳ್ಳ ವಾಸುದೇವ ನಾಮದಿಂದ ಆ ಮಗುವನ್ನು ಕರೆದನು ಎಲ್ಲರೂ ಪರಮಾನಂದಗೊಂಡರು ಬ್ರಾಹ್ಮಣರೂ-ಸುವಾಸಿನಿಯರೂ ದಿವ ಭೋಜನ ದಕ್ಷಿಣೆ ಗಂಧಮಾಲ್ಯಾದಿಗಳಿಂದ ತೃಪ್ತರಾಗಿ, ಶಿಶುವನ್ನೂ ಬಾಣಂತಿಯನ್ನೂ ನೂರು ಬಾಯಿಗಳಿಂದ ಆಶೀರ್ವದಿಸಿದರು. ರಾತ್ರಿಯಲ್ಲಿ ಮಗುವನ್ನು ತೊಟ್ಟಿಲಲ್ಲಿಕ್ಕಿ ಐವರ

ವೃದ್ಧ ಸುಮಂಗಲೆಯರು 'ವಾಸುದೇವ' ನಾಮವನ್ನು ಬೇರೆಬೇರೆಯಾಗಿ ಹೆಸರಿಸಿ, ಸಹಸ್ರಾಯುಷ್ಮಂತನಾಗೆಂದು ಮಗುವನ್ನು ಹರಸಿ, ಜೋಗುಳವನ್ನು ಪಾಡಿ, ಆರತಿಯನ್ನು ಬೆಳಗಿ, ತರುವಾಯ ತನ್ನ ತಮ್ಮ ಮನೆಗಳನ್ನು ಸೇರಿದರು

ಹೀಗೆಯೇ ಎರಡು ಮೂರು ತಿಂಗಳು ಕಳೆದುವು. ಮಧ್ಯಗೇಹಭಟ್ಟನು, ದೀನನಾದ ತನಗೆ ಅಂತಹ ಅಮೌಲ್ಯ ರತ್ನವನ್ನು ಕರುಣಿಸಿದ ತನ್ನ ಇಷ್ಟದೈವವಾದ ಶ್ರೀ ಅನಂತೇಶ್ವರಸ್ವಾಮಿಯನ್ನು ಕ್ಷಣಕಾಲವೂ ಮರೆಯದೆ, ತನ್ನ ಪತ್ನಿಗೆ ಬಾಣಂತಿತನ ತೀರಿ, ಆಕೆಯು ನಡೆಯಲು ಶಕ್ತಳಾದ ಒಡನೆಯೇ, ಮಗುವಿನೊಂದಿಗೆ ದೇವತಾದರ್ಶನಕ್ಕೆ ಹೋಗಲು ಏರ್ಪಡಿಸಿದನು ಸ್ನೇಹಿತರೂ ಬಂಧುಗಳೂ ಮುಂತಾಗಿ ಅನೇಕ ಪರಿವಾರವು, ಉಡುಪಿಗಾಗಿ ಪ್ರಯಾಣಮಾಡಿತು ಸ್ವಾಮಿಯನ್ನು ಅಭಿಷೇಕ ಅರ್ಚನೆ ಧೂಪದೀಪ ನೈವೇದ್ಯಾದಿಗಳಿಂದ ಸೇವಿಸಿದರು ಭಟ್ಟನೂ ವೇದವತಿಯೂ ಆನಂದಬಾಷ್ಪಗಳನ್ನು ಸುರಿಸುತ್ತಾ ಸ್ವಾಮಿಯ ಪಾದಗಳ ಬಳಿಯಿಟ್ಟು, ಆ ಕಂದನಿಗೆ ಚಿರಜೀವಿತ್ವವನ್ನೂ, ಆರೋಗ್ಯಭಾಗ್ಯವನ್ನೂ, ಸಕಲವಿಧ ಶ್ರೇಯಸ್ಸನ್ನೂ, ಕರುಣಿಸಬೇಕೆಂದು ಪ್ರಾರ್ಥಿಸಿದರು. ತರುವಾಯ ಎಲ್ಲರೂ ಸಂತೋಷದಿಂದ ಭೋಜನ ಮಾಡಿಕೊಂಡು, ಪುನಃ ತಮ್ಮ ಮನೆಯನ್ನು ಕುರಿತು ಹೊರಟರು. ಆ ವೇಳೆಗೆ ಸಾಯಂಕಾಲವಾಗಿತ್ತು ಉಡುಪಿಯಿಂದ ಪಾಜಕಕ್ಷೇತ್ರಕ್ಕೆ ಮಾರ್ಗವು ಅಷ್ಟು ಸುರಕ್ಷಿತವಾಗಿರಲಿಲ್ಲ ಗಿಡಗಂಟಿಗಳ ಕಾಡು ಮಾರ್ಗದಲ್ಲಿ ಬರಬೇಕಾಗಿತ್ತು ಆ ಪರಿವಾರದಲ್ಲಿ ಹೆಚ್ಚು ಮಂದಿ ಇದ್ದುದರಿಂದ ಅವರು ಭಯಪಡದೆ, ಕತ್ತಲಾಗಿದ್ದರೂ ಮುಂದೆ ಮುಂದೆ ನಡೆಯಸಾಗಿದರು. ಚಿಕ್ಕ ಮಗುವಿನೊಂದಿಗೆ ಅಶಕ್ತಳಾದ ವೇದವತಿಯನ್ನೂ, ಇತರ ಹೆಂಗಸರನ್ನೂ ನಡಸಿಕೊಂಡು ನಿಧಾನವಾಗಿ ಬರುವ ವೇಳೆಗೆ ನಟ್ಟಿರುಳಾಗುತ್ತಾ ಬಂತು. ಅಷ್ಟರಲ್ಲಿ ಅಲ್ಲೊಂದು ಪ್ರಮಾದ ಸಂಭವಿಸಿತು. ಪರಿವಾರದಲ್ಲಿದ್ದ ಒಬ್ಬನ ಮೇಲೆ ಒಂದು ಪಿಶಾಚಿಯ ಆವೇಶ ಬಂದು ಅವನು ಅಪಸ್ವರದಿಂದ ಕಿರಿಚಿಕೊಳ್ಳುತ್ತಾ, ರಕ್ತವನ್ನು ಕಾರಿ,—"ಎಲೋ ಬುದ್ಧಿಯಿಲ್ಲದ ಜನಗಳೇ, ಇಂತಹ ಅವೇಳೆಯಲ್ಲಿ ಈ ಸ್ಥಳಕ್ಕೆ ಏಕೆ ಬಂದಿರಿ? ನಿಮ್ಮೊಂದಿಗೆ ಸಾಕ್ಷಾದ್ವಾಯು ದೇವನ ಅವತಾರ ಮೂರ್ತಿಯೂ, ಪ್ರಪಂಚದ ಉದ್ಧಾರಕನೂ ಆದ ಈ

ಮಗುವು ಮಾತ್ರ ಇಲ್ಲದಿದ್ದರೆ, ಈ ದಿನ ನಿಮ್ಮೆಲ್ಲರ ಪರಿಣಾಮವೂ ನೆಟ್ಟಗಾಗುತ್ತಿರಲಿಲ್ಲ! ಹೋಗಿರಿ!" ಎಂದು ಹೇಳಿದನು ಆ ಮಾತನ್ನು ಕೇಳಿ ಎಲ್ಲರೂ ಭಯಗೊಂಡು ನಡುಗಿದರು; ಮತ್ತು ತಮ್ಮ ಅವಿವೇಕವನ್ನು ಕುರಿತು ತಮ್ಮನ್ನು ತಾವೆ ನಿಂದಿಸಿಕೊಂಡರು ಎಂತೂ ತಮ್ಮ ಮಗುವು ಸಾಮಾನ್ಯ ಮಗುವಲ್ಲವೆಂಬ ಸಂಗತಿಯೊಂದು ತಿಳಿದು ಅವರಲ್ಲಿ ಕೆಲವರನ್ನು ಸಂತುಷ್ಟಿಗೊಳಿಸಿತು —

ಮಧ್ಯಗೇಹಭಟ್ಟ ವೇದವತಿಯರು, ತೊಟ್ಟಿಲಲ್ಲಿ ಮಲಗಿದ್ದ ತಮ್ಮ ಕಂದನನ್ನು ನೋಡುವರು, ಪ್ರೇಮೋದ್ರೇಕದಿಂದ ಕೈಗೆತ್ತಿಕೊಳ್ಳುವರು. ಎದೆಯಮೇಲೆ ಮಲಗಿಸಿಕೊಳ್ಳುವರು; ಆ ಕಂದನ ಸ್ವಚ್ಛವಾದ-ಕಾಂತಿಯುಕ್ತವಾದ ಕಣ್ಣುಗಳ ತೇಜಸ್ಸನ್ನು ನೋಡಿ, ಆ ಮುದ್ದು ಮುಖದ ಅಂದವನ್ನು ಕಂಡು, ತುಂಬಿಯಂತೆ ಕಪ್ಪಾದ ಮುಂಗುರುಳುಗಳ ಸೌಂದರ್ಯಕ್ಕೆ ಮರುಳಾಗಿ, ತುಂಬುಗಲ್ಲಗಳ-ದುಂಡುದುಂಡಾದ ಕೈಕಾಲುಗಳ ಸೊಬಗಿಗೆ ಮೋಹಗೊಂಡು ಮನವಾರೆ ಮುದ್ದಿಡುವರು, ತಲೆಯನ್ನು ಆಘ್ರಾಣಿಸುವರು, ಎದೆಗಪ್ಪಿಕೊಳ್ಳುವರು ವಾಸುದೇವ ಕುಮಾರನು ತಾಯಿತಂದೆಗಳನ್ನು ಮಾತ್ರವಲ್ಲ-ನೋಡಿದವರನ್ನೆಲ್ಲ ಹೀಗೆಯೇ ಆಕರ್ಷಿಸುವನು. ಅವನ ನೋಟದ ತೇಜಸ್ವಿತೆಗೆ ವಶನಾಗದ ಮಾನವನೇ ಇರಲಿಲ್ಲ ಕಳಕಳನೆಂಬ ಆ ಹಸನ್ಮುಖವು, ಮಗುವಿನ ದೇಹ ಮತ್ತು ಮನಸ್ಸುಗಳ ಆರೋಗ್ಯಭಾಗ್ಯದ ಸುಸ್ಥಿತಿಯನ್ನು ಚೆನ್ನಾಗಿ ಪ್ರದರ್ಶಿಸುತ್ತಿದ್ದಿತು ಆ ಮುಖವನ್ನು ಕಂಡವರ ಮನಸ್ಸಿನಲ್ಲಿದ್ದ ಸಕಲ ವ್ಯಸನಗಳೂ ದೂರವಾಗುವುವು; ಸಕಲ ಕಲ್ಮಷಗಳೂ ಮರೆಯಾಗುವುವು ಅನುಭವಿಕರಾದ ವೃದ್ಧರು, ಆ ಕಂದನ ದೇಹದಲ್ಲಿ ವ್ಯಕ್ತವಾಗಿ ಕಾಣುತ್ತಿದ್ದ ಮಹಾಪುರುಷಯೋಗ್ಯವಾದ ಮೂವತ್ತೆರಡು ಸಾಮುದ್ರಿಕ ಲಕ್ಷಣಗಳನ್ನೂ ಕಂಡು ಪರಮಾನಂದಗೊಂಡು, "ನಾವೂ ಸಹ ನೂರಾರು ಮಕ್ಕಳನ್ನು ನೋಡಿದ್ದೇವೆ ಆದರೆ ಇಂತಹ ದೈವಿಕ ಮಗುವನ್ನು ಎಲ್ಲೂ ನೋಡಲಿಲ್ಲ" ಎಂದು ನುಡಿಯುವರು.

ಆ ಚಿಕ್ಕ ವಯಸ್ಸಿನಲ್ಲೇ, ವಾಸುದೇವನಿಗಿದ್ದ ದೇಹಸಾಮರ್ಥ್ಯತೆಯನ್ನು ಕುರಿತು ಹೇಳಲ್ಪಟ್ಟ ಒಂದು ಕಥೆಯು ಅತಿ ಕೌತುಕವಾಗಿದೆ ಒಂದಾನೊಂದು ದಿನ ವೇದವತಿಯು, ಇನ್ನೂ ಒಂದು ವರ್ಷ ಪ್ರಾಯದ ಒಳಗೇ ಇದ್ದ

ವಾಸುದೇವನನ್ನು, ತನ್ನ ಮಗಳ ಕೈಯಲ್ಲಿ ಕೊಟ್ಟು, ಎಲ್ಲೋ ಪಕ್ಕದ ಮನೆಗೆ ಬಂದಾನೊಂದು ಕೆಲಸಕ್ಕಾಗಿ ನಡೆದಳು. ಆಕೆಯು ಹೊರಟು ನಡೆದು ಕಣ್ಮರೆಯಾದೊಡನೆಯೇ ವಾಸುದೇವನು ಅಳಲು ಆರಂಭಿಸಿದನು. ಬರುಬರುತ್ತಾ ಅಳುವು ಅತಿಶಯವಾಯಿತು. ಆ ಹುಡುಗಿಯು ಎಷ್ಟು ಬಗೆಯಿಂದ ಸಮಾಧಾನಿಸಲು ಯತ್ನಿಸಿದರೂ ಏನೂ ಪ್ರಯೋಜನವಾಗಲಿಲ್ಲ. ಆಗ ಯಾವ ಮಾರ್ಗವನ್ನೂ ಕಾಣದ, ಅವಳು ಬೇಸತ್ತು, ಅವನನ್ನು ಎತ್ತಿಕೊಂಡೊಯ್ದು ಬೇಯಿಸಿ ಇಟ್ಟಿದ್ದ ಒಂದು ಹುರುಳಿಯ ಬಟ್ಟಲಿನ ಮುಂದೆ ಕೂರಿಸಿದಳು. ವಾಸುದೇವನು ಅತಿಶಯ ಹಸಿವೆಯಿಂದಲೋ ಎಂಬಂತೆ ಅದನ್ನು ಎರಡು ಕೈಗಳಲ್ಲೂ ಎತ್ತಿ ತಿನ್ನಲು ಆರಂಭಿಸಿದನು. ಅದು ಪೂರ್ತಿಯಾಗಿ ಮುಗಿಯುವವರೆಗೆ ಅದನ್ನು ಬಿಟ್ಟು ಈಚೆಗೆ ಬರಲೊಲ್ಲದಾದನು! ಈ ಬಗೆಯ ದಿವ್ಯಭೋಜನವು ಮುಗಿದ ಸ್ವಲ್ಪ ಹೊತ್ತಿನೊಳಗಾಗಿ, ತಾಯಿಯು ಮನೆಗೆ ಬಂದು, ನಡೆದ ಸಂಗತಿಯೆಲ್ಲವನ್ನೂ ಮಗಳಿಂದ ತಿಳಿದು ಅಂತಹ ತಿಳಿಗೇಡಿತನಕ್ಕಾಗಿ ಅವಳನ್ನೂ ಗದರಿಸಿ, ತನ್ನನ್ನೂ ಅನೇಕವಾಗಿ ಹಳಿದುಕೊಂಡು ಮಗುವಿಗೆ ಏನಪಾಯವುಂಟಾಗುವುದೋ ಎಂದು ಬಹು ಗಾಬರಿಯಾಗಿದ್ದಳು. ಆದರೆ ಮಗುವು ಯಾವ ತೊಂದರೆಯೂ ಇಲ್ಲದೆ ನಗುಮುಖದಿಂದಲೂ, ಸಂಪೂರ್ಣಾರೋಗ್ಯದಿಂದಲೂ, ಏನೊಂದು ಸಂಗತಿಯೂ ನಡೆಯದಿದ್ದಂತೆಯೇ ಸಂತೋಷವಾಗಿ ಆಡಿಕೊಂಡು ಇದ್ದುಬಿಟ್ಟಿತು. ಈ ಆಶ್ಚರ್ಯ ವಾರ್ತೆಯು ಒಡನೆ ಒಬ್ಬರಿಂದ ಒಬ್ಬರಿಗೆ ಹಬ್ಬಿ ಎಲ್ಲರಿಗೂ ಪರಮಾಶ್ಚರ್ಯವನ್ನೂ, ಆ ಮಗುವಿನ ವಿಷಯದಲ್ಲಿ, ಅಸಾಮಾನ್ಯವಾದ ಅಭಿಪ್ರಾಯವನ್ನೂ ಉಂಟುಮಾಡಿತು.

ವಾಸುದೇವನು ತನ್ನ ತಾಯಿತಂದೆಗಳ ಮತ್ತು ಅಕ್ಕನ ಕೈಬೆರಳುಗಳನ್ನು ಹಿಡಿದುಕೊಂಡು ನಡೆದಾಡಲು ಆರಂಭಿಸಿದನು. ಆ ಸಂದರ್ಭದಲ್ಲೇ ಒಂದು ದಿನ ಪ್ರಾತಃಕಾಲ ಯಾರೂ ಏಳದ ಮುಂಚೆಯೇ ಎದ್ದು, ಕಾಡಿಗೆ ಮೇಯಲು ಹೋಗುತ್ತಿದ್ದ, ಒಂದು ಎತ್ತಿನ ಬಾಲವನ್ನು ಹಿಡಿದುಕೊಂಡು ಹೊರಟು ನಡೆದು ಬಿಟ್ಟನು. ಬೆಳಗಾಯಿತು. ಮಗುವು ಹಾಸಿಗೆಯಲ್ಲಿಲ್ಲ! ತೊಟ್ಟಿಲಲ್ಲಿಲ್ಲ! ಮನೆಯ ಹಿತ್ತಿಲು ಮುಂಚೆಗಳಲ್ಲಿಲ್ಲ! ಎಲ್ಲೂ ಇಲ್ಲ! ತಾಯಿತಂದೆಗಳು ಮುಗಿಲೇ ಕಳಚಿ ಬಿದ್ದಂತೆ ಯೋಚನಾಪರರಾದರು. ಮಗುವು

ಎಲ್ಲಿಂದು ಯಾರಿಗೂ ತಿಳಿಯದು, ಆ ಸಂಗತಿಯನ್ನು ಕೇಳಿದವರೆಲ್ಲರೂ ಬಗೆಬಗೆಯ ಅಭಿಪ್ರಾಯಗಳನ್ನು ಕೊಡುವರು. ಒಬ್ಬೊಬ್ಬರೂ ತಮತಮಗೆ ಇಷ್ಟ ಬಂದಕಡೆಗೆ ಹುಡುಕಲು ನಡೆದರು. ಆದರೆ ಏನೂ ಪ್ರಯೋಜನವಾಗಲಿಲ್ಲ. ಕೊನೆಗೆ ಆ ದಿನ ಸಾಯಂಕಾಲ ದನಗಳು ಬರುವ ವೇಳೆಯಲ್ಲಿ, ಅದೇ ಎತ್ತಿನ ಬಾಲಕ್ಕೇ ಇಳಿಬಿದ್ದುಕೊಂಡು ವಾಸುದೇವನು, ಬಳಲದೆ, ಬಾಡದೆ, ಅಳದೆ, ನಗುಮುಖದಿಂದಲೇ ಮಂದೆಯೊಂದಿಗೆ ಬಂದನು. ಅದನ್ನು ಕಂಡ ವೇದವತಿಯು, ಒಡನೆ ಅವನನ್ನು ಎತ್ತಿ ಎದೆಗವುಚಿಕೊಂಡಳು. ರಕ್ಷೆಗಳನ್ನಿಟ್ಟಳು, ಮೊಲೆಯೂಡಿ ಅಪ್ಪಿ-ಆದರಿಸಿದಳು. ಎಲ್ಲರೂ ಭಯ ಆಶ್ಚರ್ಯಗಳಿಂದ ಬಹು ಬಗೆಯಾಗಿ ಹಲುಬಿಕೊಂಡು ಕೊನೆಗೆ ಸಮಾಧಾನಗೊಂಡರು.

ತೇಜಸ್ವಿಯಾದ ವಾಸುದೇವನು, ಹೀಗಾಗ ಇಂತಹ ಆಶ್ಚರ್ಯಕಾರ್ಯಗಳನ್ನು ನಡಯಿಸಿ ಎಲ್ಲರನ್ನೂ ಬೆರಗಾಗಿಸುವನು. ಮಗುವು ಇನ್ನೂ ಮೂರು ನಾಲ್ಕು ವರ್ಷಗಳ ಪ್ರಾಯದಲ್ಲಿರುವಾಗಲೇ ಒಂದು ಮಹದಾಶ್ಚರ್ಯದ ಸಂಗತಿಯು ನಡೆಯಿತು. ಒಂದಾನೊಂದು ದಿನ ಮಧ್ಯಗೇಹಭಟ್ಟನಿಗೆ ಸಾಲ ಕೊಟ್ಟಿದ್ದ ಸಾಹುಕಾರನೊಬ್ಬನು, ಮನೆಗೆ ಬಂದು ತನ್ನ ಹಣದ ವಿಷಯದಲ್ಲಿ ಬಹು ಕಠಿಣವಾಗಿ ತಗಾದೆ ಮಾಡುತ್ತಾ, ಆ ದಿನವೇ ಕೊಟ್ಟುತೀರಬೇಕೆಂದೂ, ಇಲ್ಲದಿದ್ದರೆ ತಾನು ಆ ಸ್ಥಳವನ್ನು ಬಿಟ್ಟು ಕದಲುವುದಿಲ್ಲವೆಂದೂ ಹಟಹಿಡಿದು ಬಾಗಿಲಲ್ಲಿ ಕುಳಿತುಬಿಟ್ಟನು. ಭಟ್ಟನು ಏನು ಮಾಡಲೂ ತೋರದೆ, ಹಿಂದು ಮುಂದು ಕದಲಲೂ ಆಸ್ಪದವಿಲ್ಲದಂತಿರಲು ಸುಮ್ಮನೆ ಕುಳಿತುಬಿಟ್ಟಿದ್ದನು. ಅಷ್ಟರಲ್ಲಿ ವಾಸುದೇವನು ಅಲ್ಲಿಗೆ ಬಂದು, ತಂದೆಯ ಕುತ್ತಿಗೆಯ ಸುತ್ತಲೂ ಕೈಗಳನ್ನು ಹಾಕಿಕೊಂಡು, ತನ್ನ ನಿಷ್ಕಲ್ಮಷತೆಯಿಂದ ಆತನನ್ನು ಕುರಿತು "ಅಪ್ಪಾ, ಊಟಕ್ಕೆ ಬಾ, ಹೊತ್ತಾಗಿದೆ, ಹಸಿವಾಗುತ್ತದೆ" ಎಂದು ಪೀಡಿಸತೊಡಗಿದನು. ತಂದೆಯು ನೀನು ಹೋಗಿ ಊಟ ಮಾಡೆಂದರೂ ಒಪ್ಪಲಿಲ್ಲ. ಮತ್ತಾವ ಸಮಾಧಾನವೂ ಅವನನ್ನು ಅಲ್ಲಿಂದ ಹೊರಡಿಸಲು ಸಾಧ್ಯವಾಗದಾಯಿತು. ಕೊನೆಗೆ ಭಟ್ಟನು, "ಮಗುವೇ ನಾನು ಈತನಲ್ಲಿ ಎತ್ತನ್ನು ಕೊಂಡುದಕ್ಕಾಗಿ ದುಡ್ಡು ಕೊಡಬೇಕು. ಈಗಲೇ ಕೊಡಬೇಕೆಂದು ಈತನು ಕುಳಿತಿದ್ದಾನೆ. ಸದ್ಯಃ ನನ್ನಲ್ಲಿ ದುಡ್ಡಿಲ್ಲ. ಈತನು ಕುಳಿತಿರುವಾಗ ಈತನನ್ನು ಬಿಟ್ಟು ನಾನು ಬರುವಂತಿಲ್ಲ" ಎಂದನು. ತನ್ನ ಈ ವ್ಯವಹಾರ ವೃತ್ತಾಂತ

ವನ್ನು ಹೇಳಿದರೆ ಮಗುವಿಗೆ ತಿಳಿಯುವುದೆ ಇಲ್ಲವೆ ಎಂಬುದನ್ನು ಕೂಡ ಗಮನಿಸದೆ, ಎಂತೂ ಭಟ್ಟನು ತನ್ನ ಸ್ಥಿತಿಯನ್ನು ವಾಸುದೇವನದುಬಗೆ ಹೇಳಿಬಿಟ್ಟನು.

ವಾಸುದೇವನು ಒಡನೆ ತಂದೆಯನ್ನು ಬಿಟ್ಟು, ಮನೆಯ [illegible] ತಿರುಗಿ ನಡೆದು, ಆ ಸಾಹುಕಾರನನ್ನು ತನ್ನೊಂದಿಗೆ ಬರುವಂತೆ ಕರೆದನು. ಆ ಮಗುವಿನ ನೋಟಕ್ಕೇ ಬದ್ಧನಾದಂತಾಗಿ ಸಾಹುಕಾರನೂ ಅವನನ್ನು ಹಿಂಬಾಲಿಸಿದನು. ಒಡನೆ ವಾಸುದೇವನು ಅವನನ್ನು ಈಗಿನ ವಾಸುದೇವ ತೀರ್ಥವೆಂಬ ಕೊಳದ ಬಳಿಗೆ ಕರೆದೊಯ್ದು, ಅಲ್ಲೇ ಮರದ ಕೆಳಗೆ ಉದುರಿದ್ದ ಹುಣಸೆಯ ಬಿತ್ತುಗಳನ್ನು ಆರಿಸಿ ತುಂಬಿಕೊಂಡು ತನ್ನ ಪುಟ್ಟ ಬೊಗಸೆಯಿಂದ ಅವನ ಬೊಗಸೆಗೆ ಸುರಿದನು. ಮೊದಲು, ಸಾಹುಕಾರನು ಮಗುವು ಕೇವಲ ಆಟಕ್ಕಾಗಿ ಹಾಗೆ ಮಾಡುತ್ತಿರುವುದೆಂದು ತಿಳಿದಿದ್ದನು. ಆದರೆ ಹಾಗಾಗಲಿಲ್ಲ! ಸ್ವಲ್ಪ ಹೊತ್ತಿನಲ್ಲೇ ಆ ಬಿತ್ತುಗಳು ಕಾಣಿಸದೆ ಅವನ ಬೊಗಸೆಯಲ್ಲಿ ಸಾಲಕ್ಕಾಗಿ ಪಾವತಿಯಾಗಬೇಕಾಗಿದ್ದಷ್ಟು ಹಣವು ಕಾಣಿಸಿತು. ಆಗಲಾ ಸಾಹುಕಾರನು ಮಹದಾಶ್ಚರ್ಯಭರಿತನಾಗಿ, ಮಧ್ಯಗೇಹಭಟ್ಟನಲ್ಲಿಗೆ ನಡೆದು,—"ನಿಮ್ಮ ಈ ಕುಮಾರರು ಸಾಲವನ್ನು ಕೊಟ್ಟರು. ನೀವು ಋಣಮುಕ್ತರಾದಿರಿ. ನಾನಿತ್ತ ತೊಂದರೆಯನ್ನು ಕ್ಷಮಿಸಿರಿ" ಎಂದು ನುಡಿದು ಹೊರಟುಹೋದನು.

ಮತ್ತೊಂದು ದಿನ ವೇದವತಿಯು ತನ್ನ ಬಂಧುಗಳ ಮನೆಗೆ ವಿವಾಹಕ್ಕಾಗಿ ಹೋಗಿ, ಅಲ್ಲಿಯ ಉತ್ಸವ ವಿಜೃಂಭಣೆಗಳಲ್ಲಿ ಮೈಮರೆತಿರಲು, ವಾಸುದೇವನು ಹೇಗೋ ತಪ್ಪಿಸಿಕೊಂಡು ಹೊರಟು ಉಡುಪಿಯ ಮಾರ್ಗವನ್ನು ಹಿಡಿದನು. ದಾರಿಯಲ್ಲಿ ಯಾರು ಪ್ರಶ್ನಿಸಿದರೂ ಆ ಬಾಲಕನು ಉತ್ತರಕೊಡದೆ, ಕಾಡುದಾರಿಯನ್ನು ಹಿಡಿದು, ಹತ್ತಿರದಲ್ಲಿದ್ದ ವಿಷ್ಣು ದೇವಾಲಯದಲ್ಲಿ ಸ್ವಾಮಿಯನ್ನು ದರ್ಶನಮಾಡಿ, ಅಲ್ಲಿಂದ ಉಡುಪಿಗೆ ನಡೆದು, ಅಲ್ಲೂ ದೇವರ ದರ್ಶನ ಮಾಡಿದನು. ಇತ್ತ ಮದುವೆಯ ಗಲಾಟೆಯು ಸ್ವಲ್ಪ ಕಡಮೆಯಾಗಲು ವೇದವತಿಯು ಮಗುವನ್ನು ಜ್ಞಾಪಿಸಿಕೊಂಡು, ಹುಡುಕತೊಡಗಿದಳು. ಮದುವೆಯ ಮನೆ-ಚಪ್ಪರ-ನೆರೆಹೊರೆಗಳಲ್ಲಿ ಎಲ್ಲೂ ಕಾಣಲಿಲ್ಲ. ಭಟ್ಟನೂ ಬೀದಿಬೀದಿಗಳಲ್ಲಿ ಹುಡುಕತೊಡಗಿದನು. ಎಲ್ಲೂ ಇಲ್ಲ! ಕೊನೆಗೆ ಉಡುಪಿ

ಯಿಂದ ಬರುತ್ತಿದ್ದ ಒಂದು ಗುಂಪಿನವರ ಬಳಿ, ಅಕಸ್ಮಾತ್ತಾಗಿ ವಾಸುದೇವನು ಗೋಚರನಾದನು. ತಂದೆಯು ಮಹದಾನಂದದಿಂದ ಮಗುವನ್ನು ಅಪ್ಪಿಕೊಂಡು, "ಮಗೂ ಎಲ್ಲಿ ಹೋಗಿದ್ದೆ? ಯಾರ ಜೊತೆಯಲ್ಲಿ ಹೋಗಿದ್ದೆಯಪ್ಪಾ!" ಎಂದು ಕೇಳಲು, ವಾಸುದೇವನು ಒಡನೆಯೇ, "ನಾನು ಅಡವಿಯಲ್ಲಿದ್ದ ದೇವರನ್ನು ನೋಡಲು ಹೋಗಿದ್ದೆ. ಆಗಲೂ, ಅಲ್ಲಿಂದ ಉಡುಪಿಗೆ ಹೋದಾಗಲೂ ಶ್ರೀಹರಿಯೇ ನನ್ನ ಜೊತೆಯಲ್ಲಿದ್ದನು" ಎಂದು ಉತ್ತರಕೊಟ್ಟನು. ವಾಸುದೇವನ ಆ ಮಾತು ಭಟ್ಟನಿಗೂ, ಅಲ್ಲಿ ನೆರೆದಿದ್ದ ಜನಗಳಿಗೂ ಪರಮಾಶ್ಚರ್ಯವನ್ನುಂಟುಮಾಡಿತು. ಅವರು ಅಷ್ಟು ಚಿಕ್ಕ ಮಗುವಿಗೆ ಭಗವಂತನಲ್ಲಿದ್ದ ಭಕ್ತಿ-ಶ್ರದ್ಧೆ-ನಂಬಿಕೆಗಳನ್ನು ಕಂಡು ಅದ್ಭುತಪಟ್ಟರು.

ಹೀಗೆ ಅವತಾರ ಪುರುಷರ ಜೀವಿತದಲ್ಲಿ ತೋರಿಬರುತ್ತಿರುವ ಅನೇಕ ಅದ್ಭುತ ಕಾರ್ಯಗಳು, ನಮ್ಮ ಕಥಾನಾಯಕರ ಬಾಲ್ಯದಲ್ಲೂ ನಡೆದುವು. ಪ್ರಪಂಚದ ಎಲ್ಲಾ ಮತಗಳ, ಎಲ್ಲಾ ಗುರುಗಳ ಚರಿತ್ರೆಯಲ್ಲೂ ಈ ಬಗೆಯ ಕೆಲಕೆಲವು ಆಶ್ಚರ್ಯಕರವಾದ ಅಮಾನುಷ ಕಾರ್ಯಗಳು ನಡೆದೇ ಇರುವುವು. ಆಯಾ ಮತಸ್ಥರು ಅವುಗಳನ್ನು ಪ್ರೀತಿವಿಶ್ವಾಸಗಳಿಂದ ನಂಬಿ, ತನ್ಮೂಲಕ ತಮ್ಮ ಆಚಾರ್ಯ ಪುರುಷರಲ್ಲಿ ಭಕ್ತಿಶ್ರದ್ಧಾಭಿಮಾನಗಳಿಂದ ನಡೆದುಕೊಳ್ಳಲು ಅವು ಬಹಳ ಸಹಾಯ ಮಾಡುವುವು.

ಅಧ್ಯಾಯ ೪ "ಉಪನಯನ-ವಿದ್ಯಾಭ್ಯಾಸ"

ಸೂರ್ಯೋದಯಕ್ಕೆ ಮುಂಚೆ ಅರುಣೋದಯವೂ ಹಗಲಿಗೆ ಮುಂಚೆ ಬೆಳಕೂ ಬರುವುದು ಹೇಗೆ ಸ್ವಾಭಾವಿಕವೋ, ಹಾಗೆಯೇ ಮನುಷ್ಯನ ವಯಸ್ಸಿನಲ್ಲೂ ಲೌಕಿಕ ಜೀವಿತದಲ್ಲೂ ಅವನಿಂದ ನಡೆಯಿಸಲ್ಪಡುವ ಕಾರ್ಯಗಳಿಗೆ ಸೂಚನೆಯು ಬಾಲ್ಯದಲ್ಲೇ ತೋರಿಬರುವುದು. ಬಾಲ್ಯದಲ್ಲಿನ ಆಟಪಾಟಗಳಲ್ಲಿ ಅವನು ತೋರಿಸುವ ಸದ್ಗುಣ ದುರ್ಗುಣಗಳೇ ಅವನು ದೊಡ್ಡವನಾದ ಮೇಲೂ ಸಂಪೂರ್ಣ ರೀತಿಯಿಂದ ವ್ಯಕ್ತವಾಗುವುವು. ಚಿಕ್ಕಂದಿನಿಂದಲೂ

ಸಣ್ಣ ಪುಟ್ಟ ಕಳ್ಳತನಗಳಲ್ಲಿ ತೊಡಗಿದ್ದವನು ವಯಸ್ಸಿನಲ್ಲಿ ದೊಡ್ಡ ಕಳ್ಳತನ ದರೋಡೆಗಳಲ್ಲಿ ನಿಸ್ಸೀಮನಾಗುವನು ಅಲ್ಪ ವಿಷಯಗಳಿಗೆ ಸುಳ್ಳು ಹೇಳುವ ಬಾಲಕನು ಮುಂದೆ ಸುಳ್ಳು ಸಾಕ್ಷ್ಯ-ಕಳ್ಳ ವ್ಯಾಜ್ಯಗಳ ನೆಲವೀಡಾಗುವನು. ಹಾಗಯೇ ಸತ್ಯ-ಧರ್ಮ ನ್ಯಾಯಗಳನ್ನೂ ವಿದ್ಯಾಪೇಕ್ಷೆ ದೈವಭಕ್ತಿ ದಯೆ-ದಾಕ್ಷಿಣ್ಯಗಳನ್ನೂ ಚಿಕ್ಕಂದಿನಿಂದಲೇ ತೋರಿಸುತ್ತಿದ್ದವರಿಂದಲೇ ಪ್ರಪಂಚದಲ್ಲಿ ಮುಂದೆ ಅನೇಕಾನೇಕ ಮಹತ್ವದ ಪುಣ್ಯಕಾರ್ಯಗಳ ನಡೆಯುವುವು ಅದುದರಿಂದ ಚಿಕ್ಕಂದಿನಲ್ಲಿ ಹುಡುಗರ ಮನಸ್ಸು ಯಾವ ಕಡೆಗೆ ತಿರುಗಿರುವುದೆಂಬುದನ್ನು ಕಂಡು ಹಿಡಿದು, ಸುಳ್ಳು-ಕಳ್ಳತನ-ನೀಚಭಾವ ಅಲ್ಪತನ ಅಸೂಯ ಮುಂತಾದುವುಗಳಿದ್ದರೆ, ಅವುಗಳನ್ನು ಅಲ್ಲಲ್ಲೇ ಖಂಡಿಸಿ, ನೀಗಿಸಿದರೆ, ಮುಂದೆ ಅವರು ಪರೋಪಕಾರಿಗಳಾಗದಿದ್ದರೂ ತಪ್ಪು ಮಟ್ಟಿಗಾದರೂ ಸುರಕ್ಷಿತರಾಗಿರುವರು ಆಗ ಅಲ್ಪವಾಗಿ ಕಂಡು ಬಂದ ಸದ್ಗುಣಗಳನ್ನು ಪ್ರೋತ್ಸಾಹಗೊಳಿಸಿ, ಬೆಳೆದು ಅಭಿವೃದ್ಧಿಯಾಗಲು ಅವಕಾಶವಿತ್ತರೆ, ಮುಂದೆ ಅವರಿಂದ ಒಂದಕ್ಕೆ ಹತ್ತು-ನೂರರಷ್ಟು ಸತ್ಕಾರ್ಯಗಳು ನಡೆಯುವುವು.

ನಮ್ಮ ಚಿಕ್ಕ ವಾಸುದೇವನು, ತನ್ನ ಸಹವಾಸಿಗಳೊಂದಿಗೆ ಆಟಪಾಟಗಳನ್ನಾಡುವುದರಲ್ಲಿ ತೋರಿಸುತ್ತಿದ್ದ ಚಟುವಟಿಕೆ-ಸಾಹಸ ಋಜುಭಾವಗಳನ್ನು, ನೋಡಿದವರು ಇವನು ಮುಂದೆ ಮಹಾಯಶಸ್ವಿಯಾಗುವನೆಂದುಕೊಳ್ಳುವರು ಹಿಂದೆ ಹೇಳಿದಂತೆ ಒಂದು ಸಾರಿ ಉಡುಪಿಗೆ ಹೋಗಿ ಬಂದಂದಿನಿಂದ ಅವನು ದೇವಸ್ಥಾನಗಳನ್ನು ಸಂದರ್ಶಿಸುವುದನ್ನಾಗಲೀ ಅಥವಾ ಏಕಾಂತ ಸ್ಥಳಗಳಲ್ಲ ಒಂಟಿಯಾಗಿ ಇರುವುದನ್ನಾಗಲೀ ಹೆಚ್ಚಾಗಿ ಅಪೇಕ್ಷಿಸುತ್ತಿದ್ದನು ಪಕ್ಕದಲ್ಲಿದ್ದ ವಿಮಾನಗಿರಿಯ ಕಲ್ಲುಬಂಡೆಗಳ ಮೇಲೆ ಒಬ್ಬನೇ ಕುಳಿತು, ಸುತ್ತಲಿನ ಪ್ರಕೃತಿಯನ್ನು ಬಿಟ್ಟ ಕಣ್ಣುಗಳಿಂದ ನೋಡುತ್ತಾ ತನ್ಮಯನಾಗಿದ್ದುಬಿಡುವನು. ಬೆಟ್ಟದ ಮೇಲಿದ್ದ ದುರ್ಗಾದೇವಿಯ ಗುಡಿಯಲ್ಲೇ ಎಷ್ಟೋ ಹೊತ್ತು ಏಕಾಂಗಿಯಾಗಿ ಕುಳಿತಿದ್ದು ಕಾಲಕಳೆಯುವನು. ಭಕ್ತಿಭಾವದ ಮೊಳಕೆಯು ಈ ಚಿಕ್ಕತನದಲ್ಲೇ ಅವನಲ್ಲಿ ತೋರಿಬಂದಿತು. ಆಟವಾಡುತ್ತಾಡುತ್ತ ಮನೆಯನ್ನೂ ಸಹವಾಸಿಗಳನ್ನೂ ಬಿಟ್ಟು ನೇರವಾಗಿ ದೇವಸ್ಥಾನಕ್ಕೆ ನಡೆದುಬಿಡುವನು ದುರ್ಗಿಯೇ ಅವನೊಂದಿಗೆ ಆಟವಾಡಲು ಸಾಕಾದ ಜೊತೆಯಾಗಿದ್ದಳು

ಮಗನಿಗೆ ಮೂರು ವರ್ಷಗಳು ತುಂಬುತ್ತಿರಲು, ಮಧ್ಯಗೇಹಭಟ್ಟನು ಒಂದು ಶುಭಮುಹೂರ್ತದಲ್ಲಿ ಅವನಿಗೆ ಅಕ್ಷರಾಭ್ಯಾಸ ಕರ್ಮವನ್ನು ನೆರವೇರಿಸಲು ನಿಶ್ಚಯಿಸಿದನು. ಆದಿನ ಬಾಲಕನಿಗೆ ಮಂಗಳಸ್ನಾನವನ್ನಾಡಿಸಿ, ವಿಧಿಯುಕ್ತವಾಗಿ ನಡೆಯಬೇಕಾದ ಕ್ರಿಯೆಗಳನ್ನೆಲ್ಲಾ ನಡೆಯಿಸಿ, ಪದ್ಧತಿಯಂತೆ, ಸಂಸ್ಕೃತ ವರ್ಣಮಾಲೆಯ ಶ್ರೀ ಓ ನಾ ಮ ಗಳನ್ನು ತಿದ್ದಿಹಾಕಿದರು. ಬಾಲಕನ ಪ್ರಜ್ಞಾಗೃಹದ ಕವಾಟವು ಈ ಅಕ್ಷರಾಭ್ಯಾಸವೆಂಬ ಕ್ರಿಯೆಯಿಂದ ತೆರೆಯಲ್ಪಡುವುದನ್ನು ಮಾತ್ರ ಕಾದಿದ್ದಂತೆ ತೋರಿತು! ಮುಂದೆ ದಿನದಿನಕ್ಕೆ-ಕ್ಷಣಕ್ಷಣಕ್ಕೆ ಆಶ್ಚರ್ಯಕರವಾದ ಅಭಿವೃದ್ಧಿಯು ನಡೆಯಲಾಗಿತು. ಮಧ್ಯಗೇಹಭಟ್ಟನು ಬರೆದು ಹೇಳಿಕೊಟ್ಟ ಅಕ್ಷರಗಳನ್ನು ವಾಸುದೇವನು ಪುನಃ ತಿದ್ದಿ ಹಾಕದೆ ಬಾಲಕನು, 'ಇದೇನು? ಆಗನ್ನು ಆಗಲೇ ಕಲಿತುದಾಯಿತಲ್ಲ! ಪುನಃ ಅದನ್ನೇ ಏಕೆ ಬರೆಯಬೇಕು?'' ಎನ್ನುವನು. ತಂದೆಯು ''ಅದು ಚೆನ್ನಾಗಿ ಬರಲಿ'' ಎಂದರೆ, ಬಾಲಕನು ನಾನಕಾಶವಿಲ್ಲದೆ ಅದನು ಸಂಪೂರ್ಣವಾಗಿ-ಸ್ವಲ್ಪವೂ ತಪ್ಪಿಲ್ಲದಂತೆ ಬರೆದು ತೋರಿಸಿ ತನ್ನ ತಂದೆಯನ್ನೂ, ಎದುರಿಗಿದ್ದ ಇತರರನ್ನೂ ಆಶ್ಚರ್ಯಮಗ್ನರನ್ನಾಗಿ ಮಾಡಿಬಿಡುವನು. ಹೀಗಾಗಿ, ಬಹು ಸ್ವಲ್ಪ ದಿನಗಳಲ್ಲೇ ಯಾವ ಪುಸ್ತಕವನ್ನು ಕೊಟ್ಟರೂ ತಡಬಡೆಯಿಲ್ಲದೆ, ಸ್ಪಷ್ಟವಾಗಿ ಓದುವಂತಹ ಸಾಮರ್ಥ್ಯಶಾಲಿಯಾದನು. ಜೊತೆಯ ಯಾವ ಬಾಲಕನೂ ಅವನನ್ನು ಸರಿಗಟ್ಟಲಾರದಿದ್ದನು. ಇದನ್ನು ಕಂಡಭಟ್ಟನು, ವಾಸುದೇವನಿಗೆ ದೃಷ್ಟಿದೋಷ ಉಂಟಾಗಬಹುದೆಂದು ಅಂಜಿ, ತನ್ನ ಪುತ್ರನಿಗೆ ಯಾರ ಕಣ್ಣಿಗೂ ಬೀಳದಂತೆ ಏಕಾಂತದಲ್ಲೇ ಕಲಿಸುತ್ತಿದ್ದನು.

ಕೆಲದಿನಗಳಲ್ಲೇ ವಾಸುದೇವನು ತನ್ನ ತಾಯಿಯೊಂದಿಗೆ ಸಮೀಪದಲ್ಲೇ ಇದ್ದ ನಯಂಪಳ್ಳಿ ಎಂಬೊಂದು ಗ್ರಾಮಕ್ಕೆ ಬಂಧುಗಳ ಮನೆಗೆ ಹೋಗಬೇಕಾಯಿತು. ಅಲ್ಲಿದ್ದಾಗ ಒಂದುದಿನ ಬಾಲಕನು ತಾಯಿಯೊಂದಿಗೆ ಪುರಾಣವಾಗುತ್ತಿದ್ದ ಸ್ಥಳಕ್ಕೆ ಹೋಗಿದ್ದನು. ಶಿರಣನಟ್ಟನೆಂಬ ಒಬ್ಬಾತನೊಬ್ಬ ಬ್ರಾಹ್ಮಣನು, ಅಲ್ಲಿ ಪುರಾಣ ಹೇಳುತ್ತಿರಲು, ಅಲ್ಲಿಗೆ ಮುದ ಅನೇಕ ವಿದ್ವಾಂಸರೂ ಬ್ರಾಹ್ಮಣ ಮುತ್ತೈದೆಯರೂ ಇಕ್ಕಮುಸ್ತರನೆರೆದಿದ್ದರು. ಪುರಾಣವು ನಾಗಿರಲು, ಮಧ್ಯದಲ್ಲಿ ಶಿವಭಟ್ಟನು ಒಂದು ಪಂಡಿತ ಚಕದ ಅರ್ಥ ಹೇಳುವಲ್ಲಿ ಒಂದು ದೊಡ್ಡ ತಪ್ಪು ಮಾತನ್ನು ನುಡಿ ಗಿಯುವವನ್ನು ಎಲ್ಲರೊಂದಿಗೆ ಕೇಳು

ತ್ತಾ ಕುಳಿತಿದ್ದ ವಾಸುದೇವನು, ಒಡನೆಯೇ-ಬೇರೆಯವರು ಆ ತಪ್ಪು ಏನೆಂದು ತಿಳಿದುಕೊಳ್ಳುವುದಕ್ಕೆ ಮುಂಚೆಯೇ, ಬಹು ಸಮಂಜಸವೂ, ಆಗಿನ ಕಥಾಸಂದರ್ಭಕ್ಕೆ ಒಪ್ಪತಕ್ಕುದೂ ಆದ ಒಂದು ಮಾತನ್ನು ತಟ್ಟನೆ ನುಡಿದುಬಿಟ್ಟನು. ತಕ್ಷಣವೇ ಎಲ್ಲರ ದೃಷ್ಟಿಯೂ ಅವನ ಕಡೆಗೆ ತಿರುಗಿತು ಅನೇಕ ಮಂದಿ ವಿದ್ವಾಂಸರು ಸಹ, ಆ ನಾಲ್ಕು ವರ್ಷ ವಯಸ್ಕನಾದ ಬಾಲಕನು ನುಡಿದ ಆ ಮಾತಿನ ಅರ್ಥಸಾಮಂಜಸ್ಯಕ್ಕಾಗಿ ಅದ್ಭುತಪಟ್ಟು ಆನಂದಬಾಷ್ಪಗಳನ್ನು ಸುರಿಸಿದರು ಅನೇಕರು ತೇಜಸ್ವಿಯಾದ ವಾಸುದೇವನನ್ನು ದಯಾರ್ದ್ರದೃಷ್ಟಿಯಿಂದ ನೋಡಿ, ಅವನಮೇಲೆ ಭಗವದನುಗ್ರಹವುಂಟಾಗಲೆಂದು ಹರಸಿದರು ಮದುವೆಯ ಕೆಲಸಕಾರ್ಯಗಳು ತೀರಿದ ತರುವಾಯ ತಾಯಿಯೊಂದಿಗೆ, ರಾಜಕಕ್ಷೇತ್ರಕ್ಕೆ ನಡೆದ ವಾಸುದೇವನು, ತನ್ನ ತಂದೆಯೊಂದಿಗೆ ಶಿವಭಟ್ಟನು ಆ ಮಾತಿಗೆ ಹೇಳಿದ ಅರ್ಥವನ್ನೂ, ತಾನು ಹೇಳಿದ ಆರ್ಥವನ್ನೂ ತಿಳಿಸಿ ಯಾರದು ಸರಿಯೆಂದು ಕೇಳಿದನು! ಮಧ್ಯಗೇಹಭಟ್ಟನು, ತನ್ನ ಮಗನ ಪ್ರತಿಭೆಗಾಗಿ ಅದ್ಭುತಪಟ್ಟು, ಶಿವಭಟ್ಟನು ನಿಶ್ಚಯವಾಗಿಯೂ ಆ ಒಗೆಯ ಅರ್ಥ ಹೇಳಿ ಬಹು ದೊಡ್ಡ ತಪ್ಪು ಮಾಡಿದ್ದನೆಂದು ಹೇಳಿದನು

ಇಂತಹ ಇನ್ನೊಂದು ಸಂಗತಿಯು ರಾಜಕಕ್ಷೇತ್ರದಲ್ಲೇ ನಡೆಯಿತು ಮಧ್ಯಗೇಹಭಟ್ಟನೇ ದೊಡ್ಡದೊಂದು ಸಭೆಯಲ್ಲಿ ಪುರಾಣ ಹೇಳುತ್ತಿದ್ದಾಗ್ಗೆ 'ಲಿಕುಚ' ಎಂಬ ಮಾತಿಗೆ ಅರ್ಥತಿಳಿಯದಿದ್ದುದರಿಂದ, ಅದನ್ನು ಸರಿಯಾಗಿ ವಿವರಿಸಲಾರದೆ, ಆ ಪದವನ್ನು ಹಾಗೆಯೇ ಲೋಪಗೊಳಿಸಿ ಮುಂದ ನಡೆಸಿಹೋದನು. ಆದರೆ ಅಲ್ಲೇ ಕುಳಿತಿದ್ದ ವಾಸುದೇವನ ದೃಷ್ಟಿಗೆ ಆ ಲೋಪವು ಮರೆಯಾಗಲಿಲ್ಲ ಅವನು ತನ್ನ ವಿನಯವಿಧೇಯತೆಗಳು ಮೆರೆಯುವಂತೆ ಒಡನೆ ಅದರ ನಿಶ್ಚಯಾರ್ಥವನ್ನು ತಿಳಿಸಿದನು. ಆ ಸಂದರ್ಭದಲ್ಲಿನ ಅವನ ನಡತೆಯು, ಅಹಂಭಾವ ಸ್ವಪ್ರತಿಷ್ಠೆ, ಸ್ವಪಾಂಡಿತ್ಯಮುಂತಾದುವುಗಳನ್ನು ಪ್ರಕಟಿಸುವುದಾಗಿ [illegible] ನಮ್ರಭಾವ-ವಿನಯ-ಗುರುಹಿರಿಯರಲ್ಲಿ ತೋರಿಸಬೇಕಾದ ಗೌರ[illegible]ವ ಭಾಗದಲ್ಲೂ ಕುಂದನ್ನು ತಾರದಿದ್ದುದು ಆ ಸಭೆಯಲ್ಲಿದ್ದ [illegible] ಗುಗೊಳಿಸಿತು ಅಷ್ಟು ಚಿಕ್ಕ ವಯಸ್ಕನು, ಸಂಸ್ಕೃತವೇ [illegible]ಯವಾದ ಅಂತಹ ಗೂಢ ವಿಷಯವನ್ನೂ ಪಕ್ಕಿ ತೆ [illegible]ನ್ನು ಸಂಪಾದಿಸಿದ್ದುದನ್ನು ತಿಳಿದು ಎಲ್ಲ

ರೂ ಸ್ತಂಭಿತರಾದರು ಆದರೆ ಅಷ್ಟು ಚಿಕ್ಕತನದಲ್ಲಿ ಅಂತಹ ಪ್ರತಿಭೆಯೂ ಮೇಧಾಶಕ್ತಿಯೂ ಸಾಧ್ಯವೇ ಎಂದು ಕೆಲವರು ಸಂದೇಹಗೊಳ್ಳಬಹುದು. ಪಾಶ್ಚಾತ್ಯ ವಿಷಯಕವಾದ ಎಂತಹ ಅದ್ಭುತ-ಅಮಾನುಷ ಕಾರ್ಯವನ್ನಾದರೂ ನಿರ್ವಾದವಾಗಿ ಅಂಗೀಕರಿಸಿ ಒಪ್ಪಿಕೊಂಡು ಹೆಚ್ಚಳಪಡುವ ಕೆಲಮಂದಿಗೆ ನಮ್ಮವರಲ್ಲಿನ ಇಂತಹ ಪ್ರತಿಭಾವಂತರ ವಿಷಯವು ಸಂದೇಹಾಸ್ಪದವಾಗದಿರದು! ಆದರೂ ಅವರು ಪ್ರತಿಭಾಸ್ಪತ ವ್ಯಕ್ತಿಗಳು ಎಲ್ಲರಲ್ಲಿಯೂ ಇದ್ದರು, ಈಗಲೂ ಇರುವರು ಎಂಬುದನ್ನು ತಿಳಿಯಬೇಕಾಗಿದ್ದರೆ, ಥಾಮಸ್ ಬೇಬಿಂಗ್‌ಟನ್ ಮೆಕಾಲೆ, ಜಾನ್‌ಸ್ಟ್ಯುಯರ್ಟ್ ಮಿಲ್ ಮುಂತಾದ ಪಾಶ್ಚಾತ್ಯ ವಿದ್ಯಾಘನರ ಬಾಲ್ಯಜೀವಿತದಲ್ಲಿನ ಸಂಗತಿಗಳನ್ನು ನೋಡಿ, ಅಂತಹ ಮೇಧಾಶಕ್ತಿಯೂ ಅಮಾನುಷವಲ್ಲವೆಂಬುದನ್ನು ಮನಗಾಣಬಹುದು!

ಮಗುವಿಗೆ ಐದು ವರ್ಷಗಳು ತುಂಬದುವು ಮಧ್ಯಗೇಹಭಟ್ಟನು ಅವನ ಪ್ರಜ್ಞಾಸಾಮರ್ಥ್ಯಕ್ಕೆ ಅಚ್ಚರಿಪಟ್ಟು, ಶೀಘ್ರವಾಗಿ ಉಪನಯನ ಮಾಡಿ ಅವನಿಗೆ ವೇದಶಾಸ್ತ್ರಾದಿಗಳಲ್ಲಿ ಶಿಕ್ಷೆಯನ್ನು ಕೊಡಬೇಕೆಂದೆಣಿಸಿದನು ಬ್ರಾಹ್ಮಣ ಬಾಲಕರಿಗೆ ಸಾಮಾನ್ಯವಾಗಿ ಎಂಟನೆಯ ವಯಸ್ಸಿನಲ್ಲಿ ಈ ಕರ್ಮವು ನೆರವೇರಬೇಕಾದ ವಿಧಿಯಿದ್ದರೂ ತನ್ನ ಮಗನ ಬುದ್ಧಿಯು ಆವರೆಗೂ ಅನ್ಯತ್ರ ಹೋಗಲು ಅವಕಾಶಕೊಡಬಾರದೆಂದೂ, ಅದಕ್ಕೆ ಶೀಘ್ರವಾಗಿಯೇ ಯೋಗ್ಯ ಆಹಾರ ಕೊಡಬೇಕೆಂದೂ ಯೋಚಿಸಿ ಭಟ್ಟನು, ಅಷ್ಟು ಚಿಕ್ಕ ವಯಸ್ಸಿನಲ್ಲೇ ಉಪನಯನ ಮಾಡಲು ನಿಶ್ಚಯಿಸಿದನು. ಒಡನೆ ಅದಕ್ಕೆ ಆವಶ್ಯಕವಾದ ಸಕಲ ಸಲಕರಣೆಗಳೂ ಸಿದ್ಧಗೊಳಿಸಲ್ಪಟ್ಟುವು. ಮೌಂಜೀಬಂಧನ, ಉಪವೀತಧಾರಣ, ಬ್ರಹ್ಮೋಪದೇಶ, ಅಗ್ನಿಹೋತ್ರಾದಿ ಕಾರ್ಯಗಳಿಂದ ಕಳೆಗೊಂಡು ಆ ಮಹೋತ್ಸವವು ಪೂರ್ತಿಯಾಯಿತು ಮಧ್ಯಗೇಹಭಟ್ಟನು ಸ್ವತಃ ನಿಷ್ಠನಾದ ವೈದಿಕನು, ಮಗನು ತೀಕ್ಷ್ಣಮತಿಯು ಪ್ರತಿಭಾಶಾಲಿಯು, ಹೀಗಿರುವಲ್ಲಿ ಕೇಳುವುದೇನು? ಪುರೋಹಿತನ ಅಜ್ಞತೆಯಿಂದ ಎಡಹಿ ತಡವರಿಸಿ ಲೋಪಗೊಂಡು, ಎದ್ದು ಬಿದ್ದು ಸಾಗುತ್ತಾ, ಕಾಟಕ್ಕೆ ಆಯಿತೆನ್ನಿಸುವಂತಲ್ಲದ, ಪ್ರತಿಯೊಂದು ಕ್ರಿಯೆಯೂ, ಶ್ರದ್ಧಾಪೂರ್ವಕವಾಗಿ ಅರ್ಥವತ್ತಾಗಿ, ಸಾಂಗವಾಗಿ ನಡೆಯಿತು. ಬಾಲಕನು ನಾಲ್ಕಾರು ದಿನಗಳಲ್ಲೇ ತ್ರಿಕಾಲ ಸಂಧ್ಯಾವಂದನೆಯನ್ನೂ ಅಗ್ನಿಹೋತ್ರಾದಿಗಳನ್ನೂ ಕಲಿತು, ಬಹು ನಿಷ್ಠೆಯಿಂದ ತನ್ನ ಆಗಿನ ಆ ಬ್ರಹ್ಮಚ

ಯಾಶ್ರಮದ ಕರ್ತವ್ಯಗಳನ್ನು ಅಕ್ಷರಶಃ ಪಾಲಿಸುವಂತಾದನು. ಆ ಚಿಕ್ಕ ಬ್ರಹ್ಮಚಾರಿಯು ಈ ನೂತನಾಶ್ರಮಕ್ಕೆ ಒಪ್ಪುವ ದಿವ್ಯ ತೇಜಸ್ಸನ್ನೂ ಸ್ನಾನ-ಸಂಧ್ಯಾ-ಜಪ ಮುಂತಾದ ಕ್ರಿಯೆಗಳನ್ನು ಲೇಶಮಾತ್ರವೂ ಲೋಪವಿಲ್ಲದಂತ ನಡೆಯಿಸುವಲ್ಲಿ ಆ ಚಿಕ್ಕವನಿಗಿದ್ದ ಶ್ರದ್ಧೆ ಉತ್ಸಾಹಾದಿಗಳನೂ ಕಂಡವರು ಅವನ ಆ ಪವಿತ್ರ ದೇಹದಿಂದ-ಆ ಉಜ್ವಲ ಮುಖದಿಂದ ತಮ್ಮ ದೃಷ್ಟಿಯನ್ನು ಹಿಂದಕ್ಕೆ ತೆಗೆದುಕೊಳ್ಳಲಾರದೆ ಮಂತ್ರಬದ್ಧರೋ ಎಂಬಂತೆ ನಿಂತು ಬಿಡುತ್ತಿದ್ದರು.

ಉಪನಯನವಾದ ಕೆಲವು ದಿನಗಳೊಳಗಾಗಿಯೇ, ವಾಸುದೇವನು ಒಂದಾನೊಂದು ಅಪಾಯಕ್ಕೆ ಒಳಗಾದನು. ತನ್ನ ಒಡನಾಡಿಗಳೊಂದಿಗೆ ಆಡುತ್ತಾಡುತ್ತಾ, ಒಂದು ದಿನ ಅವನು ವಿಮಾನಗಿರಿಯ ಮೇಲಿದ್ದ ದುರ್ಗಾಲಯಕ್ಕೆ ಹೋಗುವ ದಾರಿಯಲ್ಲಿದ್ದ ಒಂದು ಪೊದೆಯ ಸಮೀಪಕ್ಕೆ ಬಂದನು. ಒಡನೆ ಅದರೊಳಗೆ ಅಡಗಿಕೊಂಡಿದ್ದ ಕಪ್ಪಾದ ಭಯಂಕರಾಕೃತಿಯ ಒಂದು ಘಟಸರ್ಪವು ಬುಸ್ಸೆಂದು ಹೊರಕ್ಕೆ ಬಂದು ಬಾಲಕನ ಮೇಲೆ ನುಗ್ಗಿ, ತನ್ನ ಬಿಚ್ಚಿ ಅಗಲಿಸಿದ ಹೆಡೆಯಿಂದ ಅವನನ್ನು ಅಪ್ಪಳಿಸಲು ಹವಣಿಸಿತು. ಆದರೆ ವಾಸುದೇವನು ಅದಕ್ಕೆ ಬೆದರಲಿಲ್ಲ. ಧೀರನಾದ ಆ ಬಾಲಕನು ಅಂತಹ ಅಪಾಯಕ್ಕೂ ಸಿದ್ಧನಾಗಿಯೇ ಇದ್ದನು. ಒಂದು ಹೆಜ್ಜೆ ಹಿಂದಕ್ಕೆ ಜರುಗಲಿಲ್ಲ. ಅಲ್ಲೇ ನಿಂತು, ಅದರ ಬಾಲವನ್ನು ಹಿಡಿದು, ತಿರುಗಿಸಿ ನೆಲಕ್ಕೆ ಬಡಿದು, ಕಾಲ ಹೆಬ್ಬೆರಳಿನಿಂದ ಅದರ ಹೆಡೆಯನ್ನು ತುಳಿದು ಉಜ್ಜಿ-ತಿರುಚಿ ಅದನು ಕೊಂದುಬಿಟ್ಟನು. ಈ ಸಂದರ್ಭವು ಅಭಿಮಾನಿಗಳಿಂದ ಈ ರೀತಿ ಹೇಳಲ್ಪಡುತ್ತಿದೆ. ಮಹಾಭಾರತದಲ್ಲಿ ಭೀಮನಿಂದ ಸಂಹೃತನಾದ ಮಣಿಮಂತನೆಂಬ ದೈತ್ಯನೇ ಈ ಸರ್ಪದ ರೂಪದಿಂದ ಒಂದು ಹಿಂದಿನ ತನ್ನ ಆ ವಿರೋಧಿಯನ್ನು ಕೊಲ್ಲಲೆಳಸಿ ಬಾಲಕನನ್ನು ತೊಂದರೆಪಡಿಸಿದನೆಂದು ಅವರ ನಂಬಿಕೆ! ವಾಸುದೇವನಿಗೆ ಸರ್ಪವು ಕಚ್ಚಿತೆಂಬ ವಾರ್ತೆಯು ಕ್ಷೇತ್ರದಲ್ಲಿ ತಿಳಿದು, ಅನೇಕರು ಗಾಬರಿಗೊಂಡು ಆ ಸ್ಥಳಕ್ಕೆ ಓಡಿಬಂದರು. ಆದರೆ ಅವರೆಗೇ ಅದನ್ನು ಸಂಹರಿಸಿ, ಹಸನ್ಮುಖದಿಂದ ಅಲ್ಲೇ ನಿಂತಿದ್ದ ವಾಸುದೇವನು ಅವರ ಕಣ್ಣಿಗೆ ಹಬ್ಬವನ್ನುಂಟುಮಾಡಿದನು. ಈ ಗಲಭೆಯಲ್ಲಿ ಬಹು ಹೊತ್ತಿನಿಂದಲೂ ಮನೆಯಿಂದ ಹೊರಗೇ ಇದ್ದುಬಿಟ್ಟಿದ್ದ ವಾಸುದೇವನನ್ನು ಕಾಣದೆ ಗಾಬರಿಗೊಂಡಿದ್ದ ಸಾಧ್ವಿಯಾದ ವೇದವತಿಯು, ಹತ್ತಿರ ಎಲ್ಲಾದರೂ ಇದ್ದರೆ ಬರುವನೆಂದೆಣಿಸಿ

'ವಾಸುದೇವಾ' ಎಂದು ಒಂದೆರಡುಸಾರಿ ಗಟ್ಟಿಯಾಗಿ ಕೂಗಿದಳು. ಆ ಕೂಗು ವಾಸುದೇವನಿಗೆ ಕೇಳಿಸಿತು! ಒಡನೆ ಅವನು ಒಂದೇ ಹಾರಿಕೆಗೆ ಅಷ್ಟು ದೂರವನ್ನೂ ಹಾರಿ ತನ್ನ ಮನೆಯ ಅಂಗಳದಲ್ಲಿ ತಾಯಿಯ ಎದುರಿಗೆ ನಿಂತನು. ಬಹು ರಭಸದಿಂದ ಹಾಗೆ ಹಾರಿ ನಿಂತ ಸ್ಥಳದಲ್ಲಿ ಮೂಡಿದುವೆಂದು, ಅಲ್ಲಿರುವ ಒಂದು ಬಂಡೆಯಮೇಲೆ ಎರಡು ಪಾದಚಿಹ್ನೆಗಳನ್ನು ಈಗಲೂ ತೋರಿಸುತ್ತಾರೆ. ಅದರ ಮೇಲೆ ಒಂದು ಗುಡಿಯು ಕಟ್ಟಲ್ಪಟ್ಟು ಗುರುಪಾದಗಳೆಂದು ಅವುಗಳಿಗೆ ಈಗಲೂ ಪೂಜೆಪುರಸ್ಕಾರಗಳು ನಡೆಯುತ್ತಿವೆ.

ಮಧ್ಯಗೇಹಭಟ್ಟನು, ತರುವಾಯ ಬಾಲಕನನ್ನು ವೇದ-ಶಾಸ್ತ್ರಗಳಲ್ಲಿ ಪಂಡಿತನೆಂದು ಪ್ರಖ್ಯಾತಿ ಪಡೆದಿದ್ದ, ಆ ಗ್ರಾಮದ ಪಾಠಶಾಲೆಯ ಉಪಾಧ್ಯಾಯನಲ್ಲಿಗೆ ಕರಮೊಯ್ದುಬಿಟ್ಟನು. ವಾಸುದೇವನು ಗುರುವಿನಲ್ಲಿ ಭಯ ಭಕ್ತಿ ವಿನಯವಿಧೇಯತೆಗಳನ್ನಿಟ್ಟು ಶ್ರದ್ಧೆಯಿಂದ ವಿದ್ಯಾಭ್ಯಾಸ ಮಾಡಿಕೊಂಡಿದ್ದನು. ಯುಕ್ತಕಾಲದಲ್ಲಿ ಕಾವ್ಯ ನಾಟಕ ಮುಂತಾದ ಸಾಹಿತ್ಯ ಭಾಗಗಳು ಮುಗಿದು, ವೇದವೇದಾಂಗಗಳನ್ನೂ ಮುಖ್ಯವಾಗಿ ನ್ಯಾಯ ಶಾಸ್ತ್ರವನ್ನೂ ಅವರಲ್ಲಿ ವಾಸುದೇವನು ಪಠಿಸಿದನು. ಸ್ವಾಭಾವಿಕವಾಗಿ ಅವನಷ್ಟು ಸೂಕ್ಷ್ಮಮತಿಗಳಿಲ್ಲದವರೊಂದಿಗೇ ಅವನು ಕಲಿಯಬೇಕಾಗಿದ್ದಿತಾದುದರಿಂದಲೂ, ಒಂದು ಸಾರಿ ಗುರುಮುಖದಿಂದ ಬಂದೊಡನೆಯೇ ಅವನಿಗೆ ಎಂತಹ ವಿಷಯವಾದರೂ ಹೃದ್ಗತವಾಗಿ ಬಿಡುತ್ತಿದ್ದುದರಿಂದಲೂ, ಅವನು ಮಿಕ್ಕ ಕಾಲವನ್ನೆಲ್ಲ ಈಜುವುದು ಹಾರುವುದು ನೆಗೆಯುವುದು ಓಡುವುದು ಸರಿಯವರೊಂದಿಗೆ ಮಲ್ಲಯುದ್ಧ ಮುಂತಾದುವುಗಳಲ್ಲಿ ಕಳೆಯುತ್ತಾ ಭೀಮಬಲನಾದನು. ಅವನು ಮನಸ್ಸುಮಾಡಿ ಕೈಹಿಡಿದು ಬಿಟ್ಟನೆಂದರೆ ಅವನ ಹಿಡಿತದಿಂದ ಬಿಡಿಸಿಕೊಳ್ಳುವುದು ಸಾಮಾನ್ಯವಾದ ಕೆಲಸವಾಗಿರಲಿಲ್ಲ. ಒಂದಾನೊಂದುದಿನ, ವಾಸುದೇವನ ಈ ಚರ್ಯೆಯು ಗುರುವಿಗೆ ಸಂದೇಹವನ್ನುಂಟುಮಾಡಿತು. "ವಾಸುದೇವಾ ನೀನು ಶ್ರದ್ಧೆಯಿಂದ ಪಾಠಗಳನ್ನು ಕಲಿಯುವುದಿಲ್ಲ. ಯಾವಾಗಲೂ ಆಟಪಾಟಗಳಲ್ಲೇ ತೊಡಗಿರುತ್ತೀಯೆ" ಎಂದು ಗುರುವು ಆಕ್ಷೇಪಿಸಿದನು. ವಾಸುದೇವನು, "ನಾನು ಈವರೆಗೆ ಕಲಿತ ಪಾಠಭಾಗಗಳು ನನಗೆ ಬರುತ್ತಿವೆ. ಒಂದೊಂದು ಪಾಠವನ್ನು ಒಂದು ಸಾರಿ ಕಲಿತರೆ ಸಾಲದೆ" ಎಂದನು. ಆ ಮಾತು ಗುರುವಿಗೆ ಆಶ್ಚರ್ಯವ

ಸ್ನುಂಟುಮಾಡಿ—"ಹಾಗಾದರೆ ಎಲ್ಲಿ ಹೇಳು" ಎಂದು ಬಹು ಕಠಿಣವಾದ ಯಾವುದೋ ಒಂದು ಶಾಸ್ತ್ರಭಾಗವನ್ನು ಬಾಯಿಪಾಠವಾಗಿ ಹೇಳಲು ಆಜ್ಞಾಪಿಸಿದನು. ಒಡನೆ ವಾಸುದೇವನ ಬಾಯಿಂದ ವರ್ಷಧಾರೆಯಂತೆ-ತಡೆಬಡೆಯಿಲ್ಲದೆ ವಿದ್ವತ್ಪ್ರವಾಹವು ಹರಿಯುತೊಡಗಿತು. ಅವನ ಸ್ಪಷ್ಟೋಚ್ಚಾರಣೆ, ಮೇಘಗಂಭೀರಧ್ವನಿ, ದೃಢಭಾವ, ನಿಶ್ಚಲನೋಟ, ನಿಶ್ಚಲವಾದ ಆತನ ಮುಂತಾದುವುಗಳು ಗುರುವಿಗೂ ಅಲ್ಲಿದ್ದ ಸಕಲರಿಗೂ ಪರಮಾಶ್ಚರ್ಯವನ್ನುಂಟುಮಾಡಿದುವು. ಗುರುವು ತನ್ನ ಶಿಷ್ಯನ ಪ್ರತಿಭೆಗಾಗಿ ಅದ್ಭುತಪಟ್ಟು ಅಲ್ಲಿಂದ ಮುಂದೆ ಅವನನ್ನು ಎಲ್ಲರಂತೆ ಸಾಮಾನ್ಯನೆಂದು ತಿಳಿಯದ ತಕ್ಕಷ್ಟು ಗೌರವಭಾವದಿಂದಲೇ ಕಾಣುತ್ತಿದ್ದನು. ಈ ಸಂದರ್ಭದಲ್ಲೇ ವಾಸುದೇವನಿಂದ ಗುರುವಿಗೆ ಒಂದು ಮಹದುಪಕಾರವಾಯಿತು. ಗುರುಪುತ್ರನು ವಾಸುದೇವನ ಸಹಾಧ್ಯಾಯಿಯಾಗಿದ್ದನು. ಒಂದಾನೊಂದು ಸಾರಿ, ಆತನಿಗೆ ಅರೆತಲೆನೋವು ಬಂದು ಬಹು ಬಾಧೆ ಪಡಿಸಿತು. ಮಣಿಮಂತ್ರ ಔಷಧಾದಿಗಳ ಪ್ರಯೋಗಗಳೆಲ್ಲಾ ತೀರಿ-ನಿರುಪಯೋಗವಾದುವು. ತನ್ನ ಮಿತ್ರನು ಪಡುತ್ತಿದ್ದ ಬಾಧೆಯು ವಾಸುದೇವನಿಗೆ ಸಹನೆಯಾಗಲಿಲ್ಲ. ಅವನನ್ನು ಒಂದು ಪಕ್ಕಕ್ಕೆ ಕರೆದೊಯ್ದು, ಒಂದು ಸಾರಿ ಅವನ ಕಿವಿಯಲ್ಲಿ ಗಟ್ಟಿಯಾಗಿ ಊದಿಬಿಟ್ಟನು. ಒಡನೆ-ಆ ಒಂದು ಸಾರಿಯ ಊದುವಿಕೆಗೇ ಅವನ ತಲೆನೋವು ಶಾಶ್ವತವಾಗಿ ಗುಣವಾಯಿತು. ಅಷ್ಟು ಮಾತ್ರವಲ್ಲ ಸಾಕ್ಷಾದ್ವಾಯುದೇವನ ಅವತಾರಪುರುಷನಾದ ವಾಸುದೇವನ ಆ ಬಗೆಯ ಪ್ರಕ್ರಿಯೆಯಿಂದ ಅವನಿಗೆ ಪೂರ್ವಜನ್ಮಸ್ಮರಣೆಯೂ ಉಂಟಾಯಿತೆಂಬ ಹೇಳಿಕೆಯುಂಟು!—

ವಾಸುದೇವನ ಈ ಗುರುವು ವೇದ ಮತ್ತು ಶಾಸ್ತ್ರ ಭಾಗಗಳಲ್ಲಿ ಪಂಡಿತನಾಗಿದ್ದನು ಮಾತ್ರವಲ್ಲ! ಉಪನಿಷತ್ತುಗಳ ವಿಷಯದಲ್ಲಿದ್ದ ಆತನ ಪ್ರಜ್ಞೆಯು ಅಸಾಧಾರಣವಾದುದಾಗಿತ್ತು. ನಮ್ಮ ಕಥಾನಾಯಕನ ವಿದ್ಯಾಭ್ಯಾಸವು ಮುಗಿವ ಕಾಲದಲ್ಲಿ ಈ ಗುರುವಿನ ಬಳಿ ಐತರೇಯವೆಂಬ ಮಹಾ ಉಪನಿಷತ್ತಿನ ಪಾಠವು ಪ್ರಾರಂಭವಾಯಿತು. ಗುರುವು ಆವರೆಗೆ ನಡೆದು ಬಂದ ಪೂರ್ವಾಚಾರದಲ್ಲೇ ಅದರ ಅರ್ಥವಿವರಣೆಯನ್ನೂ ಪ್ರಾರಂಭಿಸಿದನು. ಈ ಮಧ್ಯೆ ಒಂದುದಿನ ವಾಸುದೇವನು ಗುರುವಿನೊಂದಿಗೆ ಏಕಾಂಗಿಯಾಗಿದ್ದಾಗ, ಆ ಉಪನಿಷತ್ತಿನಲ್ಲಿ ಸಾರಭೂತನಾದ ವಿಚಾರವು ಭಗವಂತನಾದ ಗೋವಿಂದನ ಪಾದ

ಭಕ್ತಿಯೇ ಎಂಬುದನ್ನು ಗುರುವಿನ ಮನಸ್ಸಿಗೆಂಟುವಂತೆ ಶಂಕಾಸಮಾಧಾನಗಳೊಂದಿಗೆ ವಿವರಿಸಿ ತಿಳಿಸಿದನು. ತನ್ನ ಶಿಷ್ಯನು ವಿವರಿಸುತ್ತಿದ್ದ ವಿಷಯ ವಿಚಾರಗಳು, ಗುರುವಿನಲ್ಲಿ ವಿಶೇಷ ಆದರಾಭಿಮಾನವನ್ನುಂಟುಮಾಡಿದುವು. ಆನಂದಪ್ರವಾಹವು ಅವರ ಕಣ್ಣುಗಳಿಂದ ಧಾರೆಧಾರೆಯಾಗಿ ಸುರಿಯಿತು. ಆತನು "ಶಿಷ್ಯೋತ್ತಮನೇ ಶಿಷ್ಯನಿಂದ ಗುರುವಿಗೆ ಪರಾಜಯವಾದ ಅಪೇಕ್ಷೆಯು, ಈ ನಿನ್ನ ಕೃತಿಯಿಂದ ನನಗೆ ಸಂಪೂರ್ಣವಾಗಿ ಸಂದಿತು. ಇದರಿಂದ ನನ್ನ ಮನಸ್ಸಿಗೆ ಅವಿರತಾನಂದವುಂಟಾಯಿತು. ಮಾತ್ರವಲ್ಲ—ಶ್ರೀಕೃಷ್ಣಭಕ್ತಿ ಭಾಗ್ಯವು ಲಭಿಸಿ ನನ್ನ ಈ ಜನ್ಮವೇ ಸಾರ್ಥಕವಾಯಿತು. ನಿನ್ನೀ ಜೀವಿತದಲ್ಲಿ ನೀನು ಮಾಡಬೇಕಾದ ಮಹತ್ಕಾರ್ಯಗಳುಂಟು. ಮಾನವ ಕುಲಕ್ಕೇ ಉದ್ಧಾರಕವಾದ ಈ ಭಕ್ತಿಪಂಥವನ್ನು ಪ್ರಚುರಗೊಳಿಸು. ಶಿಷ್ಯೋತ್ತಮಾ, ನಿನ್ನ ಮೇಲೆ ಸರ್ವೇಶ್ವರನ ಸಂಪೂರ್ಣಕಟಾಕ್ಷವಿರಲಿ" ಎಂದು ಬಾಷ್ಪಪೂರಿತಲೋಚನನಾಗಿ ಆಶೀರ್ವದಿಸಿ ಆತನನ್ನು ಬೀಳ್ಕೊಟ್ಟನು.—

ಹೀಗೆ ವಾಸುದೇವ ಬಾಲಕನು ಉಪನಯನದಿಂದ ವೇದಾಧಿಕಾರವನ್ನು ಹೊಂದಿ, ಸದ್ಗುರುವಿನಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿ ಮುಂದಿನ ಕಾರ್ಯಕ್ಕೆ ಸಿದ್ಧನಾದನು.



## ಅಧ್ಯಾಯ ೪ "ಆಶ್ರಮಸ್ವೀಕಾರ"

ಲೋಕದಲ್ಲಿ ಅಲ್ಪಾಯು ಹೆಚ್ಚಿನೊಳಗಿರುವ ಹುಳುಗಳಂತೆ ಕ್ಷುದ್ರಜೀವಿಗಳಾಗಿ, ಅನಾಮಧೇಯರಾಗಿ ಹುಟ್ಟಿ ಸಾಯುವವರಿಗೆ, ಧನ ಧಾನ್ಯ-ಅಧಿಕಾರ ವೈಭವಗಳನ್ನು ಗಳಿಸುವುದರಲ್ಲೇ ನಿರತರಾಗಿದ್ದು, ಉಂಡು ಉಟ್ಟು ತಿರುಗಾಡಿ ಮೆರೆದು ಒಂದು ದಿನ ಮುರುಟಿಕೊಳ್ಳುವ ಸ್ವಾರ್ಥಿಗಳಿಗೂ ಕೊರತೆಯಿಲ್ಲ. ಆದರೆ ಅವರ ಜನ್ಮವು ಸಾರ್ಥಕವಾದುದಲ್ಲ! ಮಾನವನು ಜನ್ಮವೆತ್ತಿದುದಕ್ಕೆ ತನ್ನ ಜನ್ಮದ ಮುಖ್ಯೋದ್ದೇಶವೇನೆಂಬುದನ್ನು ತಿಳಿದುಕೊಂಡು ಲೋಕಸೇವೆ ಭಗವತ್ಸೇವೆಗಳಲ್ಲಿ ಶ್ರಮಿಸಿ, ಆತ್ಮೋದ್ಧಾರಕ್ಕೆ ಪ್ರಯತ್ನಿಸಿ ಜನ್ಮಸಾರ್ಥಕ್ಯವನ್ನುಂಟುಮಾಡಿಕೊಳ್ಳುವನೋ ಅವನೇ ನಿಜವಾಗಿ ಜೀವಿಸಿರುವವನು, ಮಿಕ್ಕವರೆಲ್ಲರೂ

ಜೀವನ್ಮುಕ್ತರೆನ್ನಿಸಿಕೊಳ್ಳಲು ಅರ್ಹರು! ಏಕೆಂದರೆ ಸಾರ್ಥಕವಾಗದ ಜೀವಿತದಿಂದೇನು ಪ್ರಯೋಜನ? ನಮ್ಮ ದೇಶವು ಇಂದಿಗೆ ಜೀವಿಸಿರುವವರೆನ್ನಿಸಿಕೊಳ್ಳಬಹುದಾದ ನಮ್ಮ ಕಥಾನಾಯಕರನ್ನು ಹೋಲುವ ಅಂತಹ ಮಹಾಪುರುಷಾಗ್ರಣಿಗಳನ್ನು ಹೆಚ್ಚು ಹೆಚ್ಚು ಸಂಖ್ಯೆಯಿಂದ ಗಳಿಸುವುದೋ ಅಂದಿಗೆ ನಮ್ಮ ಜನಾಂಗವೂ ದೇಶವೂ, ಅಭಿವೃದ್ಧಿ ಮಾರ್ಗದಲ್ಲಿ ಕಾಲಿಡುವುದರಲ್ಲಿ ಸಂಶಯವಿಲ್ಲ —

ವಾಸುದೇವ ಬಾಲಕನು ವಿದ್ಯಾಭ್ಯಾಸವನ್ನು ಮುಗಿಸಿ ತಂದೆತಾಯಿಗಳ ಸಮೀಪವನ್ನು ಸೇರಿದನು ದೃಢಾಂಗನಾದ, ಸಕಲ ಸಲ್ಲಕ್ಷಣಯುಕ್ತನಾದ, ಕುಶಾಗ್ರಮತಿಯಾದ, ಸಕಲ ವಿದ್ಯಾಪಾರಂಗತನಾದ ತಮ್ಮ ಆ ಮಗನನ್ನು ನೋಡಿ ನೋಡಿ, ಮಧ್ಯಗೇಹಭಟ್ಟನೂ-ವೇದವತಿಯೂ ಪುಳಕಗೊಳ್ಳುವರು, ಹೆಕ್ಕಳಿಸುವರು, ಆನಂದಬಾಷ್ಪಗಳನ್ನು ಸುರಿಸುವರು ತಮ್ಮ ಕುವರನಿಗೆ ಶೀಘ್ರದಲ್ಲೇ ಶುಭಲಕ್ಷಣಯುಕ್ತಳಾದ ಒಬ್ಬ ಕನ್ಯೆಯನ್ನು ತಂದು ವಿವಾಹ ಮಾಡಿ, ಗೃಹಸ್ಥಾಶ್ರಮಿಯಾದುದನ್ನು ನೋಡಬೇಕೆಂದೂ, ಅತ್ಯಲ್ಪಕಾಲದಲ್ಲೇ ಮನೆಯಲ್ಲಿ ಚಿಕ್ಕ-ಪುಟ್ಟ ತಮ್ಮ ಮೊಮ್ಮಕ್ಕಳು, ಅಂಬೆಗಾಲು ತಪ್ಪುಹೆಜ್ಜೆಗಳಿಂದ ನಡೆದಾಡುವುದನ್ನೂ, ಜೊಲ್ಲಿನೊಂದಿಗೆ ಬೆರೆದ ತೊದಲು ಮಾತುಗಳನ್ನಾಡುವುದನ್ನೂ ನೋಡಿ-ಕೇಳಿ ಸಂತೋಷಪಡಬೇಕೆಂದೂ ಅವರು ಎಷ್ಟೊ ಯೋಚಿಸಿಕೊಂಡರು, ಏನೇನೋ ಹಲುಬಿಕೊಂಡರು ಆದರೆ ವಾಸುದೇವನ ಇಷ್ಟವೇ ಬೇರೆಯಿತ್ತು; ಆತನ ಮತವೇ ಭಿನ್ನವಾದುದಿತ್ತು ಸಕಲ ವಿದ್ಯಾಪಾರಂಗತನಾದ ಆತನಿಗೆ ಧರ್ಮದ ನಿಶ್ಚಯಸ್ವರೂಪವನ್ನು ತಿಳಿದುಕೊಳ್ಳಲು ಹೆಚ್ಚು ಸಾಧ್ಯವಿತ್ತು ಆತನು ತನ್ನ ಸುತ್ತುಮುತ್ತಲೂ ಇದ್ದ ಧಾರ್ಮಿಕ ಸಂಸ್ಥೆಗಳ ಸ್ಥಿತಿಯನ್ನು ಗಮನವಿಟ್ಟು ಚೆನ್ನಾಗಿ ನೋಡಿದನು. ಒಂದು ಕಡೆ ಜಗತ್ತೇ ಸುಳ್ಳು-ನಾನೇ ಈಶ್ವರನೆಂದುಕೊಂಡು ಗರ್ವದಿಂದ ಬೀಗುತ್ತಿದ್ದ ಕೆಲ ಅದ್ವೈತಿಗಳು, ಮತ್ತೊಂದು ಕಡೆ ಈಶ್ವರನೇ ಇಲ್ಲವೆಂದು ವಾದಿಸುವ ನಾಸ್ತಿಕರು ಇವರುಗಳಿಂದ ತುಂಬಿ ಸ್ವಕೀಯರ ಸ್ಥಿತಿಯು ಬಹು ಹೀನವಾಗಿದ್ದುದನ್ನು ನೋಡಿದನು. ಅವುಗಳನ್ನು ಸುಸ್ಥಿತಿಗೆ ತರಬೇಕಾದುದು ಆವಶ್ಯಕವೆಂದುಕೊಂಡನು ಅದಕ್ಕಾಗಿ ತಾನು ಸನ್ಯಾಸವನ್ನು ತೆಗೆದುಕೊಂಡು, ಮೊದಲು ನಿರಾತಂಕವಾದ ಸ್ಥಾನವನ್ನೊಂದನ್ನು ಗಳಿಸಿಕೊಳ್ಳಬೇಕೆಂದೂ ಅಪೇಕ್ಷಿಸಿ

ದನು. ಈ ಭಗವತ್ಸೇವಾ ಕಾರ್ಯವು ಮನಸ್ಸಿನಲ್ಲಿ ಚೆನ್ನಾಗಿ ದೃಢಪಟ್ಟಿತು ತಾನು ಅದಕ್ಕಾಗಿಯೇ ಜನ್ಮವೆತ್ತಿರುವುದೆಂದು ತೋರಿತು. ಒಡನೆ ಇನ್ನು ಮುಂದೆ ವ್ಯರ್ಥ ಕಾಲಕ್ಷೇಪ ಮಾಡಲಾಗದೆಂದು ಯೋಗ್ಯಗುರುವನ್ನು ಹುಡುಕಿಕೊಂಡು ಹೊರಟನು

ಗುರುವನ್ನು ಹುಡುಕಿಕೊಂಡು ಬಹು ದೂರ ಹೋಗ ಬೇಕಾಗಿರಲಿಲ್ಲ! ಹತ್ತಿರದ ಉಡುಪಿಯಲ್ಲೇ ಸಮಸ್ತ ವಿದ್ಯಾಪಾರಂಗತರೂ ಮಹಾ ತಪಸ್ವಿಗಳಾದ ಸತ್ಯಪ್ರಜ್ಞತೀರ್ಥರ ಕರಕಮಲಸಂಜಾತರೂ ಆದ ಪುರುಷೋತ್ತಮತೀರ್ಥರು ಅಥವಾ ಅಚ್ಯುತಪ್ರೇಕ್ಷತೀರ್ಥರೆಂಬ ಮಹಾಮಹಿಮರು ಆತನ ದೃಷ್ಟಿಗೋಚರರಾದರು ಅವರು ಮಹಾ ವಿದ್ವಾಂಸರು ಅಷ್ಟಾದಶಶಾಸ್ತ್ರಗಳನ್ನೆಲ್ಲಾ ಆಮೂಲಾಗ್ರವಾಗಿ ಪಠಿಸಿದ ಮಹಾ ಪಂಡಿತರು ಅವರು ಪೂರ್ವದ ತಮ್ಮದೊಂದು ಜನ್ಮದಲ್ಲಿ ಹಸ್ತಿನಾಪುರಿಯಲ್ಲಿ ಪಾಂಡವರ ಪತ್ನಿಯೂ ಮಹಾ ಪತಿವ್ರತಾಶಿರೋಮಣಿಯೂ ಆದ ದ್ರೌಪದೀದೇವಿಯ ಹಸ್ತದಿಂದ ಕೊಡಲ್ಪಟ್ಟ ಭಿಕ್ಷಾನ್ನವನ್ನು ಸ್ವೀಕರಿಸುತ್ತಿದ್ದುದರಿಂದ, ಕರ್ಮಗಳೆಲ್ಲಾ ಸವೆದು, ದೇಹಪವಿತ್ರತೆಯನ್ನು ಹೊಂದಿದವರೆಂದು ಹೇಳಲ್ಪಟ್ಟಿದೆ ನಮ್ಮ ವಾಸುದೇವನು, ಇವರನ್ನು ಆಶ್ರಯಿಸಿ ಸೇವೆ ಮಾಡತೊಡಗಿದನು ಕೊನೆಯ ಪಕ್ಷ ಒಂದು ವರ್ಷ ಕಾಲವಾದರೂ ಶಿಷ್ಯನ ನಡೆನುಡಿಗಳನ್ನು ಪರೀಕ್ಷಿಸದೆ ಸನ್ಯಾಸವನ್ನು ಕೊಡಕೂಡದೆಂದು ವಿಧಿಯಿರುವುದರಿಂದ ಅಚ್ಯುತಪ್ರೇಕ್ಷರೂ ಒಡನೆ ಆಶ್ರಮಸ್ವೀಕಾರ ಮಾಡಿಸದ ಸಾವಕಾಶ ಮಾಡುತ್ತಿದ್ದರು

ಅಷ್ಟರಲ್ಲಿ ಇತ್ತ ತನ್ನ ಮಗನು ಬಹು ದಿನಗಳಿಂದ ಮನೆಯಲ್ಲಿಲ್ಲದೆ ಮಠದೇವಸ್ಥಾನಗಳನ್ನೇ ಹೆಚ್ಚಾಗಿ ಅಪೇಕ್ಷಿಸುತ್ತಿದ್ದುದನ್ನು ಕುರಿತು ಯೋಚನಾಗ್ರಸ್ತನಾದ ಮಧ್ಯಗೇಹಭಟ್ಟನು, ಅಲ್ಲಿಲ್ಲಿ ಹುಡುಕಿಕೊಂಡು ಬಂದು, ಅಚ್ಯುತಪ್ರೇಕ್ಷತೀರ್ಥರ ಮಠದಲ್ಲಿದ್ದ ತನ್ನ ಮಗನನ್ನು ಕಂಡನು ಮತ್ತು ಇನ್ನು ವಿದ್ಯಾಭ್ಯಾಸವನ್ನು ಸಾಕುಮಾಡಿ ಮನೆಗೆ ಬಂದು ಮದುವೆ ಮಾಡಿಕೊಂಡು ಗೃಹಕೃತ್ಯ ಕಾರ್ಯಗಳನ್ನು ಗಮನಿಸುತ್ತಾ, ವೃದ್ಧರಾದ ತಮಗೆ ಆಧಾರವಾಗಿರೆಂದು ಹೇಳಿಕೊಂಡನು ಆದರೆ ತನ್ನ ಮಗನು ಸನ್ಯಾಸಿಯಾಗುವ ಇಷ್ಟವುಳ್ಳವನಾಗಿದ್ದಾನೆಂಬ ಸಂಗತಿಯು ತಿಳಿದ ಒಡನೆಯೇ ಆತನ ಹೃದಯ ಗ್ರಂಥಿಯು ಒಡೆದು ಹೋದಂತಾಯಿತು ತಲೆಯು ನೆಲಕ್ಕೆ ಪರ್ವತವೇ

ಕುಶಿಬಿಸಂತಾಯಿತು. ಅಂತಹ ರತ್ನದಂತಹ ಮಗನನ್ನು ಕಳೆದುಕೊಳ್ಳಲು ಆತನೇ ಅಲ್ಲ, ಮತ್ತೆ ಯಾವನಾದರೂ ಒಪ್ಪುವನೇ' ಆ ಯೋಜನೆಯನ್ನು ಬಿಟ್ಟು ಬಿಡೆಂದನು. ತಂದೆತಾಯಿಗಳಿಗೆ ಮೋಸ ಮಾಡಿ ಹೀಗೆ ಹೊಗತಕ್ಕದು ಧರ್ಮಸಮ್ಮತವೇ ಎಂದು ಅಂಗಲಾಚಿ ಬೇಡಿಕೊಂಡನು. ಕಣ್ಣೀರು ಸುರಿಸಿದನು. ಸಿಟ್ಟು ಸಿಡುಬಿಟ್ಟರು. ಆದರೆ ತರ್ಕಗಳೂ-ಚರ್ಚೆಗಳೂ, ಅಳುವು-ಕಣ್ಣೀರುಗಳೂ ವಾಸುದೇವನ ಮನಸ್ಸನ್ನು ಕುಂದಿಸಲು ಶಕ್ಯವಾಗಲಿಲ್ಲ. ಆತನ ದೃಢನಿಶ್ಚಯವು ಅವುಗಳಿಂದ ಅಳಿಯಲಿಲ್ಲ. ಹೀಗೆ ಹತಾಶನಾದ ಮಧ್ಯಗೇಹಭಟ್ಟನು ಕೊನೆಗೆ ತನ್ನ ಮಗನ ಪಾದಕ್ಕೆ ಬಿದ್ದು ಕೇಳಿಕೊಂಡನು. ಆಗ ವಾಸುದೇವನು,—"ಚಿಕ್ಕವರಿಗೆ ಹಿರಿಯರು ನಮಸ್ಕಾರ ಮಾಡುವುದು ಸಂಪ್ರದಾಯವಿರುದ್ಧವಾದುದು. ಅಲ್ಲದೆ ಮಗನು ಸನ್ಯಾಸಿಯಾಗಿದ್ದರಲ್ಲದೆ ತಂದೆಯಿಂದ ನಮಸ್ಕಾರಕ್ಕೆ ಅರ್ಹನಾಗಲಾರನು. ಈಗ ತಾವು ನಮಸ್ಕರಿಸಿದುದರಿಂದ ನನ್ನ ಆಶ್ರಮಸ್ವೀಕಾರವನ್ನು ಒಪ್ಪಿದಂತಾಯಿತು" ಎಂದನು. ಪಾಪ, ಭಟ್ಟನು ಆ ಮಾತನ್ನು ಕೇಳಿ ಭ್ರಾಂತನಂತಾದನು. ಮುಂದೆ ಉಪಾಯ ಕಾಣದೆ ಮನೆಗೆ ಹೋಗಿ ಹೆಂಡತಿಯೊಂದಿಗೆ ನಡೆದ ಸಂಗತಿಯನ್ನೆಲ್ಲ ತಿಳಿಸಿದನು. ಇಬ್ಬರೂ ವ್ಯಸನಸಮುದ್ರದಲ್ಲಿ ಮುಳುಗಿದರು.

ಕೆಲವು ದಿನಗಳು ಕಳೆದುವು. ಪುನಃ ಪ್ರಯತ್ನಿಸೋಣವೆಂದು ಬಂದನು. ಆ ಸಾರಿ ಹಿಂದಿನಗಿಂತಲೂ ಕಠಿಣವಾದ ಮಾತುಕಥೆಗಳು ತಂದೆಮಕ್ಕಳಿಗೆ ನಡೆದುವು. 'ನೀನು ಮನೆಗೆ ಬಾರದಿದ್ದರೆ ನಾನು ಪ್ರಾಣತ್ಯಾಗ ಮಾಡಿಕೊಳುವೆನೆ"ಂದು ಭಟ್ಟನು ಹೆದರಿಸಿದನು. ಬಾಲಕನು ಅದಕ್ಕೂ ಬೆದರಲಿಲ್ಲ. ಹಿಂಜರಿಯಲಿಲ್ಲ. ತಾನು ಹೊದ್ದಿದ್ದ ವಸ್ತ್ರವನ್ನು ಸೀಳಿ ಕೌಪೀನ ಹಾಕಿಕೊಂಡು—"ಆಯಿತು ಸಿದ್ಧನಾಗಿದ್ದೇನೆ. ನಿಮ್ಮ ಮನಸ್ಸು ಬಂದಂತೆ ಮಾಡಬಹುದು" ಎಂದು ಪ್ರತ್ಯುತ್ತರ ಕೊಟ್ಟನು. ಮಧ್ಯಗೇಹಭಟ್ಟನ ಕೋಪವು ಸ್ವಲ್ಪ ಶಮನವಾಗಿ, ಶಾಂತಭಾವದಿಂದ—"ಅಪ್ಪಾ, ಮುಪ್ಪಿನಲ್ಲಿ ಪ್ರಬುದ್ಧನಾದ ಮಗನು ಕೈಬಿಟ್ಟು ಹೋದರೆ ತಂದೆತಾಯಿಗಳಿಗೆ ಬೇರೆ ದಿಕ್ಕಾರು! ಮಗನೇ ನಮ್ಮನ್ನು ನಿರಾಶ್ರಿತರನ್ನಾಗಿ ಮಾಡಿ ಹೋಗುವೆಯಾ!" ಎಂದು ಅಂಗಲಾಚಿಕೊಂಡನು. ಆಗ ವಾಸುದೇವನ ಮನಸ್ಸೂ ಸ್ವಲ್ಪ ಮಾತ್ರ ಕರಗಿತು. ಒಡನೆ ಆತನು 'ತಂದೆಯೇ ಯೋಚಿಸದಿರಿ. ನಾನು ಈಗಲೇ ಆಶ್ರಮಸ್ವೀಕಾರ

ಮಾಡುವುದಿಲ್ಲ. ತಮಗೆ ಸೇವೆ ಮಾಡಿ ಗತಿಯನ್ನು ಕಾಣಿಸಲು ಅರ್ಹನಾದ ಮಗನೊಬ್ಬನು ಹುಟ್ಟುವವರೆಗೂ ನಾನು ಕಾಯುವೆನು. ಆಮೇಲೆ ನನ್ನನ್ನು ತೊಂದರೆ ಪಡಿಸಕೂಡದು ಎಂದು ಆತನನ್ನು ಸಮಾಧಾನಿಸಿದನು. ಮಧ್ಯಗೇಹಭಟ್ಟನು, ವಯಸ್ಸು ಮೀರಿದ ತಮಗೆ ಮಕ್ಕಳಾಗುವ ಸಂಭವವಿಲ್ಲವಾದುದರಿಂದ ನೋಡೋಣವೆಂದುಕೊಂಡು "ನಿಮ್ಮ ತಾಯಿಯನ್ನು ಒಪ್ಪಿಸಿ ಆಕೆಯು ಹೇಳಿದಂತೆ ನಡೆ" ಎಂದು ನುಡಿದು, ಅಷ್ಟುಮಾತ್ರವಾಯಿತಲ್ಲ ಎಂದು ತೃಪ್ತಿಪಟ್ಟು ಮನೆಗೆ ನಡೆದು, ಪತ್ನಿಯೊಂದಿಗೆ ಎಲ್ಲಾ ಸಂಗತಿಗಳನ್ನೂ ತಿಳಿಸಿ, ಅವನ ಸನ್ಯಾಸಕ್ಕೆ ಖಂಡಿತವಾಗಿ ಸಮ್ಮತಿ ಕೊಡಬೇಡವೆಂದು ಹೇಳಿದನು.

ಆದರೆ ಆತನು ಎಣಿಸಿದಂತೆ ಆಗಲಿಲ್ಲ. ಸಿದ್ಧಸಂಕಲ್ಪನಾದ ವಾಸುದೇವ ಬಾಲಕನ ವಾಕ್ಯಕ್ಕೆ ಲೋಪ ಬರಲಿಲ್ಲ. ಆತನು ಸಾಮಾನ್ಯನೇ! ವಾಯುದೇವನ ಸಾಕ್ಷಾತ್ ಅಂಶಭೂತನಲ್ಲವೆ? ಭಗವತ್ಕಾರ್ಯ ಸಾಧನೆಗಾಗಿ ಅವತರಿಸಿರುವ ಆತನ ಉದ್ದೇಶಕ್ಕೆ ಭಂಗಬರುವುದುಂಟೇನು? ಯುಕ್ತಕಾಲದಲ್ಲಿ ವೇದವತೀದೇವಿಯು ಗರ್ಭಿಣಿಯಾಗಿ ಒಂದು ಮಗುವನ್ನು ಹೆತ್ತಳು. ಅವರೇ ಮುಂದೆ ಸೋದೇ ಮಠದ ಸ್ಥಾಪಕರೂ ಸುಬ್ರಹ್ಮಣ್ಯಕ್ಷೇತ್ರದ-ಶ್ರೀ ವಿಷ್ಣುತೀರ್ಥರೆಂದು ಪ್ರಸಿದ್ಧರೂ ಆದ ನಮ್ಮ ಆಚಾರ್ಯರ ಅನುಜರು.

ತನ್ನ ತಾಯಿಗೆ ಪ್ರಸವವಾಯಿತೆಂಬ ವಾರ್ತೆಯು ವಾಸುದೇವನಿಗೆ ತಿಳಿಯಿತು. ಒಡನೆ ಮನೆಗೆ ನಡೆದು, ಕೆಲವು ದಿನಗಳಲ್ಲಿ ಮಂಗಳಸ್ನಾನ ಮುಂತಾದ ಶುಭಕಾರ್ಯಗಳೆಲ್ಲವೂ ಮುಗಿದ ತರುವಾಯ ಒಂದು ದಿನ, ತನ್ನ ಸನ್ಯಾಸಕ್ಕೆ ಅನುಮತಿಸಬೇಕೆಂದು ತಾಯಿಯನ್ನು ಪ್ರಾರ್ಥಿಸಿದನು. ಆ ಸಂಬಂಧದ ಅನೇಕ ಮಾತು ಕಥೆಗಳು ನಡೆದುವು. ಕೊನೆಗೆ ದೃಢನಿಶ್ಚಯವುಳ್ಳ ಆತನು—"ನಿಮಗೆ ನನ್ನ ಮುಖವನ್ನಾದರೂ ನೋಡಿಕೊಂಡಿರಬೇಕೆಂಬ ಅಪೇಕ್ಷೆಯಿದ್ದರೆ, ನನ್ನ ಮಾರ್ಗಕ್ಕೆ ವಿಘ್ನವನ್ನುಂಟುಮಾಡದೆ, ಸನ್ಯಾಸಕ್ಕೆ ಅಪ್ಪಣೆ ಕೊಡಿರಿ. ಇಲ್ಲದಿದ್ದರೆ, ಇನ್ನು ನನ್ನ ಮುಖವನ್ನೇ ನೋಡಲಾರಿರಿ" ಎಂದು ಕೊನೆಯ ನಿರ್ಧಾರದ ಮಾತನ್ನು ಹೇಳಿಬಿಟ್ಟನು. ತಾಯಿಯು ಕರುಳು ಮರುಗಿತು—"ಅಪ್ಪಾ ಹೇಗಾದರೂ ಇರು. ನಿನ್ನ ಮುದ್ದುಮುಖವನ್ನು ನೋಡದೆ ನಾನು ಬದುಕಿರಲಾರೆನು" ಎಂದು ನುಡಿದು ಕಣ್ಣೀರು ಹಾಕಿದಳು.

ತರುವಾಯ ವಾಸುದೇವನು ತನ್ನ ಮಹದುದ್ದೇಶವನ್ನು ತಿಳಿಸಿ, ಅದಕ್ಕೆ ಭಂಗವನ್ನು ತರಬಾರದೆಂದು ಬೇಡಿಕೊಂಡು, ಎಂತೂ, ತಾಯಿಯಿಂದ ಅಪ್ಪಣೆ ಪಡೆದಂತೆ ಮಾಡಿಕೊಂಡು. ಅಚ್ಯುತಪ್ರೇಕ್ಷರಲ್ಲಿಗೆ ಬಂದನು ಮತ್ತು—"ನಮ್ಮ ಮಾತಾಪಿತೃಗಳ ಆಜ್ಞೆಯನ್ನೂ ಪಡೆದು ಬಂದಿದ್ದೇನೆ ನನಗಿನ್ನು ಆಶ್ರಮವನ್ನು ಅನುಗ್ರಹಿಸಿ ಉದ್ಧಾರಮಾಡಬೇಕು" ಎಂದು ನಮಸ್ಕರಿಸಿದನು ಗುರುಗಳೂ ತಮ್ಮ ಆ ಶಿಷ್ಯನಲ್ಲಿದ್ದ ಉತ್ಸಾಹ ಸಂಪತ್ತಿಯನ್ನು ಕಂಡು ಆನಂದದಿಂದ ಒಪ್ಪಿದರು.

ಇಂದು ಶ್ರೀಅನಂತೇಶ್ವರ ದೇವಾಲಯವು ತಳಿರುತೋರಣಗಳಿಂದ ಅಲಂಕೃತವಾಗಿದೆ ಹತ್ತಿರದಿಂದ ದೂರದಿಂದ ಸಹಸ್ರಾರು ಜನರು ಬಂದು ನೆರೆದಿದ್ದಾರೆ. ಊರಿನ ಆಬಾಲವೃದ್ಧರೂ ಆ ಬಾಲಸನ್ಯಾಸಿಯನ್ನು ನೋಡಬೇಕೆಂದು ಕೌತುಕಗೊಂಡು ಗುಂಪುಗುಂಪಾಗಿ ಹೊರಟು ಬರುತ್ತಿದ್ದಾರೆ. ಕ್ಷಣಕಾಲದಲ್ಲಿ ಆ ದೊಡ್ಡ ದೇವಸ್ಥಾನವು ಜನಸಮೂಹದಿಂದ ತುಂಬಿಹೋಯಿತು ಯುಕ್ತಕಾಲದಲ್ಲಿ ವಾಸುದೇವನಿಗೆ ಶಿರೋಮುಂಡನವಾಯಿತು. ಸ್ನಾನವಾಯಿತು. ಗುರುಗಳಿಂದ ಕೊಡಲ್ಪಟ್ಟ ಕಾವಿಯ ವಸ್ತ್ರಗಳನ್ನು ಆತನು ಧರಿಸಿದನು ದಂಡಕಾಷ್ಠಗಳನ್ನು ಹಿಡಿದುಕೊಂಡನು ಯತ್ಯಾಶ್ರಮಕ್ಕೆ ಆವಶ್ಯಕಗಳಾದ ಶಾಸ್ತ್ರೋಕ್ತ ವಿಧಾನಗಳೆಲ್ಲಾ ನಡೆದುವು ಹಾಗೆ ಸಿದ್ಧನಾದ ಆ ಮಹಾಭಾಗನು ಬಂದು ತಮ್ಮ ಗುರುವರ್ಯರ ಪಾದಗಳಿಗೆ ನಮಸ್ಕರಿಸಲು, ಶ್ರೀಅಚ್ಯುತಪ್ರೇಕ್ಷರು ತಮ್ಮ ಬಹು ಕಾಲದ ಆಶಾತರುವು ಅಂದು ಫಲಿಸಿತೆಂದುಕೊಂಡು ಆನಂದಬಾಷ್ಪಗಳನ್ನು ಸುರಿಸುತ್ತಾ, ಆತನ ತಲೆಯ ಮೇಲೆ ವರದ ಹಸ್ತವನ್ನಿಟ್ಟು, ಆ ತಮ್ಮ ಶಿಷ್ಯಸಾರ್ವಭೌಮನಿಗೆ "ಪೂರ್ಣಪ್ರಜ್ಞ"ರೆಂದು ನೂತನ ನಾಮಕರಣ ಮಾಡಿದರು. ತರುವಾಯ ದಂಡಕಾಷ್ಠಗಳನ್ನು ಧರಿಸಿ ಹಾವುಗೆಗಳನ್ನು ಮೆಟ್ಟಿಕೊಂಡು ಗುರುಶಿಷ್ಯರಿಬ್ಬರೂ, ಸ್ವಾಮಿಯ ದರ್ಶನಕ್ಕೆಂದು ಬಂದರು ತೇಜಸ್ವಿಯಾದ ಆ ಬಾಲಸನ್ಯಾಸಿಯು- ತಂದೆತಾಯಿ ಮನೆಬಾಗಿಲುಗಳ ಆಸೆಯನ್ನು ತ್ಯಜಿಸಿ ಲೋಕಸೇವೆ-ಭಗವತ್ಸೇವೆಗಳಲ್ಲೇ ನಟ್ಟಮನಸ್ಸುಳ್ಳವನಾಗಿ, ಅಂತಹ ಶಕ್ತಿಸಾಮರ್ಥ್ಯಗಳನ್ನು ದಯಪಾಲಿಸೆಂದು ನಿರ್ವಿಣ್ಣನಂತೆ ಶ್ರೀಮನ್ನಾರಾಯಣಮೂರ್ತಿಗೆ ನಮಸ್ಕರಿಸಿದ್ದನ್ನು ಕಂಡ ಅಲ್ಲಿದ್ದ ಸಮಸ್ತ ಸ್ತ್ರೀಯರ-ಪುರುಷರ ಕಣ್ಣುಗಳೂ ನೀರಿನಿಂದ

ತುಂಬಿಹೋದುವು. ಮಾತನಾಡಲು ಬಾಯಿಬಾರದೆ ಎಲ್ಲರ ಗಂಟಲೂ ಕಟ್ಟಿ ಹೋಯಿತು. ಆತನು ಧರ್ಮೋದ್ಧಾರಕನಾಗಿ ಬಹುಕಾಲವಿರಲೆಂದು ಸಮಸ್ತರೂ ಸ್ವಾಮಿಯನ್ನು ಬೇಡಿಕೊಂಡರು. ಇಲ್ಲಿ ಒಂದು ವಿಷಯ! ಆ ಸಂದರ್ಭದಲ್ಲಿ ಮಧ್ಯಗೇಹಭಟ್ಟ-ವೇದವತಿಯರು ಬಹುಶಃ ಎಲ್ಲರಂತೆ ಅಲ್ಲಿಗೆ ಬಂದಿರಲಾರರಲ್ಲವೆ! ಶ್ರೀಮದ್ ಮಧ್ವವಿಜಯಗ್ರಂಥವು ಈ ಸಂದರ್ಭದಲ್ಲಿ ಮೌನವಾಗಿದೆ. ತಮ್ಮ ಮಗನನ್ನು ಚಿಕ್ಕಪತ್ನಿಯೊಂದಿಗೆ ವಿವಾಹವೇದಿಕೆಯ ಮೇಲೆ ನೋಡಲು ಬಯಸಿದ್ದ ಅವರು, ಆತನು ಶಿರೋಮುಂಡನ ಮಾಡಿಸಿಕೊಂಡು ಕಾಷಾಯ ವಸ್ತ್ರಗಳನ್ನು ಧರಿಸಿ ದಂಡಕಾಷ್ಠವನ್ನು ಹಿಡಿದು ಆಶ್ರಮಸ್ವೀಕಾರ ಮಾಡುವ ಹೃದಯವಿಭೇದಿನಿಯಾದ ಆ ದೃಶ್ಯವನ್ನು ನೋಡಲಾರದೆ ಮನೆಯಲ್ಲೇ ನಿಂತಿದ್ದಾರು! ಅಹುದು; ನಿಶ್ಚಯ, ಅದೇ ಸ್ವಾಭಾವಿಕವಾದುದು!



## ಅಧ್ಯಾಯ ೫ "ವಿದ್ಯಾಪ್ರೌಢಿಮೆ-ಧಾರ್ಮಿಕದಿಗ್ವಿಜಯ"

ಶ್ರೀಅಚ್ಯುತಪ್ರೇಕ್ಷ ತೀರ್ಥರು, ತಮ್ಮ ಶಿಷ್ಯೋತ್ತಮನೊಂದಿಗೆ ದೇವಸ್ಥಾನದಲ್ಲಿ ಸ್ವಾಮಿಯನ್ನು ಸಂದರ್ಶಿಸಿದಾಗ್ಗೆ, ಅಲ್ಲಿದ್ದ ಒಬ್ಬ ಶ್ರೋತ್ರಿಯನ ಮೇಲೆ- ಹನ್ನೆರಡು ಸಂವತ್ಸರಗಳ ಹಿಂದೆ ಒಂದು ದಿನ ನಡೆದಂತೆಯೇ ಆ ದಿನವೂ ಆವೇಶ ಬಂದು, ಆತನು—"ಎಲೈ ಸನ್ಯಾಸಿಯೇ, ನೀನು ಬಹು ಕಾಲದಿಂದಲೂ, ನಿಜವಾದ ತತ್ವಜ್ಞಾನವನ್ನು ಬೋಧಿಸಿ ಧರ್ಮೋದ್ಧಾರ ಮಾಡಬಲ್ಲ ಒಬ್ಬ ಮಹಾತ್ಮನು ಉದಯಿಸಿ ತನ್ಮೂಲಕ ಲೋಕೋಪಕಾರವಾಗಲೆಂದು ನಿರ್ಮಲ ಮನಸ್ಸಿನಿಂದ ಭಗವಂತನನ್ನು ಆರಾಧಿಸಿದುದರ ಫಲವಾಗಿ ಪ್ರಾಪ್ತನಾಗಿರುವ ಇವರನ್ನು ವಹಿಸಿಕೋ" ಎಂದು ಪೂರ್ಣಪ್ರಜ್ಞರನ್ನು ಅವರ ಕೈಯಲ್ಲಿ ಒಪ್ಪಿಸಿದನು. ಅದನ್ನು ಕೇಳಿದ ಶ್ರೀಅಚ್ಯುತಪ್ರೇಕ್ಷರೂ ಇತರರೂ ಪರಮಾಶ್ಚರ್ಯಪಟ್ಟು, ಭಗವದನುಗ್ರಹದಿಂದ ಜನಿಸಿದ ಆ ಮಹಾತ್ಮರಿಂದ ನಿಜವಾಗಿ ಧರ್ಮೋದ್ಧಾರವುಂಟಾಗುವುದೆಂದು ನಂಬಿದರು.

ಶ್ರೀ ಪೂರ್ಣಪ್ರಜ್ಞರು-ಅಥವ ಮಧ್ವಾಚಾರ್ಯರು, ಕೇವಲ ಅಲ್ಪ ವಯಸ್ಕರಾಗಿದ್ದರೂ ಮಹಾ ಮೇಧಾವಿಗಳೆಂದೂ, ಸುಪ್ರಸಿದ್ಧ ತಾರ್ಕಿಕರೆಂದೂ, ಈ ವೇಳೆಗೇ ದೇಶದೇಶಗಳಲ್ಲೂ ಪ್ರಸಿದ್ಧವಾಗಿತ್ತು. ಗೌತಮರಿಂದ ಪ್ರತಿಷ್ಠಿತವಾದ ನ್ಯಾಯ ಮತ್ತು ಕಣಾದ ಮಹರ್ಷಿಗಳಿಂದ ಪ್ರತಿಷ್ಠಿತವಾದ ವೈಶೇಷಿಕ ಶಾಸ್ತ್ರಗಳಿಗೆ ಶಾಸ್ತ್ರಚರ್ಚಾ ಪ್ರಸಂಗಗಳಲ್ಲಿ ಬಹು ಮಹತ್ವವುಂಟು. ಕೇವಲ ಹನ್ನೆರಡು ವರ್ಷ ವಯಸ್ಸಿನಲ್ಲೇ ಅಂತಹ ದಿಗಂತ ವಿಶ್ರಾಂತವಾದ ಕೀರ್ತಿಯನ್ನು ಸಂಪಾದಿಸಲರ್ಹರಾದ ಆಚಾರ್ಯರ ಪ್ರತಿಭೆಯನ್ನು ಪ್ರತ್ಯಕ್ಷವಾಗಿ ನೋಡಬೇಕೆಂಬುದು ವಿದ್ವಾಂಸರಿಗೆ ಸ್ವಾಭಾವಿಕವಾಗಿ ಉಂಟಾದ ತರ್ಕ್ಕಾಪೇಕ್ಷೆಯಾಗಿರುವುದೆಂಬುದರಲ್ಲಿ ಆಶ್ಚರ್ಯವೇನೂ ಹೇಗಿರುವಲ್ಲ, ಆಚಾರ್ಯರು ಆಶ್ರಮಸ್ವೀಕಾರ ಮಾಡಿದ ನಾಲ್ವತ್ತು ದಿನಗಳೊಳಗಾಗಿ, ಪಂಡಿತ ವಾಸುದೇವಾಚಾರ್ಯರೆಂಬ ವಿದ್ವಾಂಸರೊಬ್ಬರು ತಮ್ಮ ಶಿಷ್ಯಮಂಡಲಿಯೊಂದಿಗೆ ಉಡುಪಿಗೆ ಬಂದು ಶ್ರೀಅಚ್ಯುತಪ್ರೇಕ್ಷರನ್ನು ಸಂದರ್ಶಿಸಿ ಶಾಸ್ತ್ರಚರ್ಚಾ ಸಭೆಯೊಂದು ನಡೆಯಬೇಕೆಂದು ಅಪೇಕ್ಷಿಸಿದರು. ಅತ್ಯಲ್ಪಕಾಲದಲ್ಲೇ ದೊಡ್ಡದೊಂದು ಸಭೆಯು ಸೇರಿಯಿತು. ಮಹಾ ವಿದ್ಯಾನಿಧಿಗಳೆಂದು ಸುಪ್ರಖ್ಯಾತರಾದ ಅಚ್ಯುತಪ್ರೇಕ್ಷರೂ-ಶ್ರೀಮಧ್ವಾಚಾರ್ಯರೂ ಅಧ್ಯಕ್ಷ ಉಪಾಧ್ಯಕ್ಷರಂತೆ ವಿಷ್ಟರಪೀಠಗಳನ್ನು ಅಲಂಕರಿಸಿದರು. ಮೊದಲು ಪಂಡಿತ ವಾಸುದೇವಾಚಾರ್ಯರ ಪೂರ್ವಪಕ್ಷವು ಆರಂಭವಾಯಿತು. ಅವರು ತಮ್ಮ ಸಿದ್ಧಾಂತವನ್ನು ಬಲಪಡಿಸಿಕೊಳ್ಳಲು ಸಾಧಕವಾಗಿ ಏಕಪ್ರಕಾರ ಮೂರು ದಿವಸಗಳವರೆಗೆ ಕೋಟಿಗಳನ್ನು ವಿಧಿಸುತ್ತಾ ನಡೆದರು. ಅವರು ಪೂರ್ವಪಕ್ಷ ಮಾಡುವ ಸಾಮರ್ಥ್ಯವನ್ನೂ ಅವರ ವಾಗ್ಝರಿಯನ್ನೂ ಕಂಡ ಸಭಿಕರು, ಈ ವಾದಿಸಿಂಹನನ್ನು ಎದುರಿಸಬಲ್ಲ ಪ್ರೌಢನಾವನೆಂದು ಗಾಬರಿಗೊಂಡಿದ್ದರು.

ಪಂಡಿತರ ಪ್ರಶ್ನಾವಳಿಯು ಮುಗಿಯಿತು. ಅವರು ಅವುಗಳಿಗೆ ಸಮಾಧಾನಗಳನ್ನು ಅಪೇಕ್ಷಿಸಿದರು. ಒಡನೆ ಶ್ರೀಮಧ್ವಾಚಾರ್ಯರು, ಆ ಪಂಡಿತರ ಮುಖ್ಯ ತಾತ್ಪರ್ಯವಿಂಥದೆಂಬುದನ್ನು ಸಂಗ್ರಹವಾಗಿ ಸಭೆಯವರಿಗೆ ತಿಳಿಹಿಸಿ ತರುವಾಯ ಅವರ ಪೂರ್ವಪಕ್ಷಗಳನ್ನು ಒಂದೊಂದನ್ನಾಗಿ ತೆಗೆದುಕೊಂಡು, ಪ್ರತಿಪಕ್ಷಗಳಿಂದ ಶಾಸ್ತ್ರಸಮಾಧಾನಗಳಿಂದ ಖಂಡಿಸುತ್ತಾ ನಡೆದರು. ಆಚಾರ್ಯರು ಸಂದರ್ಭಕ್ಕೆ ಅವಶ್ಯಕವಾದ ಪದಗಳಿಗಾಗಿ ಹುಡುಕದೆ, ವಿಷಯ

ಗಳಿಗಾಗಿ ಮಿಡುಕದೆ ವರ್ಷಾಕಾಲದ ನದೀಪ್ರವಾಹದಂತೆ ನಿಲ್ಲದೆ ಸಾಗಿದ ತಮ್ಮ ವಾಗ್ಧೋರಣಾಪ್ರವಾಹದಲ್ಲಿ ಆ ಮಹಾ ಸಭೆಯವರನ್ನೂ, ವಾದಿಯಾದ ಪಂಡಿತರನ್ನೂ-ತಮ್ಮ ಗುರುವಾದ ಅಚ್ಯುತಪ್ರೇಕ್ಷರನ್ನೂ, ತೇಲಿಸಿ ಕೊಂಡೊಯ್ದರು ಶ್ರೀಮದಾಚಾರ್ಯರ ಆ ಪ್ರತಿಭೆಯನ್ನು ಕಂಡು ಎಲ್ಲರೂ ಈ ಬಾಲಭುಜಗಳ ಮೇಲೆ ಮಹರ್ಷಿಯೋಗ್ಯವಾದ ಈ ವೃದ್ಧಶಿರವು ಹೇಗೆ ಬಂದಿತೆಂದು ಆಶ್ಚರ್ಯಚಕಿತರಾದರು

ಅಚ್ಯುತಪ್ರೇಕ್ಷರು ತಮ್ಮ ಶಿಷ್ಯರಾದ ಶ್ರೀಮಧ್ವಾಚಾರ್ಯರು ಇನ್ನು ಈ ಶಾಸ್ತ್ರಚರ್ಚೆಗಳನ್ನು ಸಾಕುಮಾಡಿ ಮತಗ್ರಂಥಗಳನ್ನು ಅಭ್ಯಸಿಸಲು ಯೋಗ್ಯರಾಗಿದ್ದಾರೆಂದು ತಿಳಿದು, ಯಾವುದಾದರೊಂದು ಕಠಿಣವಾದ ಅದ್ವೈತ ಗ್ರಂಥವನ್ನು ಪಠಿಸೋಣವೆಂದರು. ಅದರಂತೆಯೇ 'ಇಷ್ಟಸಿದ್ಧಿ' ಎಂಬ ಗ್ರಂಥವು ಪಾಠಕ್ಕಾಗಿ ಆರಿಸಿಕೊಳ್ಳಲ್ಪಟ್ಟಿತು ಮಂಗಳಾಚರಣವಾಗಿ ಆ ಗ್ರಂಥದ ಮೊದಲನೆಯ ಶ್ಲೋಕವನ್ನು ಓದಿದ ಒಡನೆಯೇ, ಶ್ರೀಮಧ್ವಾಚಾರ್ಯರಿಗೆ ಆ ಗ್ರಂಥದ ಆದ್ಯಂತ ಅರ್ಥವೂ ಮನಸ್ಸಿಗೆ ವ್ಯಕ್ತವಾಗಿ, ಆ ಒಂದು ಶ್ಲೋಕದ ಮೇಲೆಯೇ ಅವರು ಮೂವತ್ತೆರಡು ಆಕ್ಷೇಪಗಳನ್ನು ಸೂಚಿಸಿದರು. ಆವರೆಗೆ ಆ ಗ್ರಂಥದ ಮೇಲೆ ಹಾಗೆ ಆಕ್ಷೇಪವನ್ನು ತಂದವರು ಯಾರೂ ಇರಲಿಲ್ಲ ಗುರುಗಳು ಅವುಗಳಿಗೆ ಉತ್ತರವು ಗ್ರಂಥಾಂತ್ಯದಲ್ಲಿ ತಿಳಿಯುವುದೆಂದರು ಆದರೆ ಮಧ್ವಾಚಾರ್ಯರು ಅಷ್ಟರಿಂದಲೇ ತೃಪ್ತಿಪಡದೆ, ತಮ್ಮ ಪ್ರಶ್ನೆಗಳಿಗೆ ಸಮಾಧಾನ ಹೇಳಬೇಕೆಂದರು ಗುರುಗಳಿಗೇ ಬಹು ಕಷ್ಟಕ್ಕೆ ಬಂತು. ಏನೋ ಕೆಲವು ಉತ್ತರಗಳನ್ನು ಹೇಳಿದರು. ಆದರೆ ಮಹಾ ಮೇಧಾವಿಗಳಾದ ಶ್ರೀಮಧ್ವಾಚಾರ್ಯರು ಅವುಗಳನ್ನು ಒಪ್ಪಲಿಲ್ಲ. ಆಗ ಗುರುಗಳು ಶಿಷ್ಯನ ಮೊಂಡತನಕ್ಕಾಗಿ ಸ್ವಲ್ಪ ಕೋಪಿಸಿಕೊಂಡು-"ನೀವು ಹೇಳಿದಂತೆ ಕೇಳುವುದಿಲ್ಲವಾದುದರಿಂದ-ನಿಮಗಿನ್ನು ಪಾಠ ಹೇಳಲು ಸಾಧ್ಯವಿಲ್ಲ"ವೆಂದರು ಕೊನೆಗೆ ಮಧ್ವಾಚಾರ್ಯರೇ, ತಮ್ಮ ಆ ಮೂವತ್ತೆರಡು ಶಂಕೆಗಳಿಗೂ ತಕ್ಕ ಸಮಾಧಾನವನ್ನು ಹೇಳಿ, ಎಲ್ಲರನ್ನೂ ಬೆರಗುಮಾಡಿಬಿಟ್ಟರು.

ಪೂರ್ಣಪ್ರಜ್ಞಾಚಾರ್ಯರು ಪೂಜೆ-ಗುರು ಸೇವೆಗಳಲ್ಲಿ ನಿರತರಾಗಿಲ್ಲದಿದ್ದ ಕಾಲದಲ್ಲೆಲ್ಲಾ ಶ್ರೀಮನ್ಮಹಾವಿಷ್ಣು ಭಾಗವತವನ್ನು ಪಠಿಸುವುದರಲ್ಲಿ ತೊಡಗಿರುತ್ತಿದ್ದರು. ಪೂರ್ವಾಶ್ರಮದಲ್ಲಿ ಅವರ ಸಹಪಾಠಿಗಳಾಗಿದ್ದ ಅನೇ

ಕರು ಆಗಾಗರಲ್ಲಿಗೆ ಬಂದು ಆ ಮಹಾಗ್ರಂಥದ ವಿಷಯದಲ್ಲಿದ್ದ ತಮ್ಮ ಸಂದೇಹಗಳನ್ನು ನಿವೃತ್ತಿಮಾಡಿಕೊಂಡು ಹೋಗುತ್ತಿದ್ದರು. ಶ್ರೀಮಧ್ವಾಚಾರ್ಯರು ಆ ಪೂಜ್ಯಗ್ರಂಥದ ವಿಷಯದಲ್ಲಿ ಶ್ರೀವ್ಯಾಸರ ಅಭಿಪ್ರಾಯವನ್ನು ವ್ಯಕ್ತವಾಗಿ ತಿಳಿಸಿ ಅದರ ಸತ್ಯಯಥಾರ್ಥವಿಂಥದೆಂದು ಸ್ಪಷ್ಟಗೊಳಿಸಿದರು. ಈ ಹಿಂದೆ ಯಾರಿಂದಲೂ ಕೇಳಿ ಅರಿಯದಂಥಾ, ಆ ಗ್ರಂಥದ ಗೂಢಾರ್ಥಗಳನ್ನು ಶ್ರೀಮಧ್ವಾಚಾರ್ಯರ ಅಧಿಕಾರಯುಕ್ತವಾಣಿಯಿಂದ ಕೇಳಿ ಎಲ್ಲರೂ ಪರಮಾಶ್ಚರ್ಯಭರಿತರಾದರು. ಆದರೂ ಕೆಲವರು, ಚಿಕ್ಕ ವಯಸ್ಸಿನ ಆಚಾರ್ಯರು ಈ ಮಹಾ ಗ್ರಂಥದ ವಿಷಯದಲ್ಲಿ ಪಡುವ ಅಭಿಪ್ರಾಯವನ್ನು ನಂಬುವುದು ಅಸಾಧ್ಯವೆನ್ನಲು, ಪೂರ್ಣಪ್ರಜ್ಞರು ತಾವು ಆ ಗ್ರಂಥಕ್ಕೆ ಅಧಿಕಾರಿಗಳಾಗಿರುವೆವೆಂಬುದನ್ನು ಸ್ಥಾಪಿಸುವುದಕ್ಕಾಗಿ ಯಾವ ಬಗೆಯ ಪರೀಕ್ಷೆಗಾದರೂ ಸಿದ್ಧವಾಗಿದ್ದೇವೆಂದರು. ಒಡನೆ ಸಭಿಕರಲ್ಲೊಬ್ಬರು "ಹಾಗಾದರೆ, ಭಾಗವತದ ಪಂಚಮಸ್ಕಂಧದಲ್ಲಿನ ಗದ್ಯ ಭಾಗಗಳನ್ನೆಲ್ಲಾ ಬಾಯಿಪಾಠವಾಗಿ ಹೇಳೋಣವಾಗಲಿ" ಎಂದು ನುಡಿದರು. ಅದನ್ನು ಕೇಳಿ ಮಧ್ವಾಚಾರ್ಯರು ಶಂಕಿಸದೆ-ಬೆದರದೆ "ಸರಿ, ಹಾಗಾದರೆ ಗ್ರಂಥವನ್ನು ತೆಗೆದು ನೋಡಿಕೊಳ್ಳಿರಿ" ಎಂದು ನುಡಿದು ಪ್ರಾರಂಭಿಸಿದರು. ಒಂದೊಂದಾಗಿ ಅನೇಕ ಅಧ್ಯಾಯಗಳು ಸಾಗಿದುವು. ಒಂದು ಪದವಾಗಲೀ-ಅಕ್ಷರವಾಗಲೀ ಲೋಪವಾಗದೆ ತಡೆಬಡೆಯಿಲ್ಲದೆ, ಎಡಹು-ಮುಗ್ಗರಿಸುವಿಕೆಗಳನ್ನರಿಯದೆ, ಆ-ಊ ಗಳಿಲ್ಲದ, ಗಂಗಾ ಪ್ರವಾಹದಂತೆ ಸ್ಪಷ್ಟ ಉಚ್ಚಾರಣೆಯಿಂದ, ಕಂಚಿನ ಗಂಟೆಯ ಶಬ್ದದಂತೆ ಮನೋಹರವಾಗಿ ಹೊರಡುತ್ತಿದ್ದ ಆ ವಾಗ್ಧಾರೆಯಲ್ಲಿ ಸಕಲರೂ ಪರಮಾನಂದ ಸ್ವಾಂತರಾಗಿ 'ಧನ್ಯ-ಧನ್ಯ' ಎಂದುಕೊಳ್ಳುತ್ತಿರಲು ಆದ್ಯಂತವಾಗಿ ಸಮಸ್ತವನ್ನೂ ಹೇಳಿಬಿಟ್ಟರು. ಶ್ರೀಅಚ್ಯುತಪ್ರೇಕ್ಷರು ಪರಮಾಶ್ಚರ್ಯಪಟ್ಟು-"ಮಧ್ವಾಚಾರ್ಯ ಇದನ್ನು ನೀವು ಯಾವಾಗ ಕಲಿತಿರಿ" ಎಂದು ಕೇಳಲು, ಶ್ರೀಮಧ್ವಾಚಾರ್ಯರು, ಅದು ತಮ್ಮ ಪೂರ್ವಜನ್ಮದ ಅಭ್ಯಾಸದ ಫಲವೆಂದು ನುಡಿದರು. ಆ ವೇಳೆಗ ತನ್ನ ಸ್ಥಿತಿಯಲ್ಲಿ ಸ್ವಲ್ಪ ಮಟ್ಟಿಗೆ ಸಮಾಧಾನಗೊಂಡು, ಅವರಿವರು ಹೇಳುತ್ತಿದ್ದ ತನ್ನ ಮಗನ ಪ್ರತಿಭೆಯನ್ನು ಪ್ರತ್ಯಕ್ಷ ನೋಡಲೆಳಸಿ ಆಗಾಗ ಸಭೆಗೆ ಬಂದಿರುತ್ತಿದ್ದ ಮಧ್ಯಗೇಹಭಟ್ಟನು, ಈ ಅದ್ಭುತ ಪ್ರಜ್ಞಾಸಿದ್ಧಿಯನ್ನು ಕಂಡು, ತನ್ನ ಜನ್ಮವು ಸಾರ್ಥಕವಾಯಿತೆಂದುಕೊಳ್ಳುವನು!—

ತರುವಾಯ ಶ್ರೀಮದಾಚಾರ್ಯರು ಪುಣ್ಯ ತೀರ್ಥಗಳಲ್ಲಿ ಸ್ನಾನಮಾಡಿ ಬರಬೇಕೆಂದು ಅಪೇಕ್ಷಿಸಿ, ಗಂಗಾಸ್ನಾನಕ್ಕೆ ಹೋಗಲು ಅನುಮತಿಸಬೇಕೆಂದು ತಮ್ಮ ಗುರುಗಳನ್ನು ಪ್ರಾರ್ಥಿಸಿದರು ಅವರೆ ಅಷ್ಟು ಶೀಘ್ರವಾಗಿಯೇ ಅವರನ್ನು ಅಗಲಿರಬೇಕೆಂದರೆ ಅಚ್ಯುತಪ್ರೇಕ್ಷರು ಒಪಲಾರದಾದರು ಅವರು, ಆ ಸಂದರ್ಭದಲ್ಲಿ ತನಗೆ ಸಹಾಯ ಮಾಡೆಂದು, ಅನನ್ಯ ಭಕ್ತಿಯಿಂದ ಶ್ರೀಅನಂತೇಶ್ವರನನ್ನು ಪ್ರಾರ್ಥಿಸಿಕೊಂಡರು ಹೀಗಿರಲು ಒಂದು ದಿನ ಉತ್ಸವ ಕಾಲದಲ್ಲಿ ಒಬ್ಬನ ಮೇಲೆ ದೇವರ ಆವೇಶ ಬಂದು "ಇನ್ನು ಮೂರು ದಿನಗಳಲ್ಲಿ ನಿಮ್ಮ ಇಷ್ಟಾನುಸಾರ ದೇವಗಂಗೆಯು ಇಲ್ಲಿಗೇ ಬರುವಳು ನೀವು ಕಾಶಿಗೆ ಹೋಗಬೇಕಾದುದಿಲ್ಲ"ವೆಂದು ಹೇಳಿದನು ಆ ಮಾತನ್ನು ಕೇಳಿ, ಗುರು ಶಿಷ್ಯರಿಬ್ಬರೂ ಸಂತುಷ್ಟರಾದರು ಮುಂದೆ ಮೂರು ದಿನಗಳಲ್ಲಿ ಭಾಗೀರಥಿಯು ಪ್ರಾಪ್ತವಾಗಲು, ಗುರುಶಿಷ್ಯರೂ ಇತರ ಅನೇಕರೂ, ಈಗಲೂ ಮಧ್ವಸರೋವರವೆಂದು ಪ್ರಸಿದ್ಧವಾಗಿರುವ ಕೊಳಕ್ಕೆ ಹೋಗಿ, ಭಾಗೀರಥೀ ಸ್ನಾನದಿಂದ ಕೃತಾರ್ಥರಾದರು

ಮುಂದೆ ಒಂದೆರಡು ಸಂವತ್ಸರಗಳ ಕಾಲ ಕಳೆಯಿತು. ಶ್ರೀಮಧ್ವಾಚಾರ್ಯರ ಬುದ್ಧಿ ಸಂಪತ್ತಿಯನ್ನು ಕಂಡು ಸಂಪೂರ್ಣತೃಪ್ತರಾಗಿದ್ದ ಶ್ರೀಅಚ್ಯುತಪ್ರೇಕ್ಷರು ಅವರು ಸ್ವತಂತ್ರವಾದ ಒಂದು ಮಠಾಧಿಕಾರಕ್ಕೆ ಯೋಗ್ಯರಾಗಿದ್ದಾರೆಂಬುದನ್ನು ತಿಳಿದು, ಹಾಗೆ ಬೇರೆಯೊಂದು ಮಠಾಧಿಪತ್ಯಕ್ಕೆ ಪಟ್ಟಾಭಿಷೇಕ ಮಾಡಲು ಸಂಕಲ್ಪಿಸಿದರು ಅದರಂತೆ ಒಂದು ಶುಭದಿನವು ಆರಿಸಲ್ಪಟ್ಟಿತು ಸಕಲ ಪುಣ್ಯನದೀ ಜಲಗಳನ್ನೂ ಸಂಗ್ರಹಿಸಿದ್ದಾಯಿತು ಪಟ್ಟಾಭಿಷೇಕಕ್ಕೆ ಆವಶ್ಯಕವಾದ ಸೂಪಸ್ಕರಗಳೆಲ್ಲವೂ ಸಿದ್ಧಗೊಳಿಸಲ್ಪಟ್ಟುವು. ಶಾಲಿವಾಹನ ಶಕ ೧೦೫೮ ನೆಯ ಆನಂದನಾಮ ಸಂವತ್ಸರದ ಜ್ಯೇಷ್ಠ ಬಹುಳ ಪಂಚಮಿ ಶುಭದಿನದಲ್ಲಿ ಅಭಿಷೇಕ ಕಾರ್ಯವು ಮಹದುತ್ಸವದಿಂದ ನಡೆಯಿತು ಅಚ್ಯುತಪ್ರೇಕ್ಷರು, ತಮ್ಮ ಶಿಷ್ಯಾಗ್ರಣಿಯನ್ನು ಆಶೀರ್ವದಿಸುತ್ತಾ ಅವರನ್ನು ಶ್ರೀಆನಂದತೀರ್ಥರೆಂಬ ನೂತನ ನಾಮಧೇಯದಿಂದ ಕರೆದರು ಶ್ರೀಮಧ್ವಾಚಾರ್ಯರು ತಮ್ಮ ಅಪೂರ್ವ ಜ್ಞಾನವಿಶೇಷದಿಂದ ವೇದಶಾಸ್ತ್ರ ಪುರಾಣಾದಿಗಳ ದಿವ್ಯರಹಸ್ಯಗಳನ್ನೂ ಅರ್ಥವಿಶೇಷಗಳನ್ನೂ ನಿಸ್ಸಂದೇಹದಿಂದ ತಿಳಿಸುವ ಸಂಪೂರ್ಣ ಪ್ರಜ್ಞಾವಿಭೂಷಿತರಾಗಿದ್ದುದರಿಂದ ಅವರಿಗೆ ಪೂರ್ಣಪ್ರ

ಜ್ಞರು- ಹಾಗೂ ಆನಂದತೀರ್ಥರು ಎಂಬ ದಿವ್ಯನಾಮಗಳು ಅನ್ವರ್ಥಗಳಾದುವೆಂದು ಸಕಲರೂ ಹೇಳಿಕೊಳ್ಳುತ್ತಿದ್ದರು.

ಶ್ರೀಮದಾನಂದತೀರ್ಥರು ಮನೋಹರವಾದ ತಮ್ಮ ವಾಕ್ಯಸರಣಿಯೆಂಬ ಸುವರ್ಣಪಾತ್ರೆಯಿಂದ ಶ್ರೀಮದ್ಭಾಗವತ ಕಥಾಮೃತವನ್ನು ತುಂಬಿಹೊಯ್ದು ಸಕಲರನ್ನೂ ಸಂತೋಷಗೊಳಿಸುತ್ತಿದ್ದರು ಮೇಲೆ ಮೇಲೆ ಜನಸಮೂಹವು ಆವರಿಂದ ಭಾಗವತ ಕಥಾಶ್ರವಣಕ್ಕಾಗಿಯೇ ಹೆಚ್ಚುಹೆಚ್ಚಾಗಿ ಬರತೊಡಗಿತು. ಶ್ರೀಮದಾಚಾರ್ಯರು, ಮುಂದೆ ತಾವು ಸ್ಥಾಪಿಸಲುಳ್ಳ ದ್ವೈತಸಿದ್ಧಾಂತಕ್ಕೆ ಪೂರ್ವಸಿದ್ಧತೆಯೋ ಎನ್ನುವಂತೆ ಭಗವಂತನ ಪಾದಭಕ್ತಿಯನ್ನೇ ವಿಶೇಷ ರೀತಿಯಿಂದ ವರ್ಣಿಸುತ್ತಿರುವ ಭಾಗವತ ಗ್ರಂಥವನ್ನೇ ಪ್ರಾರಂಭಕ್ಕೆ ಆರಿಸಿಕೊಂಡು ಜನಗಳಿಗೆ ಬೋಧಿಸತೊಡಗಿದರು. ಇವರು ದ್ವೈತಮತಪ್ರತಿಪಾದಕರೆಂಬ ಪ್ರತೀತಿಯು ಎಲ್ಲೆಲ್ಲೂ ವ್ಯಾಪಿಸಿತು ದ್ವೈತಮತವು ಜೀವನಿಗೂ ಪರಮಾತ್ಮನಿಗೂ ಭೇದವಿದೆಯೆಂದು ಸಾಧಿಸಿ ಸಮರ್ಥಿಸತಕ್ಕುದು, ಅದ್ವೈತಮತವು, ಜೀವಪರಮಾತ್ಮರಿಗೆ ಭಿನ್ನವಿಲ್ಲವೆಂದು ಹೇಳುವುದು. ಅದ್ವೈತಮತವು, ದೃಶ್ಯವಾಗಿ ಕಾಣುವ ಈ ಜಗತ್ತು ಸುಳ್ಳು-ಅದು ಕೇವಲ ಭ್ರಾಂತಿಮೂಲವಾದ ನಮ್ಮ ಭಾವನೆಯು ಎಂದು ಹೇಳುವುದು. ದ್ವೈತವು, ಹಾಗಲ್ಲ, ಜಗತ್ತು ಶಾಶ್ವತವಾದುದು, ಸತ್ಯವಾದುದು ಎಂಬುದನ್ನು ಪ್ರತಿಪಾದಿಸುವ ಮತವು, ಹೀಗೆ ದ್ವೈತ-ಅದ್ವೈತ ಮತತತ್ವಗಳಿಗೆ ಪರಿವಿರೋಧಭಾವವಿದೆ ಹೀಗಿರುವಲ್ಲಿ ಶ್ರೀಮಧ್ವಾಚಾರ್ಯರು ಅದ್ವೈತ ತತ್ವಗಳನ್ನು ಪ್ರತಿಭಟಿಸಿ, ಜೀವಪರಮಾತ್ಮರಿಗೆ ಭೇದವುಂಟೇಉಂಟು, ಈ ಜಗತ್ತು ಸತ್ಯವಾದುದು, ಎಂದು ಸ್ಥಾಪಿಸತೊಡಗಿದ ವಿಚಾರಗಳು ಅದ್ವೈತವಾದಿಗಳ ದೃಷ್ಟಿಯನ್ನು ತಪ್ಪದೆ ಆಕರ್ಷಿಸತೊಡಗಿತು ಆಚಾರ್ಯರಿಗೆ ಪಟ್ಟವಾದ ಕೆಲದಿನಗಳೊಳಗಾಗಿ ಅದ್ವೈತ ಪಕ್ಷದ ವಾದಿಯೊಬ್ಬಾತನು ತನ್ನ ಶಿಷ್ಯರೊಂದಿಗೆ ಮಠಕ್ಕೆ ಬಂದು, ಆಚಾರ್ಯರನ್ನು ವಾದಭಿಕ್ಷೆಗೆ ಕರೆದನು ಎಂದಿನಂತೆ ಸಭೆ ನೆರೆಯಿತು. ಅಭೇದವನ್ನು ಸಾಧಿಸುತ್ತಾ ಆ ಪಂಡಿತನೂ, ಭೇದತತ್ವವನ್ನು ಸಾಧಿಸಿ ಶ್ರೀಮದಾಚಾರ್ಯರೂ ಬಹು ಹೊತ್ತು ವಾಗ್ವಾದ ಮಾಡಿದರು. ಕೊನೆಗೆ ಆಚಾರ್ಯರು, ಆ ಪಂಡಿತನು ಉದಹರಿಸಿದ ಶಾಸ್ತ್ರಾಧಾರಗಳಿಂದಲೇ ಆತನ ವಾದಗಳನ್ನು ಖಂಡಿಸಿ, ಭೇದವಾದವನ್ನೇ ಸ್ಥಾಪಿಸಿದರು.

ತರುವಾಯ ನಾವು ಪಂಚೇಂದ್ರಿಯಗಳಿಂದಲೂ, ನೋಡಿ, ಕೇಳಿ, ಮೂಸಿಸಿ, ರುಚಿನೋಡಿ, ಮುಟ್ಟಿ ತಿಳಿದು, ಸತ್ಯವೆಂದು ನಂಬುತ್ತಿರುವ-ಸಕಲ ವ್ಯವಹಾರಗಳಲ್ಲೂ ಸತ್ಯವೆಂದು ಭಾವಿಸುತ್ತಿರುವ ಈ ಜಗತ್ತನ್ನು ಅದ್ವೈತ ಶಾಸ್ತ್ರವಾದದ ರೀತ್ಯಾ ಅಸತ್ಯವೆಂದೂ ಭ್ರಾಂತಿಮೂಲವಾದುದೆಂದೂ ಆ ಪಂಡಿತರು ಸಿದ್ಧಾಂತಪಡಿಸಲೆಳೆಸಿದರು ಕಪ್ಪೆಚಿಪ್ಪಿನ ಒಳಭಾಗವು ರಜತಭ್ರಾಂತಿಯನ್ನುಂಟುಮಾಡುವುದು. ಆದರೆ ಅದನ್ನು ಪರೀಕ್ಷಿಸಿದರೆ ಹಾಗಲ್ಲವೆಂಬ ನಿಶ್ಚಯಸ್ವರೂಪವು ಗೋಚರಿಸಿದುವು. ಅದರಂತೆಯೇ ನಮ್ಮ ಕಣ್ಣಿಗೆ ತೋರುತ್ತಿರುವ ಈ ಪ್ರಪಂಚವು ನಮ್ಮ ಭ್ರಾಂತಿಯಿಂದಲೇ ಆ ರೀತಿ ತೋರುತ್ತಿರುವುದಲ್ಲದೆ ಸತ್ಯವಾಗಿ ಇರತಕ್ಕುದಲ್ಲ'' ಎಂದು ಅವರು ಸಮರ್ಥಿಸಿದರು. ಅದನ್ನು ಕೇಳಿದ ಆಚಾರ್ಯರು, ''ಹಾಗಲ್ಲ ಅದು ಕಪ್ಪೆಚಿಪ್ಪೆಂಬ ಪರಿಜ್ಞಾನವು ನಮಗಿರುವಲ್ಲಿ ಅದರಲ್ಲಿ ಬೆಳ್ಳಿಯಿರುವುದೆಂದು ಭ್ರಾಂತಿಗೊಳ್ಳಬೇಕಾದ ಕಾರಣವೇನಿದೆ? ಒಂದು ವಸ್ತುವನ್ನು ಕೈಯಿಂದ ಮುಟ್ಟಿದರೂ ಕಣ್ಣಿನಿಂದ ನೋಡಿದರೂ, ಆ ವಿಷಯವನ್ನು ಕಿವಿಯಿಂದ ಕೇಳಿದರೂ ಅದು ಸತ್ಯವಾಗಿ ಇರತಕ್ಕುದೆಂದು ತಿಳಿದರೆ ಆಮೇಲೂ ಆ ವಿಷಯದಲ್ಲಿ ಸಂಶಯಪಡಬೇಕಾದುದೇಕೆ? ಎಂದು ಮುಂತಾಗಿ ವಾದಿಸಿ ಹೀಗೆ ಶಬ್ದ ಪ್ರತ್ಯಕ್ಷ ಅನುಮಾನಾದಿ ಕಾರಣಗಳಿಂದಲೂ ತಮ್ಮ ಸಿದ್ಧಾಂತಗಳಿಗೆ ಪುಷ್ಟಿಯನ್ನುಂಟುಮಾಡಿ ಆ ವಾದಿಗಳನ್ನು ಗೆದ್ದರು.

ತರುವಾಯ ಕೆಲವು ದಿನಗಳ ಮೇಲೆ ಬಹು ಪ್ರಸಿದ್ಧರಾದ ವಾದಿಸಿಂಹ ಬುದ್ಧಿಸಾಗರರೆಂಬ ಬೌದ್ಧ ವಾದಿಗಳಿಬ್ಬರು ಉಡುಪಿಗೆ ಬಂದು ಶ್ರೀಯವರೊಂದಿಗೆ ವಾಗ್ವಾದ ಮಾಡಲು ಅಪೇಕ್ಷಿಸಿದರು ಆಚಾರ್ಯರು ಅದಕ್ಕೆ ಹಿಂದೆಗೆಯದೆ ಸಭೆಯನ್ನು ನೆರೆಯಿಸಿದರು. ಯಾರದು ಸರಿ-ಯಾರದು ತಪ್ಪೆಂದು ನಿರ್ಧರಿಸಲು ಬಹು ಬುದ್ಧಿಶಾಲಿಗಳಾದ ಪರೀಕ್ಷಕರು ಏರ್ಪಟ್ಟರು. ಬುದ್ಧಿಸಾಗರನು ತನ್ನ ಶೂನ್ಯವಾದವೆಂದರೆ, ದೇವರೇ ಇಲ್ಲವೆಂಬ ಮತವನ್ನು ಸಮರ್ಥಿಸಲು ಹದಿನಾರು ಪೂರ್ವಪಕ್ಷಗಳನ್ನು ತಂದಿಟ್ಟನು. ಆ ಸಂದರ್ಭದಲ್ಲಿ ಅವನು ಉದಹರಿಸಿದ ತರ್ಕಶಾಸ್ತ್ರ ವಿಚಾರಗಳನ್ನು ಕೇಳಿ ಇವುಗಳಿಗೆ ಶ್ರೀಯವರು ಏನು ಪ್ರತ್ಯುತ್ತರಗಳನ್ನು ಹೇಳಿ ಅವನನ್ನು ಗೆಲ್ಲುವರೋ ಎಂದು, ಸಭಿಕರೆಲ್ಲಾ ಗಾಬರಿಗೊಂಡಿದ್ದರು ಆದರೆ ಶ್ರೀಮದಾನಂದತೀರ್ಥರೆಂಬ

ಸೂರ್ಯಕಾಂತಿಯು ಎದುರಿನಲ್ಲಿ ಮಂಜಿನ ರಾಶಿಯು ಎಷ್ಟು ಮೊತ್ತವಾಗಿದ್ದರೆ ಭಯವೇನು? ಅವನ ಪೂರ್ವಪಕ್ಷವು ಮುಗಿದೊಡನೆಯೇ ಶ್ರೀಯವರು ಪ್ರಾರಂಭಿಸಿ, ವೇದಗಳು ವೇದಾಂಗಗಳು ಉಪನಿಷತ್ತುಗಳು ಮುಂತಾದುವುಗಳಿಂದ ಅನೇಕಾನೇಕ ವಾಕ್ಯಗಳನ್ನು ಉದಹರಿಸಿ, ಆತನ ತಾರ್ಕಿಕ ಪ್ರಶ್ನೆಗಳನ್ನೆಲ್ಲಾ ತ್ರಿವಿಧ ಪ್ರಮಾಣಗಳಿಂದಲೂ ಛಿನ್ನಭಿನ್ನಮಾಡಿ ಆಸ್ತಿಕ ಮತವನ್ನು ಸಿದ್ಧಾಂತಮಾಡಿದರು. ಆ ಇಬ್ಬರು ಬೌದ್ಧ ಪಂಡಿತರೂ, ಆ ತರುಣ ಸನ್ಯಾಸಿಯ ಪ್ರತಿಭೆಗೆ ಮಹದಾಶ್ಚರ್ಯಪಟ್ಟು-"ಮಿಕ್ಕ ವಾದವು ನಾಳೆ ಸಾಗಲಿ" ಎಂದು ತಪ್ಪಿಸಿಕೊಂಡು ಹೋಗಲು ಹವಣಿಸಿದರು. ಆದರೆ ಶ್ರೀಯವರು, ಎಂತೂ ಆ ದಿನಕ್ಕೆ ಸೋತೆವೆಂದು ಒಪ್ಪಿಕೊಳ್ಳಬೇಕೆನ್ನಲು, ಅವರೂ ಹಾಗೆ ಒಪ್ಪಿಕೊಂಡು, ಆ ರಾತ್ರಿಯೇ ಆ ಊರಲ್ಲಿ ನಿಲ್ಲದೆ ಯಾರಿಗೂ ತಿಳಿಯದಂತೆ ಪ್ರಯಾಣಮಾಡಿಬಿಟ್ಟರು. ಹೀಗೆ ಶ್ರೀಮದಾನಂದತೀರ್ಥರು ತಮ್ಮ ವಿದ್ಯಾಪ್ರೌಢಿಮೆಯಿಂದ ಅದ್ವೈತ ವಾದವನ್ನೂ ಬೌದ್ಧ ವಾದವನ್ನೂ ಅನೇಕ ಸಾರಿ ಗೆಲಿದು ಧಾರ್ಮಿಕ ದಿಗ್ವಿಜಯ ದುಂದುಭಿಯನ್ನು ಮೊಳಗಿಸಿದರು.



## ಅಧ್ಯಾಯ ೫ "ದ್ವೈತಮತಸ್ಥಾಪನೆ-ಶ್ರೀಕೃಷ್ಣ ಪ್ರತಿಷ್ಠೆ"

ಶ್ರೀಮನ್ಮಧ್ವಮತೇ । ಹರಿಃ ಪರತರಃ ಸತ್ಯಂಜಗತ್ತತ್ವತಃ ॥
ಭೇದೋಜೀವಗಣಾಃ । ಹರೇರನುಚರಾಃ ನೀಚೋಚ್ಚಭಾವಂಗತಾಃ ॥
ಮುಕ್ತಿರ್ನೈಜಸುಖಾನು । ಭೂತಿರಮಲಾ ಭಕ್ತಿಶ್ಚತತ್ಸಾಧನಂ ॥
ಹ್ಯಕ್ಷಾದಿತ್ರಿತಯಂಪ್ರಮಾಣ । ಮಖಿಲಾಮ್ನಾಯೈಕವೇದ್ಯೋ ಹರಿಃ ॥

ವಿದ್ಯಾರ್ಥಿಯು ತನ್ನ ಕಲಾಶಾಲಾ ವಿದ್ಯಾಭ್ಯಾಸವು ಮುಗಿದ ತರುವಾಯ ಪ್ರೌಢಿಮೆಯನ್ನು ಸಂಪಾದಿಸಲು ದೇಶಸಂಚಾರ ಮಾಡಬೇಕೆಂಬ ಈಗಿನ ಪದ್ಧತಿದಂತೆಯೇ, ಪೂರ್ವದಲ್ಲೂ ನಮ್ಮಲ್ಲಿ ವಿದ್ಯಾವ್ಯಾಸಂಗವು ಪೂರ್ತಿಯಾದ ತರುವಾಯ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಬೇಕೆಂಬ ವ್ಯಾಜದಿಂದ ದೇಶಸಂಚಾರವನ್ನು ಕೈಕೊಳ್ಳುತ್ತಿದ್ದ ಸಂಪ್ರದಾಯವಿತ್ತು. ಈಗಿನ ಅಂತಹ ದೇಶಸಂಚಾರವು ಕೇವಲ ಲೌಕಿಕ ವಿಷಯ ವಿಚಾರದ ಅಥವ ವಿಷಯ

ಲೋಲುಪತೆಯು ವಿಹಾರದ ಸ್ವರೂಪವನ್ನು ಹೊಂದಿದೆಯೆಂದರೆ ಪ್ರಾಜ್ಞರು ನಮ್ಮ ವಿಷಯದಲ್ಲಿ ಕೋಪಿಸಲಾರರಲ್ಲವೆ? ಪೂರ್ವದಲ್ಲಿದ್ದ ನಮ್ಮ ದೇಶದ ಸಂಪ್ರದಾಯವು ಧಾರ್ಮಿಕ ಪರವಾದುದಾಗಿ, ಆಸ್ತಿಕತೆ ದೈವಭಕ್ತಿ ಧರ್ಮಾಭಿಮಾನ ದೇಶಾಭಿಮಾನಗಳನ್ನು ಅಭಿವೃದ್ಧಿಗೊಳಿಸುವುದಾಗಿದ್ದಿತು

ನಮ್ಮ ಪೂರ್ವಿಕ ಸಂಪ್ರದಾಯಗಳ ವಿಚಾರದಲ್ಲಿ ಮಹಾ ಶ್ರದ್ಧಾಭಿಮಾನಗಳನ್ನುಂಟಾಗಿದ್ದ ಶ್ರೀಮದಾನಂದತೀರ್ಥರು ಪುಣ್ಯಕ್ಷೇತ್ರಗಳ ದರ್ಶನಕ್ಕಾಗಿ ಯಾತ್ರೆ ಮಾಡಬೇಕಂದು ಪುನಃ ತಮ್ಮ ಗುರುಗಳನ್ನು ಪ್ರಾರ್ಥಿಸಿದರು ಅಚ್ಯುತಪ್ರೇಕ್ಷರು ಈ ಸಾರಿಯೂ ಶ್ರೀಯುವರ ಅಪೇಕ್ಷೆಯನ್ನು ನಿರಾಕರಿಸಲಾರದ ಹೊರಡಲು ಅನುಮತಿಯಿತ್ತರು ಅಲ್ಲದೆ ತಾವೂ ಜೊತೆಗೆ ಹೊರಟರು. ಮೊದಲು ದಕ್ಷಿಣಕ್ಕೆ ರಾಮೇಶ್ವರಕ್ಕಾಗಿ ಯುಕ್ತಪರಿವಾರದೊಂದಿಗೆ ಯಾತ್ರೆ ಮಾಡಿದರು. ಉಡುಪಿಯಿಂದ ಹೊರಟು ಮಂಗಳೂರು ಮಾರ್ಗವಾಗಿ ವಿಷ್ಣುಮಂಗಲವೆಂಬ ಊರನ್ನು ತಲುಪಿ, ಅಲ್ಲಿಯ ಶ್ರೀವಿಷ್ಣು ದೇವಾಲಯದಲ್ಲಿಳಿದುಕೊಂಡರು ಶ್ರೀಮಧ್ವಾಚಾರ್ಯರ ಮನೋಹರಮೂರ್ತಿಯೂ, ಅವರ ಅಪ್ರತಿಮವಿದ್ಯಾಶ್ರೀಯೂ ಆಸ್ತಿಕರ ತಂಡತಂಡಗಳನ್ನೇ ಆಕರ್ಷಿಸುತ್ತಿತ್ತು. ಅನೇಕರು ಆ ಸನ್ಯಾಸಿಗಳನ್ನು ನಾನು ಮುಂದು ತಾನು ಮುಂದೆಂದು ಭಿಕ್ಷೆ ಪಾದಪೂಜೆಗಳಿಂದ ಸತ್ಕರಿಸುತ್ತಾ ಅವರ ದಿವ್ಯ ಧರ್ಮಬೋಧೆಯನ್ನು ಕೇಳಿ ತಣಿಯುತ್ತಿದ್ದರು. ಶ್ರೀಮಧ್ವಾಚಾರ್ಯರು ಚಿಕ್ಕ ಮಗುವಾಗಿದ್ದಾಗ ಒಂದು ಸಾರಿ ಪ್ರಕಟಿಸಿದ ಅವರ ಅಪೂರ್ವ ವಚನಶಕ್ತಿಯ ಪರಿಚಯವು ವಾಚಕರಿಗೆ ಇರುವುದಲ್ಲವೆ! ಈಗ ತರುಣಾವಸ್ಥೆಯಲ್ಲಿ ಅಂತಹ ಮತ್ತೊಂದು ಪ್ರಸಂಗವು ನಡೆಯಿತು ವಿಷ್ಣುಮಂಗಲದಲ್ಲಿ ಒಬ್ಬ ಗೃಹಸ್ಥನು ಭಿಕ್ಷೆ ಮಾಡಿಸಿದನು ಆತನ ಮನೆಯಲ್ಲಿ ಪಾದಪೂಜಾದಿಗಳು ನಡೆದುವು ಶ್ರೀಯುವರು ಸ್ವಾಮಿಯನ್ನು ಆರಾಧಿಸಿ ಸಕಲರನ್ನೂ ತೀರ್ಥಫಲಮಂತ್ರಾಕ್ಷತೆಗಳಿಂದ ಅನುಗ್ರಹಿಸಿದರು. ತರುವಾಯ ಸಕಲರಿಗೂ ದಿವ್ಯ ಭಕ್ಷ್ಯಭೋಜ್ಯಾದಿಗಳಿಂದೊಡಗೂಡಿದ ಮೃಷ್ಟಾನ್ನ ಭೋಜನವಾಯಿತು ಶ್ರೀಯುವರ ಭೋಜನವು ತೀರುವವೇಳೆಗ ಅವರಿಗೋಸ್ಕರವೆಂದೇ ತರಿಸಿಟ್ಟಿದ್ದ ದಪ್ಪವಾದ ಎರಡು ನೂರು ರಸಬಾಳೆಯ ಹಣ್ಣುಗಳ ಗೊನೆಯನ್ನು ಸ್ವಾಮಿಗಳ ಸಮ್ಮುಖಕ್ಕೆ ತಂದಿರಿಸಿ, ಆತನು ಅವುಗಳನ್ನು ಪರಿಗ್ರಹಿಸಬೇಕೆಂದು ಬೇಡಿಕೊಂಡನು.

ಮಧ್ವಾಚಾರ್ಯರು, ಹಸನ್ಮುಖದಿಂದ ಹಾಗೇ ಆಗಲೆಂದು, ಶಿಷ್ಯನು ಸುಲಿದು ಸುಲಿದು ಕೊಡುತ್ತಿರಲು ಆ ಇನ್ನೂರು ಹಣ್ಣುಗಳನ್ನೂ ತಿಂದು ಮುಗಿಸಿಬಿಟ್ಟರು. ಸಂಪೂರ್ಣ ಮೃಷ್ಟಾನ್ನ ಭೋಜನವಾದ ತರುವಾಯ ಅಷ್ಟು ಹಣ್ಣುಗಳನ್ನೂ ತಿಂದು ಲೇಶಮಾತ್ರವೂ ಆಯಾಸಪಡದೆ ಎಂದಿನಂತೆಯೇ ಇದ್ದುದನ್ನು ಕುರಿತು ಸಮಸ್ತರೂ ಅದ್ಭುತಪಟ್ಟು ಆಶ್ಚರ್ಯಮಗ್ನರಾಗಿ ಹೋದರು. ಆ ಗೃಹಸ್ಥನು ಅಂತಹ ಶಕ್ತಿಯು ಹೇಗೆ ಸಾಧ್ಯವೆಂದು ಶ್ರೀಯವರನ್ನು ಪ್ರಾರ್ಥಿಸಲು ಅವರು, ತಮ್ಮ ಉದರದಲ್ಲಿ ಶ್ರೀಹರಿಯು ಹೆಚ್ಚಿನ ಪ್ರಮಾಣವುಳ್ಳ ಜಠರಾಗ್ನಿಯನ್ನು ಇಟ್ಟಿದ್ದಾನೆಂದೂ ಅದು ಎಷ್ಟು ಪ್ರಮಾಣದ ಎಂತಹ ಆಹಾರವನ್ನಾದರೂ ಕ್ಷಣಮಾತ್ರದಲ್ಲಿ ಭಸ್ಮಮಾಡಲು ಶಕ್ಯವಾಗಿದೆಯೆಂದೂ ತಿಳಿಸಿ ಎಲ್ಲರನ್ನೂ ತೃಪ್ತಿಗೊಳಿಸಿದರು.

ಶ್ರೀಯವರು ಪರಿವಾರದೊಂದಿಗೆ, ಮುಂದೆ ತಿರುವಾಂಕೂರಿನ ಮುಖ್ಯ ಪಟ್ಟಣವಾದ ತಿರುವನಂತಪುರಕ್ಕೆ ಪ್ರಯಾಣಮಾಡಿ ಅಲ್ಲೊಂದು ದೇವಸ್ಥಾನದಲ್ಲಿ ಇಳಿದುಕೊಂಡರು ಆಚಾರ್ಯರ ಭಾಗವತ ತತ್ತ್ವಾರ್ಥವನ್ನೂ ಇತರ ಧಾರ್ಮಿಕ ಬೋಧೆಗಳನ್ನೂ ಕೇಳಲು ಅವರಲ್ಲಿಗೆ ಅನೇಕ ಜನಗಳು ಬಂದು ತೃಪ್ತರಾಗಿ ಹೋಗುತ್ತಿದ್ದರು. ಆ ಸ್ಥಳದಲ್ಲೇ ಶ್ರೀಯವರಿಗೂ ಅದ್ವೈತಪಂಥದ ಒಬ್ಬ ಸನ್ಯಾಸಿಗಳಿಗೂ ವಾದವು ನಡೆಯಿತು ಶ್ರೀ ಮಧ್ವಾಚಾರ್ಯರು ಶ್ರೀ ಶಂಕರಾಚಾರ್ಯರು ರಚಿಸಿದ ಬ್ರಹ್ಮಸೂತ್ರ ಭಾಷ್ಯವು ಸರಿಯಾದ ರೀತಿಯಲ್ಲಿ ವಿವರಿಸಲ್ಪಟ್ಟಿಲ್ಲವೆಂದು ಹೇಳಲು, ಆ ಅದ್ವೈತ ವಾದಿಗಳು "ನೀವು ನಿಮ್ಮದೊಂದು ಭಾಷ್ಯವನ್ನು ರಚಿಸದೆ, ಬಹು ಕಾಲದಿಂದ ಪ್ರಸಿದ್ಧವಾಗಿರುವ ಅದನ್ನು ನಿರಾಕರಿಸುವುದು ತಕ್ಕುದಲ್ಲವೆಂದೂ ನಿಮ್ಮಿಂದ ಸಾಧ್ಯವಿದ್ದರೆ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸಿ ನಿಮ್ಮ ಸಿದ್ಧಾಂತಗಳನ್ನು ಸ್ಥಾಪಿಸಿರೆಂದೂ ಪ್ರತಿವಾದಮಾಡಿದರು" ಶ್ರೀಮದಾಚಾರ್ಯರು ಅವರ ಪ್ರತ್ಯುತ್ತರವು ಯುಕ್ತವಾದುದೆಂದೊಪ್ಪಿಕೊಂಡು, ಹಾಗೆ ಸೂತ್ರಭಾಷ್ಯಗಳನ್ನು ರಚಿಸಬೇಕೆಂದು ಮನಸ್ಸಿನಲ್ಲಿ ಸಂಕಲ್ಪಮಾಡಿಕೊಂಡರು.

ಶ್ರೀಮದಾಚಾರ್ಯರು ತರುವಾಯ ರಾಮೇಶ್ವರಕ್ಕೆ ದಯಮಾಡಿಸಿ ಅಲ್ಲಿ ನಾಲ್ಕು ತಿಂಗಳಿದ್ದು, ಮುಂದೆ ಶ್ರೀರಂಗಕ್ಕೆ ನಡೆದರು. ಅಲ್ಲಿಂದ ಮಧುರೆಗೆ

ದಯೆಮಾಡಿಸಿ ಅಲ್ಲಿ ತಮ್ಮ ಆ ಸಂವತ್ಸರದ ಚಾತುರ್ಮಾಸ್ಯವನ್ನು ಕಳೆದರು ಮಧುರೆಯು ಅನಾದಿಕಾಲದಿಂದಲೂ ಸುಪ್ರಸಿದ್ಧ ವಿದ್ಯಾಪೀಠವೆನಿಸಿದ್ದು, ಆ ಸ್ಥಳದಲ್ಲೂ ಶ್ರೀಯವರು ತಮ್ಮ ಅಸಾಮಾನ್ಯ ವಿದ್ಯಾಪ್ರೌಢಿಮೆ ಯುಕ್ತಾ ಡುವುಗಳಿಗಾಗಿ ಪಂಡಿತಮಂಡಲಿಯಿಂದ ಮಾನ್ಯರಾದರು. ಮಧುರೆಯಿಂದ ಮುಂದಕ್ಕೆ ಪಯಶ್ವಿನೀ (ಈಗಿನ ಪಾಲಾರ್) ನದೀ ತೀರಕ್ಕೆ ಬಂದರು ಅದರ ಪಶ್ಚಿಮೋತ್ತರದಲ್ಲಿದ್ದ ಚಿತ್ರೂರೆಂಬ ಸ್ಥಳದಿಂದ ಆಚಾರ್ಯರೊಡನೆ ವಾದ ಮಾಡಲು ಅನೇಕ ಮಂದಿ ಶಾಸ್ತ್ರಜ್ಞರು ಬಂದರು. ಅಲ್ಲಿ ಅವರನ್ನು ಜಯಿಸಿ ಶ್ರೀಯವರು ಮುಂದಕ್ಕೆ ಪಾಲುಕೂಂಡವೆಂಬ ಸ್ಥಳದಲ್ಲಿ ನಿಂತರು ಅಲ್ಲಿಗೆ ಷಟ್ಶಾಸ್ತ್ರಪಾರಂಗತನಾದ ಒಬ್ಬ ಅದ್ವೈತಿಪಂಡಿತನು ಅವರೊಂದಿಗೆ ವಾದ ಕ್ಕಾಗಿ ಬಂದನು ಆಚಾರ್ಯರು ಈತನೊಂದಿಗ ಮಾತ್ರ ಬಹು ಶ್ರಮದಿಂದ ವಾದಮಾಡಿ ಎಂತೂ ಕೊನೆಗೆ ಸೋಲಿಸಿದರು ಈ ಸ್ಥಳದಲ್ಲಿ ಅವರ ಹೆಸ ರಿನಮೇಲೆ ಸ್ಥಾಪಿತವಾದ ಒಂದು ವಿಷ್ಣುದೇವಾಲಯವಿದ್ದು ಈಗ, ಅದು ಜೀರ್ಣಾವಸ್ಥೆಯಲ್ಲಿದೆ ಈ ಪಾಲುಕೊಂಡದಲ್ಲಿದ್ದಾಗ, ಅಲ್ಲಿಗೆ ಬಂದಿದ್ದ ಅನೇಕ ವಿದ್ವಾಂಸರೆದುರಿಗೆ ಶ್ರೀಯವರು, ವೇದಕ್ಕೆ ಮೂರರ್ಥವೂ, ಭಾರತಕ್ಕೆ ಹತ್ತು ಅರ್ಥವೂ, ವಿಷ್ಣುಸಹಸ್ರನಾಮದಲ್ಲಿರುವ ಪ್ರತಿಯೊಂದು ಪದಕ್ಕೆ ನೂರು ಅರ್ಥಗಳೂ ಇರುವುವೆಂದು ಹೇಳಿದರು ಅದನ್ನು ಕೇಳಿದ ಆ ಪಂಡಿ ತರು, ಅದು ಕೇವಲ ಅಲಂಕಾರಿಕವಿರಬಹುದೆಂದು ಆಚಾರ್ಯರ ಮಾತನ್ನು ಸ್ವಲ್ಪ ಲಾಘವವಾಗಿ ಕಾಣುವಂತೆ ತಿಳಿಯಬಂದುದರಿಂದ ಶ್ರೀಮದಾಚಾ ರ್ಯರು, ವಿಷ್ಣುಸಹಸ್ರನಾಮದ ಪ್ರಥಮಪದವಾದ 'ವಿಶ್ವಂ' ಎಂಬ ಒಂದು ಪದವನ್ನು ತೆಗೆದುಕೊಂಡು ಅದರ ಅರ್ಥವನ್ನು ನ್ಯಾಯವೇದಾಂತ ಮೀಮಾಂಸಾ ಸವ್ಯಾಕರಣಾದಿ ಶಾಸ್ತ್ರದೃಷ್ಟಿಗಳಿಂದ ಬಿಡಿಸಿಬಿಡಿಸಿ ಹೇಳುತ್ತಿರಲು, ಅವನ್ನು ಗ್ರಹಿಸುವುದು ಅಶಕ್ಯವಾಗಿ ಆ ಶ್ರೋತೃಗಳು ಆಚಾರ್ಯರ ಅನುಪಮಜ್ಞಾನ ಕ್ಕಾಗಿ ಪರಮಾಶ್ಚರ್ಯಪಟ್ಟು ಕ್ಷಮಿಸಬೇಕೆಂದು ಬೇಡಿಕೊಂಡರು. ಈ ಸ್ಥಳ ದಲ್ಲಿ ಪ್ರಸಿದ್ಧರಾದ ಬಹುಮಂದಿ ವಾದಿಗಳನ್ನು ಆಚಾರ್ಯರು ಜಯಿಸಿದ ಜ್ಞಾಪ ಕಾರ್ಥವಾಗಿ, ಆಚಾರ್ಯರ ಭಕ್ತರು, ಒಂದು ಜಯಸ್ತಂಭವನ್ನು ಸ್ಥಾಪಿಸಿದರು. ಅದು ಈಗಲೂ ಅಲ್ಲಿದೆಯೆಂದೂ, ಭಕ್ತರು ಅದಕ್ಕೆ ಪ್ರದಕ್ಷಿಣೆ ನಮಸ್ಕಾರಾದಿ ಗಳನ್ನು ಸಮರ್ಪಿಸುತ್ತಿರುವರೆಂದೂ ಪ್ರತೀತಿಯಿದೆ

ಸುಮುತ್ತಿನೀ ತೀರದಿಂದ ಶ್ರೀಯುವರು ಶಿಷ್ಯಪರಿವಾರದೊಂದಿಗೆ ಪ್ರಯಾಣವಮಾಡಿ, ಉಡುಪಿಯನ್ನು ಸೇರಿ, ಅಲ್ಲಿ ಕೆಲದಿನಗಳಿದ್ದರು ಆ ವೇಳೆಗೆ ತಮ್ಮ ಅವತಾರದ ಮುಖ್ಯೋದ್ದೇಶವು ಅತ್ಯಂತ ಬಲವತ್ತರವಾಗಿ ಅವರಿಗೆ ಗೋಚರವಾಗತೊಡಗಿತು ಒಡನೆ, ಶ್ರೀಕೃಷ್ಣಸ್ವಾಮಿಯಿಂದ ಅರ್ಜುನನಿಗೆ ಉಪದೇಶಿಸಲ್ಪಟ್ಟ ಶ್ರೀಮದ್ಭಗವದ್ಗೀತಾ ದಿವ್ಯಗ್ರಂಥಕ್ಕೆ ಭಾಷ್ಯವನ್ನು ರಚಿಸತೊಡಗಿದರು ಅಷ್ಟರಲ್ಲೇ ಶ್ರೀವ್ಯಾಸಮಹರ್ಷಿಗಳನ್ನು ಸಂದರ್ಶಿಸಿ ಬರಬೇಕೆಂಬ ಅಪೇಕ್ಷೆಯೂ ಉಂಟಾಯಿತು ಒಡನೆ ಶ್ರೀಅಚ್ಯುತಪ್ರೇಕ್ಷರಿಂದ ಅನುಮತಿಯನ್ನು ಪಡೆದು ಹೊರಟರು ಆ ವೃದ್ಧ ಸನ್ಯಾಸಿಗಳು ಅಷ್ಟು ಚಿಕ್ಕವಯಸ್ಸಿನಲ್ಲೇ ಅಪಾಯಕರವಾದ ಅವರ ಆ ದೂರ ಪ್ರಯಾಣಕ್ಕೆ ಸಂದೇಹಿಸಿರಲು ಮಧ್ವಾಚಾರ್ಯರು ಅವರಿಗೆ ತಕ್ಕಂತೆ ಸಮಾಧಾನ ಹೇಳಿ ಹೊರಟರು. ಮಧ್ಯಮಾರ್ಗದಲ್ಲೇ ಗೀತಾಭಾಷ್ಯವು ಪೂರ್ತಿಯಾಗಲು, ಅದನ್ನು ತಮ್ಮ ಶಿಷ್ಯರಿಗೆ ಬೋಧಿಸಿದರು ಆಗ ಅವರೊಂದಿಗಿದ್ದ ಶ್ರೀಸತ್ಯತೀರ್ಥರು, ಅವರ ಮಧುರ ವಾಣಿಗಾಗಿಯೂ ಅರ್ಥಗಾಂಭೀರ್ಯಕ್ಕಾಗಿಯೂ ಮನಸೋತು, ಬಹುಶೀಘ್ರಕಾಲದಲ್ಲಿಯೇ ಅದರ ಒಂದೆರಡು ಹಸ್ತಪ್ರತಿಗಳನ್ನು ಸಿದ್ಧಪಡಿಸಿ, ಶ್ರೀಗಳವರಿಗೊಪ್ಪಿಸಿದರು ಮಧ್ವಾಚಾರ್ಯರು ಅದನ್ನು ಕಂಡು ಅತ್ಯಂತ ತೃಪ್ತಿಪಟ್ಟು, ಅವುಗಳಲ್ಲೊಂದನ್ನು, ತಮ್ಮ ಅಗಲುವಿಕೆಯಿಂದ ಮರುಗುತ್ತಿದ್ದ ಶ್ರೀ ಅಚ್ಯುತಪ್ರೇಕ್ಷರಲ್ಲಿಗೆ ಕಳುಹಿಸಿದರು ಅವರು ಅದನ್ನು ಪಠಿಸಿ, ಶ್ರೀಕೃಷ್ಣನ ದಿವ್ಯವಾಕ್ಯಗಳ ನಿಶ್ಚಯಾರ್ಥವನ್ನು ವಿವರಿಸುತ್ತಿದ್ದ ಆ ಪೂಜ್ಯ ಗ್ರಂಥವನ್ನು ಸೃಷ್ಟಿಸಿದುದಕ್ಕಾಗಿ ಆಚಾರ್ಯರನ್ನು ಬಹುಮಟ್ಟಿಗೆ ಅಭಿನಂದಿಸಿದರು

ಇತ್ತ ಶ್ರೀಯುವರ ಪ್ರಯಾಣವು ಮುಂದಕ್ಕೆ ಸಾಗಿತು. ಕಾಶಿಯಲ್ಲಿ ಗಂಗಾಸ್ನಾನ ಪಂಡಿತಚರ್ಚೆ, ಮುಂತಾದುವುಗಳಿಂದ ಕೆಲದಿನಗಳು ಕಳೆದುವು ತರುವಾಯ ಮಿತಪರಿವಾರದೊಂದಿಗೆ ಶ್ರೀವೇದವ್ಯಾಸರ ಆವಾಸಸ್ಥಳವಾದ ಬದರಿಕಾಶ್ರಮವನ್ನು ಕುರಿತು ಹಿಮಾಲಯ ಪ್ರಾಂತದಲ್ಲಿ ಪ್ರಯಾಣ ಬೆಳೆಸಿದರು. ಪ್ರಥಮದಲ್ಲಿ ನರನಾರಾಯಣಸ್ವಾಮಿಯ ಆಲಯವು ಗೋಚರವಾಯಿತು ಶ್ರೀಗಳವರು ಆ ದೇವಾಲಯವಲ್ಲಿ-ಕೊರೆದು ಹೋಗುವ ಅಂತಹ ಹಿಮಗಡ್ಡೆಗಳ ಆ ಸ್ಥಳದಲ್ಲಿ, ಕೆಲವು ದಿನಗಳಿದ್ದು

ಏಕಾಗ್ರಚಿತ್ತದಿಂದ ತಪಸ್ಸುಮಾಡಿ ಆ ಮಹಾಸನ್ನಿಧಿಯಲ್ಲಿ ತಮ್ಮ ಗೀತಾಭಾಷ್ಯವನ್ನು ಪಠಿಸಿ ಸ್ವಾಮಿಗೆ ಸಮರ್ಪಿಸಿದರು ಒಂದು ದಿನ ರಾತ್ರಿ ಆದು ಸ್ವಾಮಿಯಿಂದ ಅನುಗೃಹೀತವಾದಂತೆ ಅಶರೀರವಾಣಿಯಾಯಿತು ಅದನ್ನು ಕೇಳಿ ಶ್ರೀಮದಾಚಾರ್ಯರು ಪರಮಸಂತುಷ್ಟರಾಗಿ ಮುಂದೆ ಶ್ರೀವ್ಯಾಸಾಶ್ರಮಕ್ಕೆ ಹೊರಡಲು ಸಿದ್ಧಪಡಿಸಿಕೊಳ್ಳಲೆಳಸಿ ಆ ಪೂಜ್ಯಋಷಿವರ್ಯರನ್ನು ದರ್ಶಿಸುವ ಯೋಗ್ಯತಾಸಿದ್ಧಿಗಾಗಿ ನಾಲ್ವತ್ತೆಂಟು ದಿನಗಳು ನಿರಾಹಾರಿಗಳಾಗಿದ್ದು ಮೌನವ್ರತವನ್ನು ಸಾಧನೆಮಾಡಿದರು. ಆಗ ಒಂದುಸಾರಿ ಶ್ರೀವ್ಯಾಸರು ದರ್ಶನವಿತ್ತು ತಮ್ಮ ಆಶ್ರಮಕ್ಕೆ ಬರಬೇಕೆಂದು ಅವರನ್ನು ಆಹ್ವಾನಿಸಿದರು ಶ್ರೀಯವರು ತಮ್ಮ ಪುಣ್ಯೋದಯಕ್ಕಾಗಿ ಪರಮಾನಂದಸ್ವಾಂತರಾಗಿ, ಅಲ್ಲಿಂದ ಹೊರಟು ಹಿಮಾಲಯದ ಅನೇಕ ಗುಡ್ಡಬೆಟ್ಟಗಳನ್ನೂ ವನನದಿಗಳನ್ನೂ ದಾಟಿ, ಹಸಿವು ಆಯಾಸಗಳನ್ನರಿಯದೆ ಕೊನೆಗೆ ವೈಕುಂಠ ಸದೃಶವಾದ ದಿವ್ಯಾಶ್ರಮದಲ್ಲಿ ಶ್ರೀಬಾದರಾಯಣ ಮಹರ್ಷಿಗಳನ್ನು ಕಂಡು ಸಾಷ್ಟಾಂಗ ದಂಡವತ್ಪ್ರಣಾಮ ಮಾಡಿದರು ಆ ಮಹಾತ್ಮರು ಶ್ರೀಮಧ್ವರನ್ನು ಪ್ರೇಮಪೂರ್ಣದೃಷ್ಟಿಯಿಂದ ಹಿಡಿದೆತ್ತಿ ಅವರಿಗೆ ಸಂಪೂರ್ಣ ಹರಿಭಕ್ತಿಯ ಶ್ರೇಷ್ಠಜ್ಞಾನವನ್ನು ಅನುಗ್ರಹಿಸಿದರು ಮಧ್ವಾಚಾರ್ಯರು ತಾವು ಆವರೆಗೇ ರಚಿಸಿದ್ದ ಗೀತಾಭಾಷ್ಯವನ್ನು ಅವರಲ್ಲಿ ಒಪ್ಪಿಸಲು, ಶ್ರೀವೇದವ್ಯಾಸರು ತಮ್ಮ ಉದ್ದೇಶವನ್ನು ಅನುಸರಿಸಿ ರಚಿಸಲ್ಪಟ್ಟ ಆದರ ಅರ್ಥಸಾಮಂಜಸ್ಯಕ್ಕಾಗಿ ತಲೆದೂಗಿ, ತಮ್ಮ ಬ್ರಹ್ಮಸೂತ್ರಗಳಿಗೂ ಹಾಗೆಯೇ ಭಾಷ್ಯವನ್ನು ರಚಿಸಬೇಕೆಂದು ಅನುಮತಿಯಿತ್ತರು.

ಶ್ರೀಮಧ್ವಾಚಾರ್ಯರು ಅಷ್ಟು ಮಾತ್ರ ಅನುಗೃಹೀತರಾದುದಕ್ಕಾಗಿ ಪರಮಾನಂದಪಟ್ಟು, ಅವರಿಂದ ಅಪ್ಪಣೆಪಡೆದು ಹಿಂದಿರುಗಿ ಉಡುಪಿಗೆ ನಡೆದು ಸೂತ್ರಭಾಷ್ಯಾದಿ ಗ್ರಂಥರಚನೆಯಲ್ಲಿ ಕೆಲಕಾಲವನ್ನು ಕಳೆದರು. ಆ ಕಾಲದಲ್ಲಿ ಅವರಿಂದ ರಚಿತವಾದ ಒಟ್ಟು ದ್ವೈತ ಸಿದ್ಧಾಂತ ಪ್ರತಿಪಾದಕಗಳಾದ ಗ್ರಂಥಗಳು ಮೂವತ್ತೇಳು ಈ ಚಿಕ್ಕ ಪುಸ್ತಕದಲ್ಲಿ ಹೆಚ್ಚು ವಿವರಣೆಗೆ ಅವಕಾಶವಿಲ್ಲವಾದುದರಿಂದ ಇಲ್ಲಿ ಕೇವಲ ಅವುಗಳ ಹೆಸರುಗಳನ್ನು ಮಾತ್ರ ಕೊಡುತ್ತೇವೆ (೧) ಬ್ರಹ್ಮಸೂತ್ರಭಾಷ್ಯ, (೨—೧೧) ಐತರೇಯ, ತೈತ್ತಿರೀಯ, ಈಶಾವಾಸ್ಯ, ತಲವಕಾರ, ಕಾಠಕ, ಮುಂಡಕ

(ಅಥರ್ವಣ), ಮಾಂಡೂಕ್ಯ, ಷಟ್ಪ್ರಶ್ನ, ಬೃಹದಾರಣ್ಯಕ, ಛಾಂದೋಗ್ಯ ಎಂಬ ದಶೋಪನಿಷದ್ಭಾಷ್ಯಗಳು. (೧೨) ಶ್ರೀ ಭಗವದ್ಗೀತಾಭಾಷ್ಯ, (೧೩) ಗೀತಾತಾತ್ಪರ್ಯ, (೧೪) ಶ್ರೀ ಮಹಾಭಾರತ ತಾತ್ಪರ್ಯನಿರ್ಣಯ, (೧೫) ಶ್ರೀಮದ್ಭಾಗವತತಾತ್ಪರ್ಯನಿರ್ಣಯ, (೧೬) ತಂತ್ರಸಾರ (೧೭-೨೬) ಪ್ರಮಾಣಲಕ್ಷಣ ಕಥಾಲಕ್ಷಣ, ಉಪಾಧಿಖಂಡನ, ಮಾಯಾವಾದಖಂಡನ, ಮಿಥ್ಯಾತ್ವಾನುಮಾನ ಖಂಡನ, ತತ್ತ್ವಸಂಖ್ಯಾನ, ತತ್ತ್ವವಿವೇಕ, ತತ್ತ್ವೋದ್ಯೋತ, ಕರ್ಮನಿರ್ಣಯ, ವಿಷ್ಣುತತ್ತ್ವನಿರ್ಣಯ ಎಂಬ ದಶಪ್ರಕರಣಗಳು, (೨೭) ಅಣುಭಾಷ್ಯ, (೨೮) ಯಮಕಭಾರತ, (೨೯) ಅನುವ್ಯಾಖ್ಯಾನ, (೩೦) ನ್ಯಾಯವಿವರಣ (೩೧) ಋಗ್ಭಾಷ್ಯ, (೩೨) ಜಯಂತೀನಿರ್ಣಯ, (೩೩) ಯತಿಪ್ರಣವಕಲ್ಪ, (೩೪) ಶ್ರೀಕೃಷ್ಣಾಮೃತಮಹಾರ್ಣವ, (೩೫) ನೃಸಿಂಹನಖಸ್ತೋತ್ರ, (೩೬) ಸದಾಚಾರಸ್ಮೃತಿ, (೩೭) ದ್ವಾದಶಸ್ತೋತ್ರ. ಈ ಮೂವತ್ತೇಳು ಗ್ರಂಥಗಳನ್ನು ರಚಿಸಿ, ತಮ್ಮ ದ್ವೈತ ಸಿದ್ಧಾಂತವನ್ನು ಶಾಶ್ವತವಾಗಿ ಪ್ರತಿಷ್ಠಮಾಡಿದರು.

ಒಂದಾನೊಂದು ದಿನ ಶ್ರೀಯವರು ಉಡುಪಿಯಿಂದ ಸಮುದ್ರಸ್ನಾನಕ್ಕೆಂದು ಹೊರಟು, ಮಧ್ಯಮಾರ್ಗದಲ್ಲಿ ಶ್ರೀ ವಿಷ್ಣುಮೂರ್ತಿಯಮೇಲೆ ದಿವ್ಯ ಶ್ಲೋಕಗಳನ್ನು ರಚಿಸಿ ಸ್ತುತಿಸುತ್ತಾ ನಡೆದರು. ಅಲ್ಲಿ ಸ್ನಾನಮಾಡಿ, ಆಹ್ನಿಕಕ್ಕಾಗಿ ತೀರದಲ್ಲಿ ಕುಳಿತಿರಲು ದೂರದಲ್ಲಿ ಒಂದು ಹಡಗು ಬಿರುಗಾಳಿಗೆ ಸಿಕ್ಕಿ-ಮಳಲರಾಶಿಯಲ್ಲಿ ಹೂತು ಮುಂದಕ್ಕೆ ಕದಲದಂತಾಯಿತು. ಆಗ ಹಡಗಿನಲ್ಲಿದ್ದವರು ಪ್ರಾಣಭಯದಿಂದ ತೀರದಲ್ಲಿ ಕುಳಿತಿದ್ದ ಶ್ರೀಯವರನ್ನು ಕಂಡು, ತಮಗೆ ಪ್ರಾಣದಾನಮಾಡಿ ಕಾಪಾಡಬೇಕೆಂದು ಕೂಗಿ ಮೊರೆಯಿಟ್ಟುಕೊಂಡರು. ಒಡನೆ ಶ್ರೀ ಆನಂದತೀರ್ಥರು ಆಪತ್ತಿಗೆ ಸಿಕ್ಕಿದ ಅವರಮೇಲೆ ಕನಿಕರಗೊಂಡು, ತಮ್ಮ ಕಾಷಾಯ ವಾರಿಯನ್ನು ಆಕಡೆಗೆ ಬೀಸತೊಡಗಲು, ಮಹಾವಾಯುವು ಉತ್ಪನ್ನವಾಗಿ ಆ ಹಡಗನ್ನು ಮಳಲರಾಶಿಯಿಂದ ಕದಲಿಸಿತು. ತರುವಾಯ ಸುರಕ್ಷಿತವಾಗಿ ದಡವನ್ನು ಸೇರಿದ ಆ ವರ್ತಕರು, ಕೆಳಗಿಳಿದುಬಂದು, ಶ್ರೀಯವರ ಪಾದಗಳಿಗೆರಗಿ ಹಡಗಿನಲ್ಲಿದ್ದ ಸಮಸ್ತವನ್ನೂ ವಹಿಸಿಕೊಂಡು ತಮ್ಮನ್ನು ಅನುಗ್ರಹಿಸಬೇಕೆಂದು ಬೇಡಿಕೊಂಡರು. ಆದರೆ ಪರಮನಿಸ್ಪೃಹಚಕ್ರವರ್ತಿಗಳಾದ ಶ್ರೀಮದಾಚಾರ್ಯರು, ಏನನ್ನೂ ತೆಗದು

ಕೊಳ್ಳದೆ, ಅವರಲ್ಲಿದ್ದ ಒಂದು ದೊಡ್ಡ ಗೋಪೀಚಂದನದ ಗಡ್ಡೆಯನ್ನು ಮಾತ್ರ ಸ್ವೀಕರಿಸಿದರು. ಅದನ್ನು ಶಿಷ್ಯರೊಂದಿಗೆ ಹೊರಿಸಿಕೊಂಡು ಬರುತ್ತಿರುವಾಗ ಮಾರ್ಗಮಧ್ಯದಲ್ಲಿ ಅದು ಒಡೆಯಲು, ಅದರೊಳಗಿದ್ದ ಶ್ರೀಕೃಷ್ಣಮೂರ್ತಿಯ ಪರಮಸುಂದರ ವಿಗ್ರಹವೊಂದು ಶ್ರೀಯವರಿಗೆ ದೃಷ್ಟಿಗೋಚರವಾಯಿತು. ಒಡನೆ ಅವರ ಮುಖಾರವಿಂದವು ಪ್ರಫುಲ್ಲಿತವಾಗಿ, ಆದಿನ ಬೆಳಗಿನಿಂದ ಅವರಿಗೆ ರಚಿಸುತ್ತಿದ್ದ ಸ್ತೋತ್ರವೇ ವರ್ಷಾಕಾಲದ ವಾರಿಧಾರೆಯಂತೆ ಮುಂಪರಿಸಿತು. ಹಾಗೆ ಆಗ ರಚಿತವಾದ ಸ್ತೋತ್ರವೇ ಶ್ರೀದ್ವಾದಶಸ್ತೋತ್ರವೆಂದು ಪ್ರಸಿದ್ಧವಾದ ಗ್ರಂಥವೆಂದು ಪ್ರತೀತಿ! ಮುಂದೆ ಅದೇ ಶ್ರೀಕೃಷ್ಣವಿಗ್ರಹವೇ ಉಡುಪಿಗೆ ತರಲ್ಪಟ್ಟು, ಮಹಾ ವಿಜೃಂಭಣೆಯಿಂದ ಪ್ರತಿಷ್ಠೆಮಾಡಲ್ಪಟ್ಟಿತು. ಅಂದಿನಿಂದ ಉಡುಪಿಯು ಕೋಟ್ಯಾನುಕೋಟಿ ಭಕ್ತಜನವೃಂದವನ್ನು ಆಕರ್ಷಿಸುತ್ತಾ ಭೂವೈಕುಂಠದಂತೆ ಮಂಗಳಕರವಾದ ಯಾತ್ರಾಸ್ಥಳವಾಗಿದೆ.

ಶ್ರೀಮದಾಚಾರ್ಯರು ಮೇಲ್ಕಂಡಂತೆ ಗ್ರಂಥರಚನೆಮಾಡಿ ದ್ವೈತಮತಸಿದ್ಧಾಂತಗಳನ್ನು ಸ್ಥಾಪಿಸಿ, ತಮ್ಮ ಶಿಷ್ಯವರ್ಗವು ಅವುಗಳನ್ನು ಅನುಸರಿಸುವಂತೆ ಆಜ್ಞಾಪಿಸಿದರು. ಶ್ರೀವಿಷ್ಣುಮೂರ್ತಿಯು ಹಸ್ತಾಯುಧಗಳಾದ ಶಂಖಚಕ್ರಾದಿಗಳುಳ್ಳ ಮುದ್ರಾಧಾರಣೆಯಿಂದ ಮನುಷ್ಯದೇಹವು ಪವಿತ್ರವಾಗುವುದೆಂದು ನಿರ್ಧರಿಸಿ, ತಮ್ಮ ಅನುಯಾಯಿಗಳು ಶ್ರೀವಿಷ್ಣುವಿನ ನಾಮಮುದ್ರೆಗಳನ್ನು ಧರಿಸಬೇಕೆಂದು ಏರ್ಪಡಿಸಿದರು. ಹರಿನಾಮಸ್ಮರಣೆ ಹರಿಭಜನೆಗಳಿಂದ ಅಂತಃಕರಣಪರಿಶುದ್ಧಿಯುಂಟಾಗುವುದೆಂದೂ, ಸಕಲರೂ ಸತ್ಯವಾದ ಪ್ರಿಯವಾದ ಹಿತವಾದ ವಚನಗಳಿಂದ ವ್ಯವಹರಿಸಬೇಕೆಂದೂ, ಸ್ವಾಧ್ಯಾಯ, ದಾನ ಪರಿರಕ್ಷಣ, ದಯಾ, ಸ್ಪೃಹಾ ಶ್ರದ್ಧಾ ಮುಂತಾದುವುಗಳಿಂದೊಡಗೂಡಿ ಶ್ರೀಹರಿಸೇವೆಯೆಂಬ ನಿಶ್ಚಲಮನೋಭಾವನೆಯಿಂದ ಲೋಕಕಾರ್ಯದಲ್ಲಿ ತೊಡಗಬೇಕೆಂದೂ ಬೋಧಿಸಿದರು. ಶ್ರೀವಿಷ್ಣು ಪ್ರೀತ್ಯರ್ಥವಾಗಿ ವ್ರತನಿಯಮ ಉಪವಾಸಾದಿಗಳನ್ನು ಮಾಡುತ್ತಾ, ದೇಹದಂಡನೆ ಮಾಡಿ, ಶ್ರೀಹರಿನಾಮಸ್ಮರಣೆ, ಹರಿಪಾದಭಜನೆ, ನಿಷ್ಕಾಮಬುದ್ಧಿಯಿಂದ ಮಾಡುವ ಹರಿಪಾದಸೇವೆಗಳಿಂದಲೇ ಮಾನವನು ಜನ್ಮಸಾರ್ಥಕ್ಯವನ್ನು ಹೊಂದಬೇಕೆಂದೂ ನಿರ್ಧರಿಸಿ ಬೋಧಿಸಿದರು.

ಶ್ರೀಮಧ್ವಾಚಾರ್ಯರ ಈ ನವೀನ ಸಿದ್ಧಾಂತವು ಜನಾಂಗಜೀವನಕ್ಕೆ ನವಚೈತನ್ಯವನ್ನು ತಂದುಕೊಟ್ಟಂತೆ ಆಗಲು, ಅನೇಕ ಸ್ಥಳಗಳಲ್ಲಿ ಆಚಾರ್ಯ ಪ್ರಶಂಸೆಯೂ, ಅವರ ಬೋಧನಾಪ್ರೌಢಿಮೆಯೂ ಸಹಸ್ರಮುಖಗಳಿಂದ ಕೀರ್ತಿಸಲ್ಪಟ್ಟುವು. ಆಗಲೂ ಕಲವಂದಿ ಅದ್ವೈತಿಪಕ್ಷದವರೊಂದಿಗೆ ಆಚಾರ್ಯರಿಗೆ ವಾದವು ಘಟಿಸಿತು. ಹಾಗೆ ಅವರೊಂದಿಗೆ ಕೊನಕೊನೆಗೆ ವಾದ ಮಾಡಿದವರಲ್ಲಿ ತೆಲುಗಾಣ್ಯದೇಶದ ಶೋಭನಭಟ್ಟರು, ಸ್ವಾಮಿಶಾಸ್ತ್ರಿಗಳು ಮತ್ತು ತ್ರಿವಿಕ್ರಮಪಂಡಿತರೆಂಬುವರೇ ಮುಖ್ಯರು ಈ ಮೂವರೂ ಆಚಾರ್ಯರೊಂದಿಗೆ ಬಹು ಘೋರವಾಗಿ ವಾದಿಸಿ ಕೊನೆಗೆ ಪರಾಜಿತರಾಗಿ ತಮ್ಮನ್ನು ಶಿಷ್ಯಕೋಟಿಗೆ ಸೇರಿಸಿಕೊಳ್ಳಬೇಕೆಂದು ಬೇಡಿಕೊಂಡರು. ಆಚಾರ್ಯರೂ ಅದಕ್ಕೆ ಒಪ್ಪಿದರು. ಇವರಲ್ಲಿ ಶೋಭನಭಟ್ಟರಿಗೆ ಪದ್ಮನಾಭತೀರ್ಥರೆಂದೂ, ಸ್ವಾಮಿಶಾಸ್ತ್ರಿಗಳಿಗೆ ನರಹರಿತೀರ್ಥರೆಂದೂ, ತ್ರಿವಿಕ್ರಮಪಂಡಿತರಿಗೆ ತ್ರಿವಿಕ್ರಮಪಂಡಿತಾಚಾರ್ಯರೆಂದೂ ನೂತನನಾಮಕರಣವಾಗಿ ಅವರು ದ್ವೈತ ಸಂಪ್ರದಾಯಾನುವರ್ತಿಗಳಾದರು. ಈ ತ್ರಿವಿಕ್ರಮಪಂಡಿತರ ಪುತ್ರರಾದ ನಾರಾಯಣಪಂಡಿತಾಚಾರ್ಯರವರೇ ಶ್ರೀ ಮಧ್ವಾಚಾರ್ಯರ ದಿವ್ಯಚರಿತ್ರೆಯನ್ನು ಕೀರ್ತಿಸುವ ಶ್ರೀಮಧ್ವವಿಜಯವೆಂಬ ಗ್ರಂಥರತ್ನವನ್ನು ರಚಿಸಿದ್ದಾರೆ

ಹೀಗೆ ಶ್ರೀಮನ್ಮಧ್ವಾಚಾರ್ಯರು ದ್ವೈತಮತಸ್ಥಾಪನೆಮಾಡಿ, ಶ್ರೀ ಕೃಷ್ಣಮೂರ್ತಿಯನ್ನು ಉಡುಪಿಯಲ್ಲಿ ಪ್ರತಿಷ್ಠಿಸಿ ಶ್ರೀವಿಷ್ಣುಸರ್ವೋತ್ತಮತ್ವವನ್ನು ನೆಲೆಗೊಳಿಸಿ ತಮ್ಮ ಸಿದ್ಧಾಂತಗಳನ್ನು ದೃಢಮೂಲಗೊಳಿಸಿದರು.



# ಉ ಪ ಸಂ ಹಾ ರ



ಶ್ರೀಮದಾನಂದತೀರ್ಥರ ಅವತಾರದಿಂದ ಜಗತ್ತಿನಲ್ಲಿ ಆಗಬೇಕಾಗಿದ್ದ ಕಾರ್ಯಗಳು ಮುಗಿದಂತೆ ತೋರಿದವು. ಶ್ರೀಯವರ ಶಿಷ್ಯರಾದ ನರಹರಿ ತೀರ್ಥರು ಕಳಿಂಗದೇಶದ ರಾಜಾಸ್ಥಾನದಲ್ಲಿ ಸುಪ್ರಸಿದ್ಧರಾಗಿದ್ದರು. ರಾಜನ ಬೊಕ್ಕಸದಲ್ಲಿ-ತ್ರೇತೆಯಲ್ಲಿ ಜನಕರಾಜ-ಲಕ್ಷ್ಮಣಾದಿಗಳಿಂದ ಪೂಜಿತವಾದ ಶ್ರೀ ಸೀತಾರಾಮರ ಮೂಲವಿಗ್ರಹವು ಇರುವುದೆಂಬುದನ್ನು ಆಚಾರ್ಯರು ತಿಳಿದು, ಶ್ರೀ ನರಹರಿತೀರ್ಥರ ಮೂಲಕ ಅವುಗಳನ್ನು ತರಿಸಿ, ತಮ್ಮ ಮಠದಲ್ಲಿ ಅವುಗಳಿಗೆ ಪರಂಪರೆಯಾಗಿ ಸೇವಾದಿಗಳು ನಡೆಯುವಂತೆ ಏರ್ಪಡಿಸಿ, ತಾವು ತ್ರೇತೆಯಲ್ಲಿ ಆಂಜನೇಯ ರೂಪಿನಿಂದ ಶ್ರೀರಾಮದೂತರಾಗಿದ್ದರೆಂಬುದನ್ನೂ, ಉಡುಪಿಯಲ್ಲಿ ಶ್ರೀಕೃಷ್ಣವಿಗ್ರಹವನ್ನು ಸ್ಥಾಪಿಸಿ, ಎಂಟುಮಠದ ಯತಿಗಳೂ ಅದನ್ನು ಅಹರ್ನಿಶಿ ಪೂಜಿಸುತ್ತಾ ಸೇವೆಮಾಡಿಕೊಂಡಿರಬೇಕೆಂದು ಏರ್ಪಡಿಸಿ, ದ್ವಾಪರದಲ್ಲಿ ತಾವು ಭೀಮಾವತಾರಿಗಳಾಗಿದ್ದರೆಂಬುದನ್ನೂ ಪ್ರಕಟಿಸಿದರು. ಪುನಃ ಮತ್ತೊಂದು ಸಾರಿ ಬದರೀ ಯಾತ್ರೆಯನ್ನು ಮಾಡಿ ತಾವು ರಚಿಸಿದ ಸೂತ್ರಭಾಷ್ಯಾದಿಗಳನ್ನೂ ಶ್ರೀ ವೇದವ್ಯಾಸರಿಗೆ ಸಮರ್ಪಿಸಿ ಅವರ ಸಮ್ಮತಿಯನ್ನು ಪಡೆದರು.

ಶ್ರೀಮನ್ಮಧ್ವಾಚಾರ್ಯರು ತಮ್ಮ ಅವತಾರಕೃತ್ಯವಾದ ಈ ಭಗವತ್ಕೈಂಕರ್ಯವನ್ನು ಸಾಂಗವಾಗಿ ಕೊನೆಗಾಣಿಸಿ ೭೯ ವರುಷ, ೬ ತಿಂಗಳು, ೨೦ ದಿನಗಳ ತಮ್ಮ ಅವತಾರ ಕಾಲಾವಧಿಯಲ್ಲಿ ೬೮ ವರ್ಷಕಾಲ ಸ್ವಯಂ ಪಟ್ಟವಾಳಿ, ತಮ್ಮ ಶಿಷ್ಯಶ್ರೇಷ್ಠರಾದ, ಪದ್ಮನಾಭತೀರ್ಥರು, ನರಹರಿತೀರ್ಥರು, ಮಾಧವತೀರ್ಥರು, ಅಕ್ಷೋಭ್ಯತೀರ್ಥರು ಎಂಬ ನಾಲ್ವರನ್ನು ದ್ವೈತ ಸಂಪ್ರದಾಯಪ್ರಚಾರಕರನ್ನಾಗಿ ನಿಯಮಿಸಿ, ಅವತಾರಸಮಾಪ್ತಿ ಮಾಡಲೆಳಸಿ, ತಮ್ಮ ಗುರುವರ್ಯರಾದ ಶ್ರೀ ವೇದವ್ಯಾಸರ ಸನ್ನಿಧಿಗೆ ಶ್ರೀ ಶಾಲಿವಾಹನಶಕೆ ೧೧೧೯ನೆಯ ಪಿಂಗಳನಾಮ ಸಂವತ್ಸರದ ಮಾಘಶುದ್ಧ ನವಮಿಯ ದಿನ ದಯೆಮಾಡಿಸಿದರು.

ಶ್ರೀಮನ್ಮಧ್ವಾಚಾರ್ಯರು ಸ್ವತಸ್ಸಿದ್ಧವಾದ ಜೀವಪರಮಾತ್ಮರ ಭೇದವನ್ನು ತತ್ವಶಾಸ್ತ್ರದೃಷ್ಟ್ಯಾ ಸ್ಥಾಪಿಸಿದರಲ್ಲದೆ, ಒಂದೇ ಜನಾಂಗಕ್ಕೆ ಸೇರಿದ ತಮ್ಮ ಸ್ವಜನಗಳಿಗೆ, ಅರ್ಥವಿಲ್ಲದ ಭಿನ್ನಭಾವವನ್ನಿಟ್ಟುಕೊಂಡು ಬಡಿದಾಡಿರೆಂದು ಬೋಧಿಸಲಿಲ್ಲ! ಸ್ನೇಹ, ದಯೆ, ಶಾಂತಿ, ಔದಾರ್ಯಗಳಿಂದೊಡಗೂಡಿ ಶ್ರದ್ಧಾಭಕ್ತಿಯಿಂದ ಶ್ರೀಹರಿಸೇವೆಯೆಂಬ ಐಕ್ಯಭಾವನೆಯಿಂದ ಲೌಕಿಕವನ್ನು ಸಾಗಿಸಿರೆಂದು ನುಡಿದರಲ್ಲದೆ, ಸ್ವಾರ್ಥತೆಯಿಂದ ಒಬ್ಬರೊಬ್ಬರ ಗಂಟಲನ್ನೊತ್ತಿ ಇಬ್ಬರೂ ಉಸಿರುಕಟ್ಟಿ ಪ್ರಾಣಬಿಡಿರೆಂದು ಹೇಳಲಿಲ್ಲ! ಜಗತ್ತು ಮಿಥ್ಯವಾದುದಲ್ಲ-ಭ್ರಮೆಯಲ್ಲ, ಸತ್ಯವಾದುದೆಂಬುದರಲ್ಲಿ ಪರಮಾತ್ಮನು ಹೇಗೋ ಪ್ರಕೃತಿಯೂ ಹಾಗೆಯೇ ನಾಶರಹಿತವಾದುದು ಎಂದರಲ್ಲದೆ, ಮನೆಮಾರು-ಭೂಮಿಕಾಣಿ, ಹೆಂಡರುಮಕ್ಕಳೂ ಶಾಶ್ವತವಾದುವೆಂದು ನಂಬಿ, ನಿಮ್ಮ ವಿಷಯಲೋಲುಪತೆಗೆ ದಾಸರಾಗಿ ಪ್ರಪಂಚಕ್ಕೆ ಗಂಟುಬಿದ್ದು, ಲೋಕಕಲ್ಯಾಣವನ್ನು-ಭಗವತ್ಕಾರ್ಯವನ್ನು ಮಾನಸಿಕವಾಡಿರೆನ್ನಲಿಲ್ಲ! ಈ ತತ್ವರಹಸ್ಯಗಳು ಸದ್ಯಃಕಾಲದಲ್ಲಿ ಭಾರತೀಯರ ಕಣ್ಣೆದುರಿನಲ್ಲಿದ್ದು ಅವರೂ, ಮುಖ್ಯವಾಗಿ ಎಲ್ಲರಿಗಿಂತಲೂ ಬಹು ಹೀನಸ್ಥಿತಿಯಲ್ಲಿರುವ- ಕರ್ಣಾಟಕರೂ ಶ್ರೀಮದಾಚಾರ್ಯರ ದೇಹದಾರ್ಢ್ಯ, ಶ್ರದ್ಧಾಭಕ್ತಿಗಳು, ಎಂದಿಗೂ ಕುಂದದ ಉತ್ಸಾಹ ಸಾಹಸ ಮುಂತಾದುವುಗಳನ್ನು, ಶ್ರೀಹರಿಯ ದಯೆಯಿಂದ ಗಳಿಸಿ ದೇಶೋದ್ಧಾರ ಕಾರ್ಯಕ್ಕೆ ನಡುವನ್ನು ಕಟ್ಟಲಿ! ಧರ್ಮೋದ್ಧಾರದ ಕಾರ್ಯಕ್ಕೆ ತನುಮನಧನಗಳನ್ನೆರೆಯಲು ಸಿದ್ಧರಾಗಲಿ !! ನಿಷ್ಕಾಮಕರ್ಮ ಮಾಡಲು ಸಂಕಲ್ಪಿಸಲಿ!!! ಶ್ರೀಹರಿಯು ಅಂತಹ ಶಕ್ತಿ ಸಾಮರ್ಥ್ಯ ಧೈರ್ಯ ಸ್ಥೈರ್ಯಗಳನ್ನು ಅವರಿಗೆ ಅನುಗ್ರಹಿಸಿ ರಕ್ಷಿಸಲಿ.

**ತಥಾಸ್ತು.**



-:- ಶ್ರೀರಾಮಸಹಾಯಂ -:-

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

---

**ಮುನ್ನುಡಿ:—**

ಈಗ "**ತಾತಾ**" ಎಂಬ ನಾಮವು ನಮ್ಮ ಈ ಭಾರತದೇಶದ ದೊಡ್ಡ ದೊಡ್ಡ ಪಟ್ಟಣಗಳಿಂದ ಕ್ಷುದ್ರ ಮೂರುಮನೆಯ ಹಳ್ಳಿಯವರೆಗಿನ ಪ್ರತಿಯೊಂದು ಊರಲ್ಲಿ ವಾಸಿಸುವ ಪ್ರತಿಯೊಬ್ಬನಿಗೂ ತಿಳಿದಿದೆ—ಪ್ರತಿಯೊಬ್ಬನಿಂದಲೂ ಉಚ್ಚರಿಸಲ್ಪಡುತ್ತಿದೆ ಆದರೆ ಅನೇಕರಿಗೆ ತಾವು ಹಾಗೆ ಉಚ್ಚರಿಸುತ್ತಿರುವ ಆ "**ತಾತಾ**" ಎಂದರೇನು ಆ ಹೆಸರಿನವರು ಯಾರು, ಎಂಬುದು ಮಾತ್ರ ತಿಳಿಯದು. 'ತಾತಾ ಮಿಲ್ಸ್ ಪಂಚೆ'ಗಳನ್ನು ಉಡದಿರುವವರೂ, ಆ ಕಂಪೆನಿಯ ಇತರ ಬಟ್ಟೆಗಳನ್ನು ಧರಿಸದಿರುವವರೂ ಅಪೂರ್ವ. ಹೀಗಿದ್ದು ನಮ್ಮ ಕಥಾನಾಯಕನಿಗೆ ಭಾರತದೇಶೀಯರು ಚಿರಋಣಿಗಳಾಗಿದ್ದಾರೆ.

ಜೇಮ್ಸ್‌ಸೇಟ್ಜೀ ನಸರ್ವಾನ್‌ಜೀ ತಾತಾ ಎಂಬುದು ಅವರ ಸಂಪೂರ್ಣವಾದ ಹೆಸರು. ಬೆಳ್ಳಿಯ ಒಳಲಿಯನ್ನು ಬಾಯಲ್ಲಿಟ್ಟುಕೊಂಡು ಹುಟ್ಟದೆ—, ಬಂಗಾರದ ತೊಟ್ಟಿಲಲ್ಲಿ ಮಲಗಿ ಬೆಳೆಯದಿದ್ದರೂ, ಅವರು ತಮ್ಮ ಜೀವಿತಯಾತ್ರೆಯಲ್ಲಿ ತೋರಿಸಿದ ಸದ್ಗುಣಸನ್ನಡತೆಗಳಿಂದಲೂ, ಆತ್ಮವಿಶ್ವಾಸ ದೃಢಚಿತ್ತತೆಗಳಿಂದಲೂ, ವ್ಯಾಪಾರ ಉದ್ಯೋಗಗಳಲ್ಲಿ ಪ್ರಕಟಿಸಿದ ಅತಿಶಯ ಉತ್ಸಾಹ-ಸೂಕ್ಷ್ಮಮತಿ-ಎಂತಹ ಕಷ್ಟಗಳಿಂದಲೂ ಕುಂದದ ದೃಢಪ್ರಯತ್ನ ಮುಂತಾದುವುಗಳಿಂದಲೂ ಅನ್ಯಾದೃಶವಾದ ಐಶ್ವರ್ಯವನ್ನು ಗಳಿಸಿದರು. ಹಾಗೆ ಅಗಣಿತ ಐಶ್ವರ್ಯವನ್ನು ಗಳಿಸಿದುದು ಮಾತ್ರವಲ್ಲ: ಆ ತಮ್ಮ ಸಂಪತ್ತನ್ನು ತಮ್ಮ ಸ್ವದೇಶದ ಕೈಗಾರಿಕೆ ವಿಜ್ಞಾನ ವ್ಯಾಪಾರ ಮುಂತಾದುವುಗಳ ಅಭಿವೃದ್ಧಿಗಾಗಿ ತಡೆಬಡೆಯಿಲ್ಲದೆ—ಹಿಂದೆಮುಂದೆ ನೋಡದೆ ಉದಾರಭಾವದಿಂದ ವಿನಿಯೋಗಿಸಿದರು. ಅಷ್ಟೇ ಅಲ್ಲ! ಆಯಾ ಕಾರ್ಯಗಳು ಶಾಶ್ವತವಾಗಿ ಜೀವಿಸಿ ತಮ್ಮ ಮಾತೃಭೂಮಿಯ ಗೌರವವನ್ನು ಅಕಳಂಕಿತವಾಗಿ ಮಾಡುವಂತೆ ಕೋಟ್ಯಾಂತರ ದ್ರವ್ಯವನ್ನು ಮೂಲಧನವಾಗಿಟ್ಟು, ತಮ್ಮ

ದೂರದರ್ಶಿತ್ವ, ಕಾರ್ಯಚಾತುರ್ಯ, ಧರ್ಮಪಕ್ಷಪಾತತೆ ಮುಂತಾದುವು ಗಳನ್ನೂ ಪ್ರದರ್ಶಿಸಿದರು.

ಸಾಮಾನ್ಯಸ್ಥಿತಿಯಲ್ಲಿ ಹುಟ್ಟಿದ ಶ್ರೀ ತಾತಾಯವರು ಐಶ್ವರ್ಯವನ್ನು ಗಳಿಸಿ, ಅಂತಹ ಮಹತ್ಕಾರ್ಯಗಳನ್ನು ಮಾಡುವುದಕ್ಕೆ ಅವರ ಅದೃಷ್ಟವೇ ಕಾರಣವೆಂದು ಹೇಳುವವರಿಗೆ ನಮ್ಮಲ್ಲಿ ಕಡಮೆಯಿಲ್ಲ! ಏಕೆಂದರೆ ಯಾವ ನೊಬ್ಬನು ಕಷ್ಟಸಾಧ್ಯವೆನಿಸಿದ್ದ ಯಾವುದೊಂದು ಕಾರ್ಯದಲ್ಲಿ ಜಯಶೀಲ ನಾಗಲು ಅವನು ನಿದ್ರೆಯಿಲ್ಲದೆ ಕಳೆದ ರಾತ್ರಿಗಳೆಷ್ಟು, ಅನ್ನವಿಲ್ಲದೆ ಕಳೆದ ದಿನಗಳೆಷ್ಟು, ಅನುಭವಿಸಿದ ಕಷ್ಟ ನಷ್ಟ ಸಂಕಟಗಳೆಷ್ಟು, ಹೊಂದಿದ ಮನಃ ಕ್ಲೇಶವೆಷ್ಟು, ಎಂಬುದನ್ನು ನಮ್ಮಲ್ಲಿ ಯಾರೂ ಗಮನಿಸುವುದಿಲ್ಲ ಅವನ ಅದೃಷ್ಟದಿಂದಲೇ ಆ ಕಾರ್ಯಸಾಧನೆಯಾಯಿತೆಂಬ ಒಂದು ಮೂಢ—ವಿಚಾರ ಹೀನ ಭಾವನೆಯು ನಮ್ಮಲ್ಲಿ ನೆಲೆಯಾಗಿ ನಿಂತುಬಿಟ್ಟಿದೆ. ಈ ಭಾವನೆಗೆ ದಾಸ ನಾಗಿ ಯಾವನೊಬ್ಬನೂ 'ಅದು ನನ್ನ ಅದೃಷ್ಟದಲ್ಲಿಲ್ಲ' ಎಂದು ನುಡಿದು ತನ್ನ ಸೋಮಾರಿತನವನ್ನು ಮರೆಮಾಡಿಕೊಳ್ಳಲು ಹೆಚ್ಚು ಅವಕಾಶ ದೊರೆಗಿದೆ. ಅಲ್ಲದೆ, ಬಂಜೆಯು ಪ್ರಸವವೇದನೆಯೆಂದರೆ ಎಂಥದು ಎಂಬುದನ್ನು ಹೇಗೆ ತಿಳಿಯಲಾರಳೋ ಹಾಗೆಯೇ ಸ್ವತಃ ಪರಿಶ್ರಮ ಮಾಡಿದವರಲ್ಲವಾದುದರಿಂದ ಅವರಿಗೆ ಕಾರ್ಯಜೀವಿಯ ಕಷ್ಟದ ನಿಶ್ಚಯ ಪ್ರಮಾಣವೂ ಅದರ ಸ್ಥಿತಿಯೂ ತಿಳಿಯಲಾರದು ಅಂಥವರು ಕಾರ್ಯಜಯ ಹೊಂದಿದವನಿಗೆ ಕೇವಲ ಅದೃ ಷ್ಟವೇ ಸಹಕಾರಿಯಾಗಿತ್ತೆಂದು ಹೇಳಿ ತಮ್ಮ ಸ್ಥಿತಿಯನ್ನೂ ನಿರುದ್ಯೋಗ ಪರತೆಯನ್ನೂ ಕಾಪಾಡಿಕೊಳ್ಳಲೆತ್ನಿಸುವರು. ಹಾಗಲ್ಲ! ಮೇಘಗಳಿಂದ ಜಲವೂ, ವೃಕ್ಷಗಳಿಂದ ಫಲವೂ, ಮಾತೃಗರ್ಭದಿಂದ ಶಿಶುವೂ ದೃಶ್ಯವಾದ ಕಾರ್ಯಕಾರಣ ಸಂಬಂಧಗಳಿಲ್ಲದೆ ಹೇಗೆ ಜನಿಸಲಾರವೋ—ಪ್ರತ್ಯಕ್ಷ ಕೈಯಿಂ ದೆತ್ತಿ ಅನ್ನವನ್ನು ಬಾಯಿಗೆ ಹಾಕಿಕೊಂಡು ಅಗಿದು ನುಂಗಿದರಲ್ಲದೆ ಹೊಟ್ಟೆ ಯು ಹೇಗೆ ತುಂಬಲಾರದೋ, ಹಾಗೆಯೇ ಯಾವುದೊಂದು ಕೆಲಸವೂ ಕೈ ಮುಟ್ಟಿ—ಮನಮುಟ್ಟಿ ಮಾಡದೆ ಆಗಲಾರದು. ನಮ್ಮ ಚರಿತ್ರನಾಯಕರಿಗೂ ಹಾಗೆಯೇ ಅವರು ಕೈಕೊಂಡ ಮಹತ್ಕಾರ್ಯಗಳಲ್ಲಿ ಜಯವೂ, 'ಹಿಂದೂ ಸ್ಥಾನದ ಕೈಗಾರಿಕೆಗಳ ಜನಕರು' ಎಂಬ ಬಿರುದೂ, ಅವರು ಸುಮ್ಮನೆ ಮನೆಯಲ್ಲಿ ಮಂಚದ ಮೇಲೆ ಸುಖವಾಗಿ ಉಂಡು ಕುಳಿತಿದ್ದುದಕ್ಕಾಗಿ ದೊರೆ

ಯುಲ್ಲ ಅವರು ತಮ್ಮ ಮಾತೃಭೂಮಿಯ ಉದ್ಧಾರಕ್ಕಾಗಿ ಪಟ್ಟ ಕಷ್ಟ ನಷ್ಟಗಳು ಒಂದೆರಡಲ್ಲ. ಅನುಭವಿಸಿದ ಮನಃಕ್ಲೇಶಗಳೂ ಸ್ವಲ್ಪವಲ್ಲ! ತಮ್ಮ ಉದ್ದಿಷ್ಟ ಕಾರ್ಯಕ್ಕೆ ವಿಘ್ನಕಾರಿಗಳಾಗಿ ಬಂದ ಅಡಚಣೆಗಳನ್ನು ವಜ್ರಹೃದಯದಿಂದ ಎದುರಿಸಿ, ಅಚಲಿತ ಮನೋಭಾವನೆಯಿಂದ ಕೋಟ್ಯಾಂತರ ದ್ರವ್ಯವನ್ನು ಧಾರಾಳವಾಗಿ ಖರ್ಚುಮಾಡಲು ಅಂಜದೆ ಮುಂದರಿಸಿದುದರಿಂದಲೇ ಅವರು ಅಗಾಧ ಕಾರ್ಯ ಮಾಡಲೂ, ತಮ್ಮ ಹೆಸರನ್ನು ಚಿರಸ್ಥಾಯಿಯನ್ನಾಗಿಸಲೂ ಸಾಧ್ಯವಾಯಿತು ಅವರ ಈ ಸಂಕ್ಷಿಪ್ತ ಚರಿತ್ರೆಯು, ನಮ್ಮ ಕನ್ನಡಿಗರಲ್ಲಿ ಕೇವಲ ಅದೃಷ್ಟವನ್ನೇ ನಂಬಿಕೊಂಡು ನಿರ್ವಿಣ್ಣರಾಗಿ ಮೂಲೆ ಹಿಡಿದು ಕುಳಿತಿರುವ ಒಬ್ಬಿಬ್ಬರನ್ನಾದರೂ, ಭಗವಂತನಲ್ಲಿ ಹೃದಯವನ್ನೂ ಪುರುಷಪ್ರಯತ್ನದಲ್ಲಿ ನಂಬಿಕೆಯನ್ನೂ ಇಟ್ಟು, ಕಾರ್ಯರಂಗಕ್ಕಿಳಿವಂತೆ ಹುರುಪುಗೊಳಿಸಬಲ್ಲುದಾದರೆ—ನಮ್ಮವರಲ್ಲೂ ಬೇಕಾದ ಹಾಗೆ ನಲಸಿ—ವಿನಿಯೋಗಕ್ಕೆ ಮಾರ್ಗಕಾಣದೆ ಕಾಡಿನಲ್ಲಿ ಕಾಯ್ದ ಬೆಳದಿಂಗಳಂತೆ ವ್ಯರ್ಥವಾಗುತ್ತಿರುವ ಸಂಪತ್ತಿನ ಕೆಲವಂಶವಾದರೂ ದೇಶೋದ್ಧಾರಕವಾದ ಕಾರ್ಯಗಳಿಗಾಗಿ ಉಪಯೋಗವಾಗಲು ಸಿದ್ಧವಾಗುವಂತೆ ಮಾಡಬಲ್ಲುದಾದರೆ ನಮ್ಮ ಶ್ರಮವು ಸಾರ್ಥಕವಾಯಿತೆಂದೆಣಿಸುವೆವು

ಬಂಗಳೂರು ಸಿಟಿ.
೧೧—೧೦—೧೯೨೬

ಇತಿ ಸುಜನ ವಿಧೇಯ,
ಯಂ. ರಾಮರಾವ್.

ಸುಬೋಧ ಮುದ್ರಣಾಲಯ, ಬೆಂಗಳೂರು ಸಿಟಿ —೧,೦೦೦ —೧೯೨೬

ಶ್ರಮುಗಳನೆಲ್ಲಮಂ ಸ್ವೈರಿಸಿವಾಣಿಜ್ಯ
ವೃತ್ತಿಗೆ ಗೌರವವನ್ನು ತಂದು
ಕೋಟ್ಯನುಕೋಟಿಯು ಧನವಸಂಪಾದಿಸಿ
ವರವಣಿಕ್ಪ್ರಭುವೆಂಬ ಪೆಸರಪಡೆದು
ನವನವಸತ್ಕಳಾನ್ವೇಷಣ ದೋಳ್ ತನ್ನ
ಧನವನ್ನು ಧಾರಾಳವಾಗಿ ಸುರಿದು
ದಾತರಿಗೆಲ್ಲ ವಿಧಾತ ತಾನೆಂಬಂತೆ
ಸರ್ವಸತ್ಕಾರ್ಯಂಗಳನ್ನು ಪೊರದು
"ತಾತ" ಅಕ್ಷಯಕೀರ್ತಿಯನ್ನಾರ್ಜಿಸಿದನು
ವಿಮಲತರವಾದ ಭಕ್ತಿಯು ಹೃದಯದೊಳಗೆ
ವರಶರತ್ಪೂರ್ಣಿಮಾಶಶಿಯಂತೆ ಬೆಳಗೆ
ಸಕಲಕಲ್ಯಾಣಗುಣಧನ್ಯ! ಸರ್ವಮಾನ್ಯ!

ಸರ್ವಮಾನ್ಯ ಶತಕ

ಸುಬೋಧ ಕುಸುಮಾಂಜಲಿ ಗ್ರಂಥಮಾಲಾ



ಹಿಂದೂಸ್ಥಾನದ ಕೈಗಾರಿಕೆಗಳ ಜನಕರಾದ

ಜೆ. ಎನ್. ತಾತಾ ಯವರು

ಶ್ರೀರಾಮಸಹಾಯಂ

ಹಿಂದೂಸ್ಥಾನದ ಕೈಗಾರಿಕೆಗಳ ಜನಕರಾದ

# ಜೆ. ಎನ್. ತಾತಾ



## ಅಧ್ಯಾಯ ೧ "ಜನನ–ಬಾಲ್ಯ"

ಪವಿತ್ರ ಚರಿತ್ರಳಾದ ನಮ್ಮ ಭಾರತಭೂಮಾತೆಯು ಕೇವಲ ಧರ್ಮ ವೀರರನ್ನು ಮಾತ್ರವಲ್ಲ, ರಣಧೀರರನ್ನು ಮಾತ್ರವಲ್ಲ, ದಾನಶೂರರನ್ನು ಮಾತ್ರವಲ್ಲ, ಜ್ಞಾನಿಗಳನ್ನು ಮಾತ್ರವಲ್ಲ, ತತ್ವಜ್ಞರನ್ನು ಮಾತ್ರವಲ್ಲ ಈ ಎಲ್ಲರಲ್ಲೂ ಆವಶ್ಯಕವಾಗಿರಬೇಕಾದ ಸಕಲ ಸದ್ಗುಣಗಳನ್ನೂ ಗಳಿಸಿ, ಅಚಲಿತಚಿತ್ತವೃತ್ತಿಯಿಂದ—ಅಖಂಡಪರಿಶ್ರಮದಿಂದ—ಫಲೋದಯಪರ್ಯಂತ ತಟಸ್ಥರಾಗದ ಮಹಾ ಕರ್ಮ ವೀರರನ್ನೂ ಪ್ರಸವಿಸಿರುವಳು. ಕರ್ಮವೆಂದರೆ ಕೇವಲ ಮತಸಂಬಂಧವಾದ—ಶ್ರೌತಸ್ಮಾರ್ತ ಕರ್ಮಗಳೆಂದು ಮಾತ್ರ ಅರ್ಥ ಮಾಡುವುದಾದರೆ ಅದು ಕೇವಲ ಸಂಕುಚಿತಾಭಿಪ್ರಾಯವೆಂದು ನಮ್ಮ ಭಾವನೆ. ಲೋಕಸಂಗ್ರಹಣೋದ್ದೇಶದಿಂದ ಕೈಕೊಳ್ಳುವ ಯಾವುದೊಂದು ಕಾರ್ಯವೂ ಕರ್ಮವೆನ್ನಿಸಿಕೊಳ್ಳುವುದು. ಅಂತಹ ಲೋಕಸಂಗ್ರಹಣ ಕಾರ್ಯವನ್ನು ಸ್ವಾರ್ಥತೆ, ಸ್ವಲಾಭ, ಸ್ವಪ್ರತಿಷ್ಠೆ ಮುಂತಾದುವುಗಳಿಂದ ಕಳಂಕಗೊಳಿಸದೆ ಅಖಂಡ ಚಿತ್ತವೃತ್ತಿಯಿಂದ ಮಾಡುವ ಮನೋಭಾವನೆಯೇ ಭಗವತ್ಪ್ರಿಯಕರವಾದ ಮಹಾಯಜ್ಞವು ಆ ಕಾರ್ಯದಲ್ಲಿ ಉದ್ಯುಕ್ತರಾಗ—ಕರ್ತೃವಿಗೆ ಸಹಾಯಕರಾಗತಕ್ಕವರೇ ಬ್ರಹ್ಮ, ಹೋತೃ, ಋತ್ವಿಕ್ಕು, ಪುರೋಹಿತ, ಮುಂತಾದ ಯಾಜ್ಞಿಕರು. ಅದರ ಸಿದ್ಧಿಗಾಗಿ ಕರ್ತೃವು ವಹಿಸತಕ್ಕ ಶ್ರದ್ಧೆ, ನಿಸ್ವಾರ್ಥತೆ,—ಸಹಿಸುವ ಕಷ್ಟನಷ್ಟಗಳು ಮುಂತಾದುವೇ

ಆಜ್ಯಾಹುತಿಗಳು. ಆ ಕಾರ್ಯದ ಮೂಲಕ ಸಿದ್ಧವಾಗತಕ್ಕ ಪದಾರ್ಥ ವಿಶೇಷವೇ ಯಜ್ಞಫಲವು. ಆ ಮಹತ್ಕಾರ್ಯದಲ್ಲಿ ತೊಡಗಿ ಅದರಿಂದ ಉಪ ಜೀವಿತರಾಗತಕ್ಕವರಿಗೆ ನಡೆವ ನಿತ್ಯಜೀವನವೇ ಯಜ್ಞಾಂಗವಾದ ಅನ್ನದಾ ನವು. ಕರ್ತೃವಿನ ಉದ್ದೇಶಾನುಸಾರವಾಗಿ ನೆರವೇರಿದ ಕಾರ್ಯಸಿದ್ಧಿಯೇ ಅವಭೃತವು. ಇಂತಹ ಮನೋಭಾವನೆಯಿಂದ ಪ್ರಕೃತ ಪ್ರಾಪಂಚಿಕ ಕಾ ರ್ಯಕಲಾಪಗಳಲ್ಲಿ ತೊಡಗಬೇಕಾಗಿದೆ. ''ಕೆಲಸ ಮಾಡುತ್ತೇವೆ—ಅದರಿಂದ ದುಡ್ಡು ಬರುತ್ತದೆ—ಜೀವನವೂ ಸಾಗುತ್ತದೆ, ಇಂತಹ ಸ್ವಾರ್ಥ ಮೂಲವಾದ ಈ ಕಾರ್ಯಕ್ಕೆ 'ಯಜ್ಞ' ವೆಂಬ ಈ ವೇಷವೇಕೆ'' ಎನ್ನಲಾಗದು ಯಾವು ದೊಂದು ಕಾರ್ಯಕ್ಕೂ ಮನೋಭಾವನೆಯೇ ಮುಖ್ಯ ಕಾರಣವು ಭಾವ ನಾ ಮೂಲವಾಗಿಯೇ ಕಾರ್ಯವು ಸತ್ವ—ರಾಜಸ—ತಾಮಸ ರೂಪಗಳನ್ನು ಹೊಂದುವುದು ಮತ್ತು ಮನಸ್ಸಿನಿಂದಲೇ ಒಂದು ಕಾರ್ಯದಲ್ಲಿ ಬಂಧನ ವಾಗಲಿ ಮೋಕ್ಷವಾಗಲಿ ಪ್ರಾಪ್ತಿಸುವುದು ಆದುದರಿಂದ ಕೆಲಸವಲ್ಲ— ಭಾವನೆಯೇ ಮುಖ್ಯವಾದುದು. ಭಾವನೆಯನ್ನು ಮೇಲ್ಕಂಡಂತೆ ಶುದ್ಧಗೊ ಳಿಸಿಕೊಂಡು ಎಂತಹ ಕಾರ್ಯದಲ್ಲಿ ತೊಡಗಿದರೂ ಅದರಿಂದ ಪಾಪಲೇಪವಾ ಗುವುದಿಲ್ಲ. ಸದ್ಯಃ ಕಾಲದಲ್ಲಿ ನಮ್ಮ ದೇಶಸ್ಥಿತಿಯಲ್ಲಿ ಈ ಬಗೆಯ ಮನೋ ಭಾವನೆಯಿಂದ ಪ್ರೇರಿತರಾಗಿ ಕಾರ್ಯರಂಗಕ್ಕಿಳಿವ ಕರ್ಮವೀರರೇ ಅಸಂಖ್ಯ ಸಂಖ್ಯೆಯಿಂದ ವೃದ್ಧಿಗೊಳ್ಳಬೇಕಾಗಿದೆ

ಮತ್ತೊಂದು ವಿಚಾರ—ದಾನಧರ್ಮ ಪರೋಪಕಾರಗಳೆಂದರೆ ನಮ್ಮಲ್ಲಿ ಆರ್ಷೇಯದಿಂದಲೂ ಒಂದು ಬಗೆಯ ಅಭಿಪ್ರಾಯವಿದೆ. ನಮ್ಮಲ್ಲಿಯ ಪ್ರಚ ಲಿತ ದೃಷ್ಟಿಯಿಂದ ದಾನಧರ್ಮಗಳೆಂದರೆ, ಕೇವಲ ಕೆರೆಕಟ್ಟೆ ಭಾವಿಗಳನ್ನು ನಿರ್ಮಿಸುವುದು, ಸತ್ರ ಮಠ ದೇವಸ್ಥಾನಗಳನ್ನು ನಿರ್ಮಿಸುವುದು, ಅಥವ ಅನ್ನದಾನ ಮಾಡುವುದು—ಸಾಲು ಮರಗಳನ್ನು ನೆಡಿಸುವುದು ಎಂದು ಮಾತ್ರ ಭಾವಿಸಲ್ಪಟ್ಟಿದೆ. ಆದರ ಪ್ರಕೃತ ಪ್ರಪಂಚಸ್ಥಿತಿಯು ಬದಲಾಗಿದೆ. ಜನ ಗಳ ಕಾರ್ಯಕ್ಷೇತ್ರವು ವಿಸ್ತರಿಸಿದೆ. ಜೀವನ ಯಾತ್ರೆಯು ವಿವಿಧ ಪಥಗಳನ್ನು ಹಿಡಿಯುತ್ತಿದೆ. ಆದುದರಿಂದ ಇತರ ಎಲ್ಲಾ ವಿಷಯಗಳಲ್ಲೂ ಹೇಗೋ ಹಾಗೆ ಯೇ ದಾನಧರ್ಮ ಪರೋಪಕಾರಗಳೆಂಬ ಮಾತುಗಳ ಅರ್ಥ ವ್ಯಾಪಕತೆಯ ವಿಷಯದಲ್ಲೂ ಸ್ವಲ್ಪ ಉದಾರ ಭಾವವನ್ನು ವಹಿಸಬೇಕಾಗಿದ ನಮ್ಮವರು

ಮತಸಂಬಂಧಗಳಾದ ಧರ್ಮ ಕರ್ಮ ವಿಚಾರಗಳನ್ನು ತಮ್ಮ ತಮ್ಮ ಸ್ವಂತ ನಡವಳಿಕೆಗೆ ಸಹಾಯಕಗಳನ್ನಾಗಿ ಬೇಕಾದ ಹಾಗೆ ಇಟ್ಟುಕೊಳ್ಳಲಿ! ಆದರೆ ಅನ್ನಾತುರನು ಯಾವ ಜಾತಿಯವನಾದರೂ ಅವನಿಗ ಕೊಡುವುದೂ ಅನ್ನ ದಾನವೇ ಎಂಬ ಭಾವನೆಯನ್ನು ವಹಿಸಬೇಕಾಗಿದೆ. ವಿದ್ಯಾತುರರಿಗೆ ವಿದ್ಯೆ, ಕೆಲಸವಿಲ್ಲದವರಿಗೆ ಕೆಲಸ—ತನ್ಮೂಲಕ ಜೀವನ, ವಿಚಾರವಿಹೀನರಿಗೆ ವ್ಯಾಪಾರ ಉದ್ಯೋಗ ಕೈಗಾರಿಕೆ ಮುಂತಾದ ವಿಚಾರಗಳ ತಿಳಿವಳಿಕೆ, ದೇಹಬಲ ಹೀನ ರಾದವರಿಗೆ ಅಂಗಪುಷ್ಟಿ ಸಾಧನೆಯ ಉಪಾಯಗಳಲ್ಲಿ ಬೋಧನೆ, ಅಷ್ಟು ಮಾತ್ರವಲ್ಲ—ಕಾಹಿಲೆಯಿಂದ ನರಳುವವರಿಗೆ ಚಿಕಿತ್ಸಾಗೃಹಗಳು, ದೇಶಭಾಷಾ ದಿಗಳ ಬೆಳವಣಿಗೆಗೆ ಸಹಾಯ, ಅನಾಥರಿಗೆ ಜೀವನಾಧಾರ ಕಲ್ಪನೆ, ಅಂಗ ಹೀನರಿಗೆ ವಾಸಸ್ಥಳಗಳು ಯೋಗ್ಯಪೋಷಣೆ ಮುಂತಾದುವುಗಳನ್ನು ಒದಗಿ ಸುವುದೂ ದಾನಧರ್ಮಗಳೇ ಎಂಬುವರ ಸತ್ಯತೆಯನ್ನು ತಿಳಿಯಬೇಕಾಗಿದ. ಈ ಮೂಲಕ ಸಾವಿರಾರು ಜನಗಳು ಪ್ರಯೋಜನವನ್ನು ಹೊಂದಿದರೆ ಅದು ಪರೋಪಕಾರವಲ್ಲವೆ? ನಮ್ಮ ದೇಶದಲ್ಲಿ ಉತ್ಪತ್ತಿಯಾಗಿ ಸರಿಯಾದ ಉಪ ಯೋಗ ಕಾಣದ ಕೊಳೆತು ನಾಶವಾಗುತ್ತಿರುವ ಅಸಂಖ್ಯ ವಸ್ತುಗಳು ಯೋ ಗ್ಯರೀತಿಯಿಂದ ಬಳಸಲ್ಪಡುವಂತಾದರೆ ಅವುಗಳಿಂದ ದೇಶೀಯರನೇಕರಿಗೆ ಜೀ ವನ ನಡೆಯುವುದಲ್ಲವೆ? ಹಾಗೆ ಸಾವಿರಾರು ಜನಗಳ ಸೋಮಾರಿ ಕೈಗಳಿಗೆ ಕೆಲಸ ದೊರೆತು ಅದರಿಂದ ಅವರ ಜೀವನವಾಗುವಂತಾದರೆ ಅದು ಧರ್ಮವೆನಿ ಸಿಕೊಳ್ಳಲಾರದೆ? ಅಷ್ಟು ಮಾತ್ರವಲ್ಲ, ನಿರುದ್ಯೋಗಿಗಳಾದ ಅವರು ಕಳವು ದರೋಡೆ ಮೊದಲಾದ ದುರ್ವೃತ್ತಿಗಳಿಗೆ ಪ್ರವೇಶಿಸಲವಕಾಶವಿಲ್ಲದಂತೆ ಇದ ರಿಂದ ತಡೆಯುಂಟಾಗಿ ಅವರು ಸನ್ಮಾರ್ಗದಲ್ಲಿ ನಡೆಯಲು ಅವಕಾಶವುಂಟಾ ಗುವುದಲ್ಲವೆ? ಇದು ಧರ್ಮ ಮತ್ತು ಪರೋಪಕಾರವಲ್ಲದೆ ಬೇರೇನು?

ನಮ್ಮ ದೇಶದಲ್ಲಿ ಧನವಂತರಿಲ್ಲದಿಲ್ಲ, ಪ್ರಜ್ಞಾವಂತರಿಗೆ ಕ್ಷಾಮವಿಲ್ಲ; ಕಾರ್ಯಚತುರರಿಗೆ ಕೊರತೆಯಿಲ್ಲ! ಆದರೆ ನಮ್ಮಲ್ಲಿ ಕಾರ್ಯಾಭಿವೃದ್ಧಿಗೆ ಒಂದು ದೊಡ್ಡ ಪ್ರತಿಬಂಧಕವಿದ. ಧನವಂತರಿಗೂ ಪ್ರಜ್ಞಾವಂತರಿಗೂ ಸಂ ಬಂಧವಿಲ್ಲ—ಪ್ರಜ್ಞಾವಂತರಿಗೂ ಕಾರ್ಯಕುಶಲರಿಗೂ ಭೇಟಿಯಿಲ್ಲ. ಕಾ ರ್ಯಕುಶಲರು (Artisans) ವಿಜ್ಞಾನ ಶಾಸ್ತ್ರವೇತ್ತ (Scientists) ರನ್ನು ಕಾಣಲಾರರು. ವಿಜ್ಞಾನ ನಿಧಿಗಳು ಧನವಂತರ (Capitalists) ನ್ನು

ಅನುಸರಿಸಲಾರರು. ಧನವಂತರು ಅವರಿಬ್ಬರನ್ನೂ ನಂಬಲಾರರು. ಹೀಗಾಗಿ ಧನವಂತರ ಅಪಾರ ಐಶ್ವರ್ಯವು ಪರದೇಶೀಯ ಭೋಗಸಾಮಗ್ರಿಗಳನ್ನು ಬೆಲೆ ಮಾಡುವುದರಲ್ಲಿ ಅಪವ್ಯಯವಾಗುತ್ತಿದೆ. ಪ್ರಜ್ಞಾವಂತರ ಪ್ರಜ್ಞೆಯೂ, ಕಾರ್ಯಚತುರರ ಹಸ್ತಕೌಶಲ್ಯವೂ ತಕ್ಕ ಪ್ರೋತ್ಸಾಹವಿಲ್ಲದೆ ಅವರಲ್ಲೇ ಕೊಳೆಯುತ್ತಿವೆ ಹಾಗಲ್ಲದೆ ಧನವಂತರು ಪ್ರಜ್ಞಾವಂತರ ಪ್ರಜ್ಞೆಯು ಮತ್ತು ಕಾರ್ಯಚತುರರ ಹಸ್ತ ಕೌಶಲ್ಯದ ಪ್ರಯೋಜನವನ್ನು ಹೊಂದಿ, ತಮ್ಮ ಸುಖಸಂಪತ್ತುಗಳನ್ನು ಸ್ವಜನರ ಅಲ್ಪಜೀವನದೊಂದಿಗಾದರೂ ಉಪಭೋಗಿಸಲು ಇಷ್ಟಪಡುವಂತಾದರೆ, ಆಹಾ ನಮ್ಮಲ್ಲೂ ಎಂತೆಂತಹ ಕಾರ್ಯಗಳು ನಡೆಯಬಹುದು! ದೇಶವು ಎಷ್ಟು ಮಟ್ಟಿಗೆ ಅಭಿವೃದ್ಧಿಯಾಗಬಹುದು! ಹಾಗೆ ಪರರ ಪ್ರಜ್ಞಾ ಮತ್ತು ಕಾರ್ಯಚತುರತೆಗಳ ಪ್ರಯೋಜನ ಹೊಂದಿ, ತಮ್ಮ ಧನವನ್ನು ಯೋಗ್ಯಮಾರ್ಗದಲ್ಲಿ ವಿನಿಯೋಗಿಸಿ ದೇಶಸೇವೆ ಮಾಡಿದವರಲ್ಲಿ ನಮ್ಮ ಚರಿತ್ರನಾಯಕರು ಪ್ರಥಮರು—ಅಗ್ರಗಣ್ಯರು ಇವರ ಉದಾಹರಣೆಯನ್ನು ಅನುಸರಿಸಿಯೇ ಹಿಂದೂಸ್ಥಾನದ ಮುಂಬಾಯಿ ಮುಂತಾದ ಮುಖ್ಯ ಸ್ಥಳಗಳಲ್ಲಿ ಕೈಗಾರಿಕೆಯ ಕಾರ್ಯಸ್ಥಾನಗಳು (ಮಿಲ್ಸ್ ಮುಂತಾದುವು) ಹುಟ್ಟಿ ಬೆಳೆದುವು. ಆದುದರಿಂದಲೇ ಅವರಿಗೆ 'ಹಿಂದೂಸ್ಥಾನದ ಕೈಗಾರಿಕೆಗಳ ಜನಕರು' ಎಂಬ ನಾಮವು ಅನ್ವರ್ಥವಾದುದಾಗಿದೆ

ನಮ್ಮ ಮಾತೃಭೂಮಿಯಾದ ಈ ಭಾರತದೇಶವು ಅನಾದಿ ಕಾಲದಿಂದಲೂ, ಶತ್ರುಗಳಿಂದ ಭೀತರಾಗಿ ಓಡಿಬಂದ ಪರದೇಶೀಯರಿಗೆ ಆಶ್ರಯವನ್ನೀಯುವುದರಲ್ಲಿ ಹಿಂದೆಗೆದುದಿಲ್ಲ! ಸದ್ಯಃ ಇಲ್ಲಿ ವಾಸವಾಗಿರುವ ಮೂವತ್ತುಮೂರು ಕೋಟಿ ಪ್ರಜಾಸಂಖ್ಯೆಯಲ್ಲಿ ಮೂಲನಿವಾಸಿಗಳಲ್ಲದೆ, ಹಾಗೆ ಭೀತರಾಗಿ ಬಂದು ನೆಲೆಗೊಂಡವರು ಕೆಲವರು ಪರಪ್ರಾಂತಗಳಲ್ಲಿ ಜೀವನ ದೊರೆಯದೆ ಆರ್ತರಾಗಿ 'ನೀನೇ ಗತಿ' ಯೆಂದು ನಮ್ಮೀ ದೇಶಮಾತೆಯ ಗರ್ಭವಾಸವನ್ನು ಕೋರಿ ಬಂದವರು ಹಲವರು. ತಮ್ಮ ದೇಶಗಳಲ್ಲಿ ತಮ್ಮ ವ್ಯಾಪಾರ ಉದ್ಯೋಗಗಳು ಸಾಗದಿರಲು ಇಲ್ಲಿ ಅವುಗಳನ್ನು ಮಾಡಿ ಬದುಕೋಣವೆಂದು ಬಂದು ಆಶ್ರಯ ಹೊಂದಿದವರು ಮತ್ತೆ ಕೆಲವರು ಹೀಗೆ ನರಿಗಳಂತೆ ಬಾಲವನ್ನು ಮುದುರಿಕೊಂಡು ನಮ್ರರಾಗಿ ಬಂದ ಅನೇಕಾನೇಕ ದೇಶಗಳವರಿಗೆ ಉದಾರಚರಿತಳಾದ ಭಾರತಮಾತೆಯು ಈ ವಿಶಾಲ ಗೃಹದಲ್ಲಿ ಸ್ಥಳ

ದೊರೆಯಿತು. ಅವರೆಲ್ಲರೂ ಇಲ್ಲಿಯ ಅನ್ನ ಪಾನಗಳಿಂದ ಉದರ ಭರಣ ಮಾಡಿಕೊಂಡು ಬದುಕಿದರು. ರಸವಂತವಾದ ಧಾನ್ಯಾದಿಗಳನ್ನು ಯಥೇಷ್ಟವಾಗಿ ಅನುಭವಿಸಿ ಪುಷ್ಟಿಗೊಂಡರು. ಪೃಥ್ವಿಯ ಮತ್ತಾವ ಭಾಗದಲ್ಲೂ ದೊರೆಯದ ಸ್ವಾದು ಫಲಗಳನ್ನು ತಿಂದು ಬಲಗೊಂಡರು. ಹಾಗೆ ಬಲಿತು ಗುಂಗಟ್ಟಿಕೊಂಡು ನಂತರ, ತಮ್ಮ ಕಷ್ಟಕಾಲದಲ್ಲಿ ತಮ್ಮನ್ನು ಮರೆಹಾಕಿಕೊಂಡು ಜೀವನವನ್ನಿತ್ತು ರಕ್ಷಣೆಮಾಡಿದ ಆಕೆಯ ಉಪಕಾರವನ್ನು ಸ್ಮರಿಸಿ, ಆಕೆಯ ಪಾದಗಳಲ್ಲಿ ಭಕ್ತಿಯಿಟ್ಟು ನಡೆದುಕೊಂಡವರು ಕೆಲವರು. ಆ ಪೂರ್ವೋಪಕಾರವನ್ನು ಮರೆತು ಆರ್ತರಕ್ಷಕಳಾದ ಆಕೆಯ ಮೇಲೆಯೇ ಕತ್ತಿಕಟ್ಟಿ, ಆಕೆಯ ಪಾದಗಳಿಗೆ ಸಂಕಲೆಗಳನ್ನು ತೊಡಿಸಿ, ಆಕೆಯ ಪುತ್ರೀಪುತ್ರರನ್ನು ದಾಸ್ಯದಲ್ಲಿರಿಸಿ, ಉಂಡ ಮನೆಗೆ ಎರಡು ಬಗೆದ ಕೃತಘ್ನರು ಮತ್ತೆ ಕೆಲವರು. ಆದರೇನು? ಮಾವಿನ ಬಿತ್ತನವನ್ನು ನಟ್ಟು, ಮರವನ್ನು ಬೆಳೆಸಿದವನು ಮಧುರವಾದ ಪುಷ್ಟಿಕರವಾದ ಸಿಹಿಯಾದ ಮಾವಿನ ಹಣ್ಣನ್ನೂ, ಬೇವಿನ ಬಿತ್ತನವನ್ನು ನಟ್ಟು ಮರವನ್ನು ಬೆಳೆಯಿಸಿದವನು ಕಟುವಾದ ಕ್ಷುದ್ರವಾದ ಭಕ್ಷಣೆಗನರ್ಹವಾದ ಬೇವಿನ ಹಣ್ಣನ್ನೂ ಪಡೆದೇ ತೀರಬೇಕಾದ ಪ್ರಕೃತಿ ಧರ್ಮವು ತಪ್ಪಲಾರದಷ್ಟೆ! ಅದರಂತೆಯೇ ಕೃತಜ್ಞರಿಗೆ ತಕ್ಕ ಸತ್ಫಲವೂ, ಕೃತಘ್ನರಿಗೆ ತಕ್ಕ ದುಷ್ಫಲವೂ ಕಾದುಕೊಂಡಿವೆ. ಅವುಗಳನ್ನು ಅವರವರು ಇಂದಲ್ಲದಿದ್ದರೆ, ನಾಳೆಯಾದರೂ ಅನುಭವಿಸದಿದ್ದರೆ ತೀರದು. ಇಂತು ಪರಕೀಯರಿಗೆ ಸ್ಥಳಕೊಟ್ಟರೆ, ತನಗೇ ತೊಂದರೆಯಾಗುವುದೆಂಬುದನ್ನು ತಿಳಿದಿದ್ದರೂ ಉದಾರಚರಿತಳಾದ ಭಾರತಮಾತೆಯು ಆ ಕಾರ್ಯದಿಂದ ಎಂದಿಗೂ ವಿಮುಖಳಾಗಲಾರಳು. ಏಕೆಂದರೆ ಆರ್ತರಾದವರಿಗೂ ಆಗಂತುಕರಿಗೂ ಆಶ್ರಯಕೊಟ್ಟು ಸಲಹತಕ್ಕದು ಸನಾತನ ಧರ್ಮವು. ಆ ಧರ್ಮರಕ್ಷಣೆಯೇ ಭಾರತಭೂಮಿಯ ಮುಖ್ಯ ಗುಣವಿಶೇಷವು. ಅದೇ ಆಕೆಯ ಜೀವಿತದ ಮುಖ್ಯ ಕರ್ತವ್ಯವು. ಹಾಗೆ ಆ ಕರ್ತವ್ಯವನ್ನು ನೆರವೇರಿಸುವಲ್ಲಿ ಅದರಿಂದುಂಟಾಗುವ ಫಲಾಫಲಗಳನ್ನು ಗಮನಿಸುವುದು ಧರ್ಮವಲ್ಲ. ಆದುದರಿಂದ ಇಂದಿಗೂ ನಾಳೆಗೂ, ನೀನೇ ಗತಿಯೆಂದು ಬಂದವರಿಗೆ ನಮ್ಮ ದೇಶಮಾತೆಯು ಸ್ಥಳಕೊಟ್ಟು ರಕ್ಷಿಸುತ್ತಿರುವಳು.

ಈಗ್ಗೆ ಸಾವಿರಾರು ವರ್ಷಗಳ ಕೆಳಗೆ ಮಹಮ್ಮದೀಯರ ಧಾಳಿಗೊಳಪಟ್ಟು, ಪಾರಶೀಕರು ತಮ್ಮ ಸ್ವಸ್ಥಳವಾದ ಪಾರ್ಶೀದೇಶವನ್ನು ಬಿಟ್ಟು ರಕ್ಷಕ

ಸ್ಥಾನವನ್ನು ಹುಡುಕಿಕೊಂಡು ನಮ್ಮಾ ದೇಶವನ್ನು ಪ್ರವೇಶಿಸಿದರು. ಹಾಗೆ ಬಂದ ಅವರಿಗೆ, ಸಿಂಧೂದೇಶದ ದಕ್ಷಿಣಭಾಗಕ್ಕಿರುವ. ಫಲಪುಷ್ಪ ಸಮೃದ್ಧವಾದ ಆರೋಗ್ಯಪ್ರದವಾದ ಗುಜರಾತ್ ದೇಶವು ದೃಷ್ಟಿಗೋಚರವಾಯಿತು ಅಲ್ಲೇ ತಮ್ಮ ವಾಸಸ್ಥಾನಗಳನ್ನು ಏರ್ಪಡಿಸಿಕೊಂಡು ಅವರು ನೆಲೆಸಿಬಿಟ್ಟರು ಪಾರ್ಶೀ ಜನಗಳು ಸಾಧು ಪ್ರಕೃತಿಯುವರು, ಪಾಪಭೀತರು, ದಯಾರ್ದ್ರ ಹೃದಯರು ಮುಖ್ಯವಾಗಿ ವ್ಯಾಪಾರಾದಿಗಳಿಂದಲೇ ಜೀವಿಸುತ್ತಾ ಪರರಿಗೆ ಉಪದ್ರವಕಾರಿಗಳಾಗದೆ ಜೀವಿಸಿಕೊಂಡು ಬಂದ ಆ ಪಂಗಡದ ಲಕ್ಷಾಂತರ ಲಕ್ಷ್ಮೀಪುತ್ರರೋ ಎನ್ನುವಂತೆ ಐಶ್ವರ್ಯಸಂಪನ್ನರಾಗಿ ಸುಖಿಗಳಾಗಿ ಜನರು ಈಗ್ಲೂ ಆ ಪ್ರಾಂತದಲ್ಲಿ ವಾಸ ಮಾಡಿಕೊಂಡಿದ್ದಾರೆ

ಆ ಗುಜರಾತು ಪ್ರಾಂತದ ಎಡಬಲದಲ್ಲಿರುವ ಬರೋಡಾ ಸಂಸ್ಥಾನದಲ್ಲಿ ನವ್ಸಾರಿ ಎಂಬೊಂದು ಊರಿದೆ ಅದು ಮೇಲ್ಕಂಡಂತೆ ವಲಸೆ ಬಂದು ನೆಲೆಸಿದ ಪಾರ್ಶೀ ಪಂಗಡದವರಿಗೆ ಸಾವಿರಾರು ವರ್ಷಗಳಿಂದಲೂ ವಾಸಸ್ಥಾನವಾಗಿದೆ ಆ ಊರಿನ ಮುಖ್ಯ ನಿವಾಸಿಗಳಲ್ಲಿ ಪಾರ್ಶೀ ವ್ಯಾಪಾರಿಗಳು ಹೆಚ್ಚು ಸಂಖ್ಯೆಯುವರಲ್ಲ, ಪಾರ್ಶೀ ವೈದೀಕರೇ ವಿಶೇಷ ಸಂಖ್ಯೆಯುವರು ಎಂದರೆ ಅದು ಬ್ರಾಹ್ಮಣ ಪಂಗಡದವರ ಅಗ್ರಹಾರದಂತೆ ಪಾರ್ಶೀ ಪಂಗಡದ ಧಾರ್ಮಿಕ ವರ್ಗಕ್ಕೆ ಮುಖ್ಯ ವಾಸಸ್ಥಳವಾಗಿತ್ತು ಅವರು ತಮ್ಮ ಧರ್ಮದಲ್ಲಿ ಅತ್ಯಂತ ನಿಷ್ಠೆಯುಳ್ಳವರು. ಜೋರಾಷ್ಟ್ರಿಯರ್ ಧರ್ಮ ಗ್ರಂಥವಾದ ಜೆಂದ್ ಅವೆಸ್ತಾ ಎಂಬುದರಲ್ಲಿ ವಿಧಿಸಿದ ಧರ್ಮಗಳಿಗೆ ಲೇಶಮಾತ್ರವೂ ವಿರೋಧವಿಲ್ಲದಂತೆ ನಡೆವುದರಲ್ಲಿ ಮಹಾ ಶ್ರದ್ಧೆಯುಳ್ಳವರು ಆ ಊರಿನಲ್ಲಿ ಮತ್ತಾವ ಮಹತ್ಕಾರ್ಯವೂ ನಡೆಯುದಿದ್ದರೂ ಪಾರ್ಶೀ ಮತಚರ್ಚೆಗೆ ಅದು ತೌರು ಮನೆಯೆನ್ನಬಹುದು ಆ ಚರ್ಚೆಯೂ ಸಾಮಾನ್ಯವಲ್ಲ ಒಂದೊಂದು ಸಾರಿ ಬಹು ಭಯಂಕರ ಸ್ವರೂಪವನ್ನು ಹೊಂದುವುದು ಅಗ್ನಿಪರ್ವತದ ಲಾವಾ ರಸದಂತೆ ಕುದಿಕುದಿದು ಹೊರಹೊಮ್ಮುವುದು. ಆದರೂ ಅದರಲ್ಲಿ ಕ್ರೌರ್ಯವಿಲ್ಲ. ತಮ್ಮ ಪರಿಶುದ್ಧವಾದ ಮತತತ್ವಗಳೊಂದಿಗೆ ಪರಕೀಯ ಧರ್ಮತತ್ವಗಳು ಬೆರೆಯದಂತಿರಬೇಕೆಂಬುದೇ ಅವರ ಮುಖ್ಯ ಆಶಯ. ಹಾಗೆ ಬೆರದು ಅಪವಿತ್ರವಾಗದಂತೆ ರಕ್ಷಿಸಿಕೊಳ್ಳಲಿಕ್ಕಾಗಿಯೇ ಭಯಂಕರವಾದ ಅಂತಹ ವಾಗ್ಯುದ್ಧಗಳು. ಅಷ್ಟೆ! ಆದರಲ್ಲಿ ಮತ್ತಾವ ದ್ರೋಹ ಚಿಂತನೆಗೂ

ಸ್ಥಾನವಿಲ್ಲ! ಮತವಿಚಾರದಲ್ಲಿ ಇಂತಹ ಪಟ್ಟುದಲೆ ಇರುವುದರಿಂದ ಒಂದು ಬಗೆಯ ಪ್ರಯೋಜನವೂ ಉಂಟು. ಅದರಿಂದ ಆಯಾ ಧರ್ಮಾನುಯಾಯಿಗಳಲ್ಲಿ ಬರೀ ಧರ್ಮ ಶ್ರದ್ಧೆ ಮಾತ್ರವಲ್ಲ. ಸತ್ಯ, ಮನೋನಿಶ್ಚಯ, ಧರ್ಮ ಪಕ್ಷಪಾತತೆ, ಸ್ವಾಭಿಮಾನ, ಸ್ವಕೀಯಾಭಿಮಾನ ಮುಂತಾದುವೂ ಅಭಿವೃದ್ಧಿಯಾಗುವುವು. ಹಿಂದೂಗಳಲ್ಲಿ ಪೂರ್ವಾಚಾರ್ಯರು ಈ ಮೂಲೋದ್ದೇಶದಿಂದಲೇ ಸ್ಥಾಪಿಸಿದ್ದ ಧರ್ಮಶ್ರದ್ಧೆಯು ಪರಕೀಯ ಮತಗಳ ಬಹು ಸುಲಭವಾಗಿ ತೋರುವ ಬರೀ ನೀತಿ ತತ್ವಗಳ ವಿಜೃಂಭಣೆಯಿಂದ ಕುಂದಿದುದರಿಂದಲೇ ಅವರು ಈಗ ಇಹಕ್ಕೂ ಇಲ್ಲದೆ ಪರಕ್ಕೂ ಇಲ್ಲದೆ ಉಭಯಭ್ರಷ್ಟಸ್ಥಿತಿಗೆ ಬಂದು ನಿಂತಿರುವರು.

ನಮ್ಮ ಕಥಾನಾಯಕನು, ಈ ನವ್ಸಾರಿ ಗ್ರಾಮದಲ್ಲಿ ವಾಸಿಸಿದ್ದ ಪಾರ್ಶೀ ಪಂಗಡದ ಸಜ್ಜನರಾದ ಒಬ್ಬ ವೈದಿಕ ದಂಪತಿಗಳ ಉದರದಲ್ಲಿ ೧೮೩೯ ನೆಯ ಸಂವತ್ಸರದಲ್ಲಿ ಜನಿಸಿದನು. ಆತನ ಜನನ ಕಾಲದಲ್ಲಿ ಆತನ ತಾಯಿತಂದೆಗಳು ಅಷ್ಟು ಉಪಪನ್ನರಾಗಿರಲಿಲ್ಲ. ಆದರೆ ಅವರು ಉದಾರರು ಅವರಲ್ಲಿ ದೈವಭಕ್ತಿಗಾಗಲೀ, ಅತಿಥಿ ಅಭ್ಯಾಗತರ ಆದರಣೆಗಾಗಲೀ ಸತ್ಯ ಶಾಂತತೆ ವಿನಯ ಪರೋಪಕಾರಾದಿ ಸದ್ಗುಣಗಳಿಗಾಗಲೀ ಏನೂ ಕೊರತೆಯಿರಲಿಲ್ಲ ಅಲ್ಲದೆ ಅವರಲ್ಲಿ ಸ್ವಮತಾಭಿಮಾನವೂ, ಆ ವಿಷಯದಲ್ಲಿ ಮೊಂಡಂತಹ ಪಟ್ಟುದಲೆಯೂ ಬೇಕಾದಷ್ಟಿದ್ದುವು. ಆತನ ಮಾತಾಪಿತೃಗಳಲ್ಲಿ ಮನ ವಚನಗಳಲ್ಲಿ ಕಂಡು ಬಂದ ಆ ಮನೋನಿಶ್ಚಯ, ಜೀವನ ಪವಿತ್ರತೆ, ಸತ್ಯ, ಉದಾರತೆ ಮುಂತಾದುವೇ ನಮ್ಮ ಕಥಾನಾಯಕನ ಲೌಕಿಕ ಜೀವಿತದಲ್ಲಿ ಕಾರ್ಯರೂಪದಲ್ಲಿ ತೋರಿ, ಭಾರತಮಾತಾ ಸೇವಕರಲ್ಲಿ ಆತನನ್ನು ಅಗ್ರಗಣ್ಯರ ತರಗತಿಗೆ ಸೇರಿಸಲು ಹೆಚ್ಚು ಸಹಾಯಕವಾದುವು.

ಜೇಮ್ಸೆಟ್ಜೀ ತಾತಾನು ತನ್ನ ಶೈಶವದ ಆಟಪಾಟಗಳಿಂದ ಸಾಧುಹೃದಯರಾದ ತನ್ನ ತಾಯಿತಂದೆಗಳಿಗೆ ಆನಂದವನ್ನುಂಟುಮಾಡಿ ನಾಲ್ಕೈದು ವರ್ಷಗಳ ವಯಸ್ಕನಾದನು ಆ ಕಾಲದಲ್ಲಿ ಭಾರತದೇಶದ ಇತರ ಭಾಗಗಳಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸವು ಇನ್ನೂ ಇಷ್ಟು ಮಾತ್ರ ವ್ಯಾಪಿಸಿರಲಿಲ್ಲವಾದುದರಿಂದ ನವ್ಸಾರಿಯಂಥ ಚಿಕ್ಕ ಊರಿನಲ್ಲಿ ಶುದ್ಧಾಂಗ ಅದರ ಪ್ರವೇಶವೇ ಇರಲಿಲ್ಲ. ಜೇಮ್ಸೆಟ್ಜೀಗೆ ಆಗಿನ ಪದ್ಧತಿಯಂತೆ ಪಾರ್ಶೀ ವರ್ಣಮಾಲೆಯೇ

ಪ್ರಾರಂಭಿಸಲ್ಪಟ್ಟು, ಆದರಲ್ಲೇ ಮತವಿಚಾರಗಳಿಗೆ ಸಂಬಂಧಿಸಿದ ಚಿಕ್ಕ ಚಿಕ್ಕ ಪುಸ್ತಕಗಳಲ್ಲ ಪಾರವು ನಡೆಯಿತು. ಪಾರ್ಶೀ ಗ್ರಂಥಗಳಲ್ಲಿ ಮಹಾ ಪಾಂಡಿತ್ಯವನ್ನು ಸಂಪಾದಿಸಿದ್ದ ದಸ್ತೂರ್‌ಗಳೆಂಬ ವಿದ್ವಾಂಸರು, ಬಾಲಕರಿಗೆ ಎಲ್ಲಕ್ಕೂ ಮೊದಲು, ಧರ್ಮಗ್ರಂಥಗಳಲ್ಲಿ ಕೊಡುವ ಶಿಕ್ಷಣವೇ ಹೆಚ್ಚು ಪ್ರಯೋಜನಕಾರಿಯೆಂದು ಎಣಿಸುತ್ತಿದರು ಹಾಗೆಯೇ ಜೇಮ್ಸೇಟ್ಜೀಯೂ ಪಾರ್ಶೀ ಭಾಷೆಯ ಯಾವ ಪುಸ್ತಕವನ್ನಾದರೂ ತಡೆಬಡೆಯಿಲ್ಲದೆ ಧಾರಾಳವಾಗಿ ಓದುವಷ್ಟು—ಮತ್ತು ಹೇಳಿದ ಯಾವ ವಿಷಯವನ್ನಾದರೂ ತಪ್ಪುಗಳಿಲ್ಲದಂತೆ ಶುದ್ಧವಾಗಿ ಬರೆಯುವಷ್ಟು ಭಾಷಾ ಜ್ಞಾನವನ್ನು ಬಹು ಶೀಘ್ರವಾಗಿಯೇ ಸಂಪಾದಿಸಿದನು ಅಲ್ಲದೆ ಪಾರ್ಶೀ ಜನರ ಮುಖ್ಯ ವೃತ್ತಿಯು ವ್ಯಾಪಾರವಾದುದರಿಂದ, ಅವರ ಬಾಲಕರಿಗೆ ಗಣಿತ ವಿದ್ಯೆಯಲ್ಲಿ ಶಿಕ್ಷಣವು ಅನಿವಾರ್ಯವಾಗಿ ಅವಶ್ಯಕವಾದುದಷ್ಟೆ! ಅದರಲ್ಲೂ ಮಾನಸಗಣಿತಕ್ಕೆ ಅವರಲ್ಲಿ ಹೆಚ್ಚು ಪ್ರಾಶಸ್ತ್ಯವುಂಟು ಹೀಗಾಗಿ ಚಿಕ್ಕ ಜೇಮ್ಸೇಟ್ಜೀಯು ಎಂತಹ ತೊಡಕಾದ ಲೆಕ್ಕವನ್ನಾದರೂ ಒಡನೆ ಮಾಡುವಂತಹ ಮತ್ತು ಕೇಳಿದ ಪ್ರಶ್ನೆಗೆ ಸಾವಕಾಶವಿಲ್ಲದೆ, ಗೊತ್ತಾಗಿ ಸರಿಯಾದ ಉತ್ತರವನ್ನು ಕೊಡುವಂತಹ ಸಾಮರ್ಥ್ಯವನ್ನು ಶೀಘ್ರಕಾಲದಲ್ಲೇ ಪಡೆದನು

ಆ ವೇಳೆಗೆ ಅವನಿಗೆ ಹನ್ನೊಂದು ಹನ್ನೆರಡು ವರ್ಷಗಳ ವಯಸ್ಸಾಯಿತು. ಆ ಚಿಕ್ಕ ಊರಿನಲ್ಲಿ ಅವನು ಮುಂದೆ ಕಲಿಯಬೇಕಾದ ಲೌಕಿಕ ವಿದ್ಯೆಯ ಪಾರವೂ ಹೆಚ್ಚಾಗಿ ಉಳಿಯಲಿಲ್ಲ ಈ ಮಗನು ಹುಟ್ಟಿದಾಗಿನಿಂದ ಪ್ರಾಪಂಚಿಕವಾಗಿ ಸ್ವಲ್ಪ ಮಟ್ಟಿಗೆ ಉತ್ತಮಸ್ಥಿತಿಗೆ ಬಂದು ಹಣಕಾಸುಗಳನ್ನು ಗಳಿಸಿದ್ದ ಅವನ ತಂದೆಯು, ಆಗತಾನೇ ವಿಶೇಷವಾಗಿ ಜರುಗುತ್ತಿದ್ದ ಪರದೇಶ ವ್ಯಾಪಾರದಲ್ಲಿ ಭಾಗ ತೆಗೆದುಕೊಂಡು, ತನ್ನ ಲೌಕಿಕವನ್ನು ಸಾಗಿಸುತ್ತಿದ್ದನು. ಆತನ ವ್ಯಾಪಾರವು ಚೀನಾ ದೇಶದೊಂದಿಗೆ ವಿಶೇಷ ಲಾಭದಾಯಕವಾಗಿ ನಡೆದು ದಿನದಿನಕ್ಕೆ ಅಭಿವೃದ್ಧಿಯಾಗುತ್ತಿದ್ದಿತು. ಕೂಪಸ್ಥ ಮಂಡೂಕದಂತಿರದೆ, ತನ್ನ ಜನ್ಮಸ್ಥಳದಿಂದ ಹೊರಬಿದ್ದು ವಿಸ್ತಾರವಾದ ಪ್ರಪಂಚದ ಬೆಳಕನ್ನು ನೋಡಿದ್ದ ಆತನು, ತನ್ನ ಮಗನೂ ಮುಂದೆ ತನ್ನ ವ್ಯಾಪಾರ ಉದ್ಯೋಗಗಳಿಗೆ ಆವಶ್ಯಕವಾದ ಲೌಕಿಕ ವಿದ್ಯೆಯಲ್ಲಿ ಶಿಕ್ಷಣ ಹೊಂದಲೆಂದು ಆಶಿಸಿದನು ಅದರಂತೆಯೇ, ಹುಟ್ಟಿದಾಗಿನಿಂದಲೂ ವಾಸಿಸಿದ್ದ ನವಸ್ಸಾರಿ

ಯಿಂದ ಅವನನ್ನು ಕರೆತಂದು ಬೊಂಬಾಯಿ ನಗರದಲ್ಲಿ ಬಿಟ್ಟನು. ನವ್ಸಾರಿಯೆಲ್ಲಿ—ಬೊಂಬಾಯಿಯೆಲ್ಲಿ? ಕುಗ್ರಾಮದಂತಿದ್ದ ನವ್ಸಾರಿಯಲ್ಲಿ ಜನನವಾಗಿ ಪರಕೀಯ ಸಂಬಂಧವಿಲ್ಲದ ಆ ವಾತಾವರಣದಲ್ಲಿ ಬಾಲ್ಯದ ಹನ್ನೆರಡು ವರ್ಷಗಳನ್ನು ಕಳೆದ ತಾತಾನ ಸ್ಥಿತಿಯು ಗೋಷ್ಪಾದದಂತಹ ಸಣ್ಣ ಬಾವಿಯಿಂದ ಹೊರಟು ಏಕಾಏಕಿ ಮಹಾಸಾಗರವನ್ನು ಪ್ರವೇಶಿಸಿದ ಮಂಡೂಕದಂತೆ ಆಯಿತೆಂದರೆ ಅದು ಅತಿಶಯೋಕ್ತಿಯಾಗಲಿಕ್ಕಿಲ್ಲ!



## ಅಧ್ಯಾಯ ೨ "ವಿದ್ಯಾಭ್ಯಾಸ–ಉದ್ಯೋಗಪ್ರಾರಂಭ"

ನವ್ಸಾರಿಯು ಬರೋಡಾ ಸಂಸ್ಥಾನದಲ್ಲಿರುವ ಚಿಕ್ಕದೊಂದು ಊರು. ಅದಕ್ಕೆ ಸಮೀಪವಿರುವ ದೊಡ್ಡ ಪಟ್ಟಣವೆಂದರೆ ಸೂರತ್ ಒಂದೇ! ನವ್ಸಾರಿಯ ಬಾಲಕರಿಗೆ ಸೂರತ್ತೇ ಮಹಾನಗರವೆಂಬಂತೆ ತೋರುವುದು ಸ್ವಾಭಾವಿಕವು. ಆದರೆ ಆಗ ಬಾಲಕರಾಗಿದ್ದ ಜೇಮ್ಸೇಟ್ಜೀಯವರು ಬೊಂಬಾಯಿ ಮಹಾ ನಗರವನ್ನೇ ಸೇರಿಬಿಟ್ಟುದು ಅವರ ಜನ್ಮಸ್ಥಿತಿ ಅನುಭವಗಳಲ್ಲಿ ಬಹು ದೊಡ್ಡ ವ್ಯತ್ಯಾಸವನ್ನು ಉಂಟುಮಾಡಿತೆಂದು ಹೇಳಬೇಕಾಗಿಲ್ಲ. ನವ್ಸಾರಿಗೂ ಬೊಂಬಾಯಿಗೂ ಉತ್ತರ ದಕ್ಷಿಣ ಧ್ರುವಗಳಷ್ಟು ಅಂತರವಿರುವುದೆಂದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ! ನವ್ಸಾರಿಯಲ್ಲಿ ವಾಸಿಸುತ್ತಿದ್ದವರೆಲ್ಲರೂ ಸ್ವದೇಶೀಯರೇ, ಸ್ವಕುಲಸ್ಥರೇ, ಹೆಚ್ಚಾಗಿ ಸ್ವಜನರೇ! ಬೊಂಬಾಯಿಯಲ್ಲಿ ಪ್ರಪಂಚದ ನಾನಾಕುಲಗೋತ್ರಗಳಿಗೆ ಸೇರಿದ ನಾನಾ ದೇಶೀಯರೂ ವಾಸಿಸುತ್ತಿದ್ದರು. ಅವರ ನಡೆನುಡಿ ಆಚಾರ ವ್ಯವಹಾರಗಳೆಲ್ಲವೂ ಬೇರೆ ಬೇರೆ! ಹೀಗೆ ಸಂಪೂರ್ಣ ವ್ಯತ್ಯಾಸವಾದ ವಾತಾವರಣಕ್ಕೆ ಬಂದುದರಿಂದ ಬಾಲಕರಾದ ತಾತಾಯವರ ಜೀವಿತದಲ್ಲೂ ವ್ಯತ್ಯಾಸವುಂಟಾಗದಿರಲಿಲ್ಲ. ದೃಷ್ಟಿ ವೈಶಾಲ್ಯತೆಯು ಪ್ರಾಪ್ತವಾಯಿತು ಪ್ರಪಂಚದ ಬೇರೆ ಬೇರೆ ಭಾಗಗಳವರೊಂದಿಗೆ ಬಳಕೆಯಾಗುವ ಅವಕಾಶದಿಂದ, ಪ್ರಪಂಚವೆಂಬುದು ತಮ್ಮ ಕುಗ್ರಾಮದ ಸುತ್ತಲಿನ ನಾಲ್ಕು ಬೇಲಿಗಳ ಒಳಗೆ ಅಡಗಿರುವಷ್ಟು ಮಾತ್ರವಲ್ಲ—ಇನ್ನೂ ವಿಸ್ತಾರವಾಗಿದೆ—ಬಹು ವಿಸ್ತಾರವಾಗಿದೆ, ಎಂದು ತೋರುವಂತಾಯಿತು ಅವರೊಂದಿಗೆ ಅನೇಕ ವಿಚಾರಗಳಲ್ಲಿ ಮಾತು ಕಥೆ

ಗಳು ನಡೆಯಲವಕಾಶವಿದ್ದುದರಿಂದ ವಿಷಯ ಪರಿಜ್ಞಾನವೂ ವಿಸ್ತರಿಸಿ, ತಮ್ಮ ಊರಿನಲ್ಲಿ ನಡೆಯುತ್ತಿದ್ದ ಮತ ಸಂಬಂಧ ವಾಗ್ವಾದಗಳು ಮಾತ್ರವಲ್ಲ; ಪ್ರಪಂಚದಲ್ಲಿ ತಿಳಿಯಬೇಕಾದ ವಿಚಾರಗಳು ಇನ್ನೂ ಅನೇಕವಿವೆ ಎಂದು ಯೋಚಿಸುವಂತಾಯಿತು. ಮನಸ್ಸಿನ ಕ್ಷುದ್ರಭಾವ ಕುಗ್ಗಿ ಉದಾರತೆ ನಮ್ರತೆ ವಿನಯ ವಿಧೇಯತೆಗಳು ಬೆಳೆಯಲು ಅವಕಾಶವುಂಟಾಯಿತು. ಪ್ರಕೃತಿಯಲ್ಲಿಯೂ, ಹುಟ್ಟಿದ ಸ್ಥಳದಲ್ಲೇ—ತಾಯಿ ಮರದ ನೆಳಲಿನಲ್ಲೇ ಬೆಳೆಸಲ್ಪಡುವ ಗಿಡಗಳು ಅಷ್ಟು ಫಲವಂತವಾಗಿ—ಸೊಂಪಾಗಿ ಬೆಳೆಯಲಾರವು. ಅವು ಬೇರೆ ಸ್ಥಳಕ್ಕೆ ಒಯ್ಯಲ್ಪಟ್ಟು, ಅಲ್ಲಿ ಪ್ರತ್ಯೇಕ ಭೂಮಿಯಲ್ಲಿ ನಾಟಿ ಹಾಕಲ್ಪಟ್ಟು—ಹೊಸ ನೀರು—ಹೊಸ ವಾತಾವರಣಗಳು ಸಿಕ್ಕಿದರೆ, ಅವುಗಳ ಬೆಳವಣಿಗೆಯೂ ಹೆಚ್ಚುವುದು—ಫಲವೂ ಅಧಿಕರಿಸುವುದು. ಅದರಂತೆಯೇ ನಮ್ಮ ಬಾಲಕರೂ ಹೊರಗೆ ಹೊರಟರೆ ಎಲ್ಲಿ ಗಾಳಿ ಸೋಕುವುದೋ ಏನಪಾಯ ಬರುವುದೋ ಎಂದು ನಮ್ಮ ಕರ್ಣಾಟಕ ಮಾತಾಪಿತೃಗಳು ಭಯಪಟ್ಟು, ಸಾಲದುದಕ್ಕೆ ಅವರ ಮನಸ್ಸಿನಲ್ಲಿ 'ಗುಮ್ಮ'ನ ಭಯವನ್ನೂ ನಟ್ಟು ಬೇರೂರಿಸಿ, ಅವರನ್ನು ನಿರ್ವೀರ್ಯರನ್ನಾಗಿಸದಂತೆ, ವಿಸ್ತಾರವಾದ ಪ್ರಪಂಚದಲ್ಲಿ ಚಳಿ ಗಾಳಿ ಮಳೆ ಬಿಸಿಲುಗಳ ಲಕ್ಷ್ಯವಿಲ್ಲದೆ ಹೊಡೆದಾಡಲೆಂದೂ, ಅವರಿವರೊಂದಿಗೆ ಬೆರೆತು ಅನುಭವ ಪಡಲೆಂದೂ ಬಿಟ್ಟರೇನೇ ಅವರೂ ಪ್ರಪಂಚದಲ್ಲಿ ಮನುಷ್ಯರೆನ್ನಿಸಿಕೊಂಡು ದೇಶಕ್ಕೆ ಗಣನೀಯರಾದ ಪ್ರಜೆಗಳಾಗಲು ಯೋಗ್ಯರಾಗುವರು. ಹಾಗಲ್ಲದೆ, ಅಡಿಗೆಯ ಮನೆಯ ಹೊಸ್ತಿಲು ದಾಟಿ ಹೊರಹೊರಟರೆಲ್ಲಿ ಪ್ರಾಣ ಹೋಗುವುದೋ, ಎಂದು ಮಿಡುಕುತ್ತಿದ್ದರೆ, ಅಂತಹ ಅಜ್ಜಿಯ ಮೊಮ್ಮಕ್ಕಳು ಇದ್ದರೆ ದೇಶಕ್ಕಾಗುವ ಪ್ರಯೋಜನವೆಷ್ಟೋ ಇಲ್ಲದಿದ್ದರೆ ಆಗುವ ನಷ್ಟವೂ ಅಷ್ಟೇ!

ಬಾಲಕರಾದ ಜೇಮ್ಸೇಟ್ಜೀಯವರು ಬೊಂಬಾಯಿ ನಗರಕ್ಕೆ ಬಂದಾಗ್ಗೆ, ಅಲ್ಲಿ ಘನವನ್ನು ಹೊಂದಿದ ಎಲ್ಫಿನ್‌ಸ್ಟನ್ನರ ನಾಮಧೇಯದಿಂದ ವಿರಾಜಿಸುತ್ತಿದ್ದ 'ಕಾಲೇಜು' ಮತ್ತು 'ಸ್ಕೂಲು'ಗಳು ಮಾತ್ರವೇ ಉತ್ತಮರಾದ ಉಪಾಧ್ಯಾಯರಿಂದಲೂ, ಉತ್ಕೃಷ್ಟವಾದ ಬೋಧನಾ ಪದ್ಧತಿಯಿಂದಲೂ ಕೂಡಿ ಪ್ರಜಾವರ್ಗಕ್ಕೆ ಅತಿಶಯ ಫಲದಾಯಕವಾಗಿದ್ದುವು. ಆ 'ಕಾಲೇಜಿ'ನಲ್ಲೇ ನಮ್ಮ ಕಥಾನಾಯಕರು ವಿದ್ಯಾಭ್ಯಾಸ ಮಾಡಿದುದು. ವಿದ್ಯಾಭ್ಯಾಸ ಕಾಲದ

೧೮೫೨ ರಿಂದ ೧೮೫೮ರ ವರೆಗಿನ ಆರು ವರ್ಷಗಳ ಕಾಲದಲ್ಲಿ ಅವರ ಜೀವಿತದಲ್ಲಿ ಉದಹರಿಸಲರ್ಹವಾದ ಯಾವ ವಿಶೇಷ ಸಂಗತಿಯೂ ನಡೆಯದಿದ್ದರೂ, ಅವರಲ್ಲಿ ಆ ಕಾಲದಲ್ಲಿ ತೋರಿ ಬಂದ ಸೂಕ್ಷ್ಮ ಗ್ರಹಣಶಕ್ತಿ, ಗುರುಗಳಲ್ಲಿ ವಿನಯ ವಿಧೇಯತೆಗಳು, ವಿದ್ಯಾವ್ಯಾಸಂಗದಲ್ಲಿ ಶ್ರದ್ಧೆ ನಿರಲಸಿಕೆಗಳು, ಮುಂತಾದುವುಗಳಿಂದ ಎಲ್ಲರಿಗೂ ಅಚ್ಚುಮೆಚ್ಚಾಗಿದ್ದು ಒಂದು ವರ್ಷವೂ ಹಿಂದೆ ಬೀಳದೆ, ಅವರು ಮೇಲಿನ ತರಗತಿಗಳಿಗೇರುತ್ತಿದ್ದರೆಂಬುದಷ್ಟನ್ನಾದರೂ ಹೇಳದಿದ್ದರೆ ನಮ್ಮ ಕರ್ತವ್ಯದಲ್ಲಿ ಲೋಪವುಂಟಾದಂತಾಗುವುದು. ಮುಂದೆ ೧೮೫೮ ರಲ್ಲಿ ಅವರ ಕಲಾಶಾಲಾ ವಿದ್ಯಾಭ್ಯಾಸವು ಕೊನೆಗಂಡಿತು. ಆ ಸಂವತ್ಸರದಲ್ಲೇ ಹಿಂದೂಸ್ಥಾನದ ಪ್ರಥಮ ವೈಸರಾಯರಾದ ಲಾರ್ಡ್ ಕ್ಯಾನಿಂಗ್ ಎಂಬವರ ಪ್ರಭುತ್ವದಲ್ಲಿ ಕಲ್ಕತ್ತ ಬೊಂಬಾಯಿ ಮತ್ತು ಮದ್ರಾಸು ಎಂಬ ಮೂರು ಪ್ರೆಸಿಡೆನ್ಸಿ ಮುಖ್ಯ ಪಟ್ಟಣಗಳಲ್ಲಿ ವಿಶ್ವವಿದ್ಯಾನಿಲಯಗಳು ಸ್ಥಾಪಿತವಾಗಿ ಭಾರತೀಯರ ಉಚ್ಚ ಶಿಕ್ಷಣಕ್ಕೆ ಅವಕಾಶ ಉಂಟಾಯಿತು ಆದರೆ ಅವುಗಳಿಂದ ಪ್ರಯೋಜನ ಹೊಂದುವವಕಾಶವಿಲ್ಲದೆ, ಅವುಗಳ ಪ್ರಾರಂಭ ಕಾಲದಲ್ಲೇ ನಮ್ಮ ಕಥಾನಾಯಕರು ತಮ್ಮ ವ್ಯಾಸಂಗವನ್ನು ಮುಗಿಸಬೇಕಾದ ಆವಶ್ಯಕ ಒದಗಿತು ಅವರ ತಂದೆಯಾದ ಸೇಟ್ ನಸರ್ವಾನ್‌ಜೀಯು ಆ ವೇಳೆಗೆ ಚೀನಾದೇಶದೊಂದಿಗೆ ವ್ಯಾಪಾರ ಮಾಡಲು ಆರಂಭಿಸಿದ್ದನೆಂದು ಹಿಂದೆ ಹೇಳಿವೆಯಲ್ಲವೆ' ಅದು ಆ ಕಾಲದಲ್ಲಿ ಬಹು ಲಾಭಕರವಾದ ವ್ಯಾಪಾರವಾಗಿದ್ದಿತು. ಏಕೆಂದರೆ ಅಫೀಮು ವ್ಯಾಪಾರದ ಮರ್ಮವು ಧನವಂತರೂ ಉತ್ಸಾಹಶೀಲರೂ ಆದ ಪಾರ್ಶೀ ವರ್ತಕರ ಕೈಯಲ್ಲಿ ಮಾತ್ರವಿದ್ದು ಅವರಿಗಲ್ಲದೆ ಅದರ ಮರ್ಮವು ಮತ್ತಾರಿಗೂ ತಿಳಿದಿರಲಿಲ್ಲ. ಅಲ್ಲದೆ ಆಗ ಈಗಿನಂತೆ, 'ರೈಲು' 'ಟೆಲಿಗ್ರಾಫ್' 'ವಯರ್ಲೆಸ್ ಟೆಲಿಗ್ರಾಫ್' ,'ಟೆಲಿಫೋನ್' ಮುಂತಾದ ವ್ಯಾಪಾರ ಸೌಕರ್ಯಗಳಾವುವೂ ಇಲ್ಲದಿದ್ದುದರಿಂದ, ವಿಶೇಷ ಜನರು ಒಂದೇ ವ್ಯಾಪಾರಕ್ಕೆ ನುಗ್ಗಲು ಅವಕಾಶವಿಲ್ಲದೆ ಆ ವ್ಯಾಪಾರದಲ್ಲಿ ಪೋಟಾಪೋಟಿಯು ಕಡಮೆಯಾಗಿ ಅವರು ಹೇಳಿದ ಬೆಲೆಗೆ ಮಾರಬೇಕಾಗಿದ್ದು ವಿಶೇಷ ಲಾಭಕರವಾಗಿಯೂ ಇದ್ದಿತು ಆ ವೇಳೆಗೆ ಹತ್ತೊಂಬತ್ತು ವರ್ಷಗಳ ವಯಸ್ಕರಾಗಿದ್ದ ತರುಣ ಜೇಮ್ಸೇಟ್ಜೀಯವರು ತಮ್ಮ ತಂದೆಯ ಬಳಿ ವ್ಯಾಪಾರದ ರಹಸ್ಯಗಳನ್ನೆಲ್ಲಾ ಕಲಿತು, ಮುಂದೆ ಚೀನಾದೇಶದಲ್ಲಿ ವ್ಯಾಪಾರವನ್ನು ಸಾಗಿಸುವ ಉದ್ದೇಶದಿಂದ ಅಲ್ಲಿಗೆ ಪ್ರಯಾಣಮಾಡಿದರು.

ಜೇಮ್ಸ್ ಲೀ ಯವರು ನಂತರ ನಾಲ್ಕೈದು ವರ್ಷಕಾಲ ಹಾಂಕಾಂಗಿನಲ್ಲೇ ವಾಸಿಸಿದ್ದು ವ್ಯಾಪಾರ ವಿದ್ಯೆಯಲ್ಲಿ ಸಂಪೂರ್ಣವಾದ ಅನುಭವವನ್ನು ಪಡೆದರು ಆ ವೇಳೆಯಲ್ಲಿ ಪ್ರಪಂಚ ಚರಿತ್ರೆಯಲ್ಲಿ ವಿಶೇಷ ವ್ಯತ್ಯಾಸಗಳು ನಡೆಯುತ್ತಿದ್ದುವು ಅಮೆರಿಕದ ಸಂಯುಕ್ತ ಸಂಸ್ಥಾನಗಳವರಲ್ಲಿ ಔತ್ತರೇಯರು ದಾಕ್ಷಿಣಾತ್ಯರು ಎಂಬ ಎರಡು ಪಂಗಡವಾಗಿ ಅವರವರಲ್ಲಿ ಸ್ವಾತಂತ್ರ್ಯಸಂಗ್ರಾಮವು ಬಹು ಘೋರವಾಗಿ ನಡೆಯುತ್ತಿದ್ದಿತು ಆದುದರಿಂದ ಅಲ್ಲಿಂದ ಇಂಗ್ಲೆಂಡಿಗೆ ರಫ್ತಾಗುತ್ತಿದ್ದ ಹತ್ತಿಯ ಬೆಳೆ—ವ್ಯಾಪಾರ ಮುಂತಾದುವು ಕ್ಷೀಣಿಸಿ, ಲಿವರ್‌ಪೂಲ್‌ನಲ್ಲಿ ಹತ್ತಿಯ ಧಾರಣೆಯು ಅತಿಶಯವಾಗಿ ಏರಿದ್ದಿತು ಅಲ್ಲಿಯ ಬಟ್ಟೆಯ ಕಾರ್ಖಾನೆಗಳಿಗೆ ಹತ್ತಿಯು ಅತ್ಯಾವಶ್ಯಕವಾಗಿ ಬೇಕಾಗಿದ್ದು, ಆವರೆಗೂ ಒದಗಿಸುತ್ತಿದ್ದ ಅಮೆರಿಕವು ಹಿಂದೆ ಬಿದ್ದುದರಿಂದ ಮತ್ತಾವ ದೇಶವಾದರೂ ಆ ಸ್ಥಾನವನ್ನು ಆಕ್ರಮಿಸಬೇಕಾಗಿ ಬಂತು ಆ ಸಂದರ್ಭದಲ್ಲಿ ಹಿಂದೂಸ್ಥಾನವು ಲಾಂಕಾಷೈರಿನ ಕಾರ್ಖಾನೆಗಳಿಗೆ ಹತ್ತಿಯನ್ನು ಒದಗಿಸುವ ಕೆಲಸಕ್ಕೆ ಸಿದ್ಧವಾಯಿತು ಹಿಂದೂಸ್ಥಾನದ ಪರದೇಶದೊಂದಿಗಿನ ವ್ಯಾಪಾರಕ್ಕೆ ಮುಖ್ಯ ಸ್ಥಳವಾದ ಬೊಂಬಾಯಿಯೊಂದರಿಂದಲೇ ಹತ್ತರಲ್ಲಿ ಒಂಬತ್ತು ಪಾಲಿನಷ್ಟು ಹತ್ತಿಯು ರಫ್ತಾಗಿ ಅಲ್ಲಿಯ ವರ್ತಕರು ಬಹು ಶೀಘ್ರವಾಗಿ ಕುಬೇರರಾಗತೊಡಗಿದರು. ಹಾಗೆ ರಫ್ತಾದ ಹತ್ತಿಗಾಗಿ ಆಗಬರುತ್ತಿದ್ದ ಬೆಲೆಯಲ್ಲಿಯೂ ಈಗಿನಂತೆ ಕಾಗದದ ನೋಟುಗಳ ರೂಪದಲ್ಲಲ್ಲದೆ, ಬಂಗಾರದ ಗಟ್ಟಿಗಳು ಮತ್ತು ಬೆಳ್ಳಿಯ ಸಲಾಕೆಗಳ ರೂಪದಲ್ಲಿ ಬರುತ್ತಿದ್ದು ಬಹು ಸ್ವಲ್ಪ ಕಾಲದಲ್ಲೇ ಒಟ್ಟು ಐವತ್ತೊಂದು ಕೋಟಿ ರೂಪಾಯಿಗಳಷ್ಟು ಸಂಪತ್ತು ಹಿಂದೂಸ್ಥಾನಕ್ಕೆ ಲಭ್ಯವಾಯಿತು ನಮ್ಮ ಕಥಾನಾಯಕರ ಕಂಪೆನಿಯು ಆಗ ಮಿ|| ಪ್ರೇಮಚಂದ್ ರಾಯಚಂದ್ ಎಂಬ ಸುಪ್ರಸಿದ್ಧ ವರ್ತಕರೊಂದಿಗೆ ವ್ಯವಹಾರವನ್ನಿಟ್ಟುಕೊಂಡು ನಂಬಿಕೆಯಿಂದ ನಡೆಯುತ್ತಿದ್ದುದರಿಂದ ಬಹು ಶೀಘ್ರಕಾಲದಲ್ಲೇ ವಿಶೇಷ ಧನಾರ್ಜನೆ ಮಾಡಿತು ಆ ಸಂಬಂಧದಲ್ಲಿ ಲಂಡನ್ ಪಟ್ಟಣದಲ್ಲೂ ಒಂದು ಬ್ಯಾಂಕನ್ನು ಸ್ಥಾಪಿಸಬೇಕಾದುದು ಆವಶ್ಯಕವೆಂದು ಪ್ರೇಮಚಂದ್ ರಾಯಚಂದ್ ಕಂಪೆನಿಯವರಿಗೆ ಅಭಿಲಾಷೆಯುಂಟಾಯಿತು. ಹಾಗೆ ಲಂಡನ್ನಲ್ಲಿ ಬ್ಯಾಂಕನ್ನು ಸ್ಥಾಪಿಸುವುದಕ್ಕಾಗಿಯೂ ಅಲ್ಲದೆ, ಅಲ್ಲಿಯ ತಮ್ಮ ಕಂಪೆನಿಯ ಹತ್ತಿಯ ವ್ಯಾಪಾರವನ್ನು

ಸಾಗಿಸುವುದಕ್ಕಾಗಿಯೂ ನಮ್ಮ ಕಥಾನಾಯಕರು ಚೀನಾದೇಶದಿಂದ ಹಿಂದಿರುಗಿ ಬರಬೇಕಾಯಿತು. ಅದರಂತೆಯೇ ಹಾಂಕಾಂಗಿನಿಂದ ೧೮೬೩ ರಲ್ಲಿ ಸ್ವದೇಶಕ್ಕೆ ಹಿಂದಿರುಗಿದರು. ಮತ್ತು ಮೊದಲಿನ ಯೋಚನೆಯಂತೆ ಇಂಗ್ಲೆಂಡು ದೇಶಕ್ಕೂ ಪ್ರಯಾಣಮಾಡಿದರು. ಆದರೆ ಲಂಡನ್ನಿನಲ್ಲಿ ಬ್ಯಾಂಕನ್ನು ಸ್ಥಾಪಿಸುವ ವಿಚಾರವು ಮಾತ್ರ ಸಧ್ಯದ ಕಾಲಸ್ಥಿತಿಯನ್ನನುಸರಿಸಿ ಕೆಲಕಾಲ ಮಾನಸಿಕ ಮಾಡಲ್ಪಟ್ಟಿತು. ಆದುದರಿಂದ ಅಲ್ಲಿಯ ಅರಳೆಯ ವ್ಯಾಪಾರವನ್ನು ಮಾತ್ರವೇ ಗಮನಿಸಿಕೊಂಡಿದ್ದರು

ಲಾಂಕಾಷೈರಿನ ಹತ್ತೀ ಬಟ್ಟೆಯ ಕಾರ್ಖಾನೆಗಳಿಗೆ ಬೇಕಾದ ಅರಳೆಯೆಲ್ಲಾ ಹಿಂದೂಸ್ಥಾನದಿಂದಲೇ ಒದಗಿಸಲ್ಪಡಬೇಕಾದ ಆವಶ್ಯಕತೆಯುಂಟಾದುದರಿಂದ, ಹಿಂದೂಸ್ಥಾನದ ವ್ಯಾಪಾರಿಗಳಲ್ಲನೇಕರು, ತಮ್ಮ ಮನೆಮಾರು—ಆಸ್ತಿಪಾಸ್ತಿಗಳನ್ನಾದರೂ ಮಾರಿ, ವಿಶೇಷ ಲಾಭದಾಯಕವಾದ ಆ ವ್ಯಾಪಾರದಲ್ಲಿ ಭಾಗವನ್ನು ಪಡೆಯುವುದು ಹೇಗೆಂದು ಅಹರ್ನಿಶಿ ಜಪಿಸತೊಡಗುವಂತಾಯಿತು. ಬಹು ಮಂದಿ, ತಮಗೆ ಪ್ರಾಪ್ತವಾಗಬಹುದಾದ ಲಾಭದ್ರವ್ಯವನ್ನು ಆಗಲೇ ಎಣಿಸಿ ತೃಪ್ತರಾದರು. ಆ ಸಂಬಂಧ ಆಸೆಯ ಅನೇಕ ಗಾಳಿ ಗೋಪುರಗಳನ್ನು ಕಟ್ಟಿದರು ಅಂಥವರಲ್ಲಿ ಎಲ್ಲರಿಗಿಂತಲೂ ಮುಂದಾಳುಗಳಾಗಿದ್ದ ಮಿ|| ಪ್ರೇಮಚಂದ್ ರಾಯಚಂದ್‌ಯವರ ಕಂಪೆನಿಯೂ ಒಂದು, ಅವರು ಮಿಕ್ಕ ಎಲ್ಲರಂತಲ್ಲದೆ ಸ್ವತಃ ವ್ಯಾಪಾರ ಪ್ರವಾಹದಲ್ಲೇ ಇದ್ದುದರಿಂದ ಕಾಲಸ್ಥಿತಿಯನ್ನನುಸರಿಸಿ ಅದರ ಹಿಂದು ಮುಂದಿನ ಸಂದರ್ಭಗಳಿಂದ ಅರಳೆಯ ವ್ಯಾಪಾರವು ಬರುತ್ತಾ ಬರುತ್ತಾ ಹೆಚ್ಚು ಲಾಭದಾಯಕವಾದೀತೆಂದು ಊಹಿಸುತ್ತಿದ್ದುದು ನ್ಯಾಯವಾಗಿಯೇ ಇತ್ತು. ಆದರೆ ೧೮೬೫ನೆಯ ವರ್ಷದ ಪ್ರಾರಂಭದಲ್ಲಿ ಅಮೆರಿಕಾದ ಯುದ್ಧವು ಇದ್ದುದಿದ್ದಂತೆಯೇ ಅಂತ್ಯವಾಯಿತು. ಜನರಲ್‌ಲೀ ಎಂಬ ಸುಪ್ರಸಿದ್ಧ ಯೋಧನ ಕೈಕೆಳಗಿದ್ದು ಯುದ್ಧ ಮಾಡುತ್ತಿದ್ದ ದಾಕ್ಷಿಣಾತ್ಯರು, ಔತ್ತರೇಯರಿಗೆ ಶರಣು ಹೋದುದರಿಂದ ಯುದ್ಧವು ಒಡನೆ ಕೊನೆಗಂಡಿತು ಅಲ್ಲಿಯ ವ್ಯಾಪಾರ ಉದ್ಯೋಗಗಳು ಎಂದಿನಂತೆ ನಡೆಯಲಾರಂಭವಾದುವು. ಆದರೆ ಆ ವೃತ್ತಾಂತ ಮಾತ್ರ, ಇನ್ನೂ ಗಾಳಿ ಗೋಪುರಗಳನ್ನು ನಿರ್ಮಿಸಿಕೊಂಡು ಮನೋರಾಜ್ಯದ—ಸ್ವರ್ಗಸುಖದಲ್ಲಿ ಮಗ್ನರಾಗಿದ್ದ ಮೇಲ್ಕಂಡ ಅರಳೆಯ ವರ್ತಕ

ಪ್ರಪಂಚಕ್ಕೆ ಸಿಡಿಲ ಧ್ವನಿಯಂತೆ ಭಯಂಕರವಾಗಿ ಕೇಳಿಸಿತು. ಅರಳೆಯ ಧಾರಣೆಯು ದಿನದಿನಕ್ಕೆ ಇಳಿಯ ಸಾಗಿತು. ಆದರ ಮೇಲೆ ಮನೆಗಾರುಗಳನ್ನು ಆಧಾರ ಮಾಡಿ ಲಕ್ಷಾಂತರ—ಕೋಟ್ಯಾಂತರ ದ್ರವ್ಯಗಳನ್ನು ಹಾಕಿದ್ದವರು ಆ ವ್ಯಾಪಾರದಿಂದ ಪಾರಾಗಿ ಮಾರ್ಗದಿಂದ ಬದುಕಿ ಉಳಿಯುವುದೇ ಕಷ್ಟವಾಯಿತು. ದಿವಾಳಿಯ ಅಥವ ದಾವೆಯ ಅರ್ಜಿಗಳಿಂದ ಸಿವಿಲ್ ಕೋರ್ಟುಗಳಲ್ಲಿ ಕೆಲಸವು ಬಹು ಚಟುವಟಿಕೆಯಿಂದ ನಡೆಯಹತ್ತಿತು. ವರ್ತಕ ಸಂಗಡದ ಸ್ಥಿತಿಯೇ ತಲೆಕೆಳಗಾಯಿತು. ಲಕ್ಷಾಧಿಪತಿಗಳು ಭಿಕ್ಷುಕರಾದರು. ಭಿಕ್ಷುಕರು ಶುದ್ಧ ನಿರ್ಗತಿಕರಾದರು. ಮರ್ಯಾದೆಗಂಜಿದ ವರ್ತಕರಲ್ಲನೇಕರು ಆತ್ಮಹತ್ಯ ಮಾಡಿಕೊಳ್ಳಲು ಕೂಡ ಹಿಂದೆಗೆಯದಂತಾಯಿತು. ಈ ಸಂದರ್ಭದಲ್ಲಿ ಆ ವ್ಯಾಪಾರದಲ್ಲಿ ಮುಂದಾಳಾಗಿದ್ದು ಕೋಟ್ಯಾಂತರ ದ್ರವ್ಯವನ್ನು ಚೆಲ್ಲಿದ್ದ ಪ್ರೇಮಚಂದ್ ರಾಯಚಂದ್ ಕಂಪೆನಿಯವರ ಸ್ಥಿತಿಯನ್ನು ವರ್ಣಿಸಬೇಕಾದುದೇನು? ಅದರ ಪರವಾಗಿ ಲಂಡನ್ನಲ್ಲಿದ್ದ ನಮ್ಮ ಕಥಾನಾಯಕರು, ಅಲ್ಲಿಯ ತಮ್ಮ ಅಂಗಡಿ ಮುಂಗಟ್ಟುಗಳನ್ನು ಮಾರಿ, ಸಾಲಗಾರರ ಬಾಕಿಯನ್ನು ತೀರಿಸಿಕೊಂಡು, ಮಾರ್ಗದಿಂದ ಸ್ವದೇಶಕ್ಕೆ ಹಿಂದಿರುಗುವುದೇ ಅತ್ಯಂತ ಶ್ರಮಸಾಧ್ಯವಾಯಿತು. ಇನ್ನು ಬೊಂಬಾಯಿಯಲ್ಲಿನ ಮುಖ್ಯ ಕಾರ್ಯಾಲಯವು (ಹೆಡ್ ಆಫೀಸು) ಇದುವರೆಗೆ ಬಹು ದಿನಗಳಿಂದ ನ್ಯಾಯರೀತಿಯಿಂದ ನಡೆದು ಬಂದ ಪುಣ್ಯವಿಶೇಷದಿಂದಲೋ ಎಂಬಂತೆ ಜೀವದೊಂದಿಗೆ ಉಳಿಯಿತು ಅಷ್ಟೆ!

ಜೀವನವೆಂಬುದು ದೊಡ್ಡದೊಂದು ಪ್ರವಾಹವನ್ನು ಹೋಲುವುದು. ಕೆಲವರು ನೀರಿನ ಆಳ, ಪ್ರವಾಹದ ರಭಸ, ಸುಳಿ, ಮಡುವುಗಳಿಗೆ ಬೆದರದೆ ಈ ಪ್ರವಾಹವನ್ನು ಧೈರ್ಯವಾಗಿ ಪ್ರವೇಶಿಸಿ, ಹಿಂಜರಿಯದೆ ಈಜತೊಡಗುವರು. ಅವರ ಪ್ರಯಾಣವೂ ಆ ಪ್ರವಾಹ ವೇಗದಿಂದ ಜಾಗ್ರತೆಯಾಗಿ ಸಾಗಿ ಅವರೂ ಶೀಘ್ರವಾಗಿ ಬೇರೆ ದಡವನ್ನು ಸೇರುವರು. ಪ್ರವಾಹ ವೇಗಕ್ಕಂಜದಿದ್ದರೆ ಅದರಿಂದುಂಟಾಗುವ ಸುಖವೂ ಸೌಲಭ್ಯವೂ ಉಂಟೇ ಉಂಟು. ಬೇರೆ ಕೆಲವರು ಹಾಗಲ್ಲ! ಅವರು ಆಳಕ್ಕೆ ಇಳಿಯಲು ಹೆದರಿ, ಪ್ರವಾಹದ ನೀರೆಲ್ಲವೂ ಬತ್ತಿದ ಮೇಲೆ ಅಂಗಾಲೂ ನೆನೆಯದಂತೆ ಒಂದು ದಡದಿಂದ ಮತ್ತೊಂದು ದಡಕ್ಕೆ ಬಹು ಸುಲಭವಾಗಿ ದಾಟಬಹುದೆಂದು, ಕಾದು ಕುಳಿ

ತಿರುವರು. ಅವರು ಎಂದೆಂದಿಗೂ ಕಾಗು ಕುಳಿತಿರುವುದೇ! ಧೈರ್ಯವಾಗಿ ಜೀವನ ಪ್ರವಾಹವನ್ನು ಪ್ರವೇಶಿಸುವವರಿಗೆ ಪ್ರವಾಹದ ಏರಿಕೆ ಇಳಿತಗಳನ್ನನುಸರಿಸಿ ಸಂಪತ್ತಿನ ಏರಿಕೆ ಇಳಿತಗಳೂ ಪ್ರಾಪ್ತವಾಗುವುವು. ಹಾಗಲ್ಲದೆ, ಧೈರ್ಯಹೀನರಾದವರಿಗೆ ಏರಿಕೆಯೂ ಇಲ್ಲ—ಇಳಿತವೂ ಇಲ್ಲ! ಕಷ್ಟವೂ ಇಲ್ಲ—ನಷ್ಟವೂ ಇಲ್ಲ! ಕೈಯೂ ಕೆಸರಾಗುವುದಿಲ್ಲವಾದುದರಿಂದ ಬಾಯೂ ಮೊಸರನ್ನು ಕಾಣುವುದಿಲ್ಲ! ಅವರು, ಹಸುವನ್ನು ಕಾಯ್ದು ಕಟ್ಟಿ ಅದರ ಸೆಗಣಿ ಗಂಜಲಗಳನ್ನು ಗುಡಿಸಿ, ಕರೆಯುವಾಗ ಅದು ಒದೆಯುವ ಪೆಟ್ಟಿಗೂ ಒದರ್ ಹಾಲ್ಕರೆದು, ಹಾಲನ್ನು ಕಾಯಿಸಿ ಹೆಪ್ಪಿಟ್ಟು ನವಿ ಮೊಸರನ್ನೂ ರಸವಂತವಾದ ಬೆಣ್ಣೆಯನ್ನೂ ಸವಿಯುತಕ್ಕ ಕಾರ್ಯವಂತನನ್ನು ಕಂಡು ನಾಲಗೆಯಿಂದ ತುಟಿಯನ್ನು ಸವರಿಕೊಂಡು ಬಾಯಿ ಚಪ್ಪರಿಸಿಕೊಳ್ಳಲು ಮಾತ್ರ ಅರ್ಹರು! ಆದರೇನು, ಬರೀ ಬಾಯಿ ಬರೀ ನಾಲಗೆ!

ಮೇಲ್ಕಂಡಂತೆ ಅರಳೆಯ ವ್ಯಾಪಾರದಿಂದ ಅತಿಶಯ ನಷ್ಟ ಪಟ್ಟಾಗ್ಯೂ ನಮ್ಮ ಕಥಾನಾಯಕರು ಅಧೀರರಾಗದೆ, ಜಾರುತ್ತಿದ್ದ ಪಾದಗಳನ್ನು ತಡವರಿಸಿ ಭದ್ರವಾದ ಸ್ಥಳದಲ್ಲಿಟ್ಟುಕೊಂಡು ಸ್ವಲ್ಪ ಕೆಲದಿನಗಳನ್ನು ಮಾತ್ರ ವಿನಿಯೋಗಿಸಿ, ಪುನಃ ಮುಂದರಿಸತೊಡಗಿದರು. ಮತ್ತೆ ಯಾವ ಮಾರ್ಗವನ್ನು ಅನುಸರಿಸಬಹುದೆಂದು ಯೋಚಿಸತೊಡಗಿದರು. ಆ ವೇಳೆಗೆ ಬ್ರಿಟಿಷ್ ಸರ್ಕಾರದವರಿಗೆ ಅಬಿಸೀನಿಯಾದೇಶದ ರಾಜನೊಂದಿಗೆ ಯುದ್ಧವು ಪ್ರಾರಂಭವಾಯಿತು. ಆ ಯುದ್ಧಕ್ಕೆ ವೈಸ್ರಾಯಿಯು ಸರ್ ರಾಬರ್ಟ್ ನೇಪಿಯರ್ ಎಂಬ ಸೈನ್ಯಾಧಿಪತಿಯನ್ನು ನಿಯಮಿಸಿದನು. ಆತನು ಆ ಪ್ರಾಂತದಲ್ಲಿನ ಪ್ರಯಾಣ ಆ ಮೊರಟು ಜನಗಳೊಂದಿಗೆ ಬಡಿದಾಟ ಮುಂತಾದುವುಗಳಲ್ಲಿಪ್ಪ ಕಷ್ಟಸಂಕಟಗಳನ್ನು ಅರಿತವನಾಗಿದ್ದುದರಿಂದ ತನಗೆ ಒಂದು ವರ್ಷದ ಸಂಪೂರ್ಣ ಭತ್ಯವನ್ನೂ ಒದಗಿಸಿದಲ್ಲದೆ, ಆ ಕಾರ್ಯವನ್ನು ವಹಿಸಿಕೊಳ್ಳುವುದು ಸಾಧ್ಯವಲ್ಲವೆಂದು ತಿಳಿಸಿದನು. ಸರ್ಕಾರದಿಂದ ಹಾಗೇ ಮಾಡಬಹುದೆಂದು ಅನುಮೋದಿತವಾಯಿತು. ಆವರೆಗೇ ಒಂದೆರಡು ಮಿಲಿಟರಿ ಕಂಟ್ರಾಕ್ಟುಗಳನ್ನು ಮಾಡಿ, ಪಳಗಿದ್ದ ಜೆಮ್ಸೆಟ್ಜೀಯವರು, ಆ ಕೆಲಸವನ್ನು ವಹಿಸಿಕೊಂಡು ಸೈನ್ಯಕ್ಕೆ ಆವಶ್ಯಕವಾದ ಪದಾರ್ಥಗಳನ್ನು ಒದಗಿಸಲು, ಒಪ್ಪಿಕೊಂಡರು. ಆದರಿಂದ ವಿಶೇಷ ಲಾಭ ಬಂದು, ಅರಳೆಯ ವ್ಯಾಪಾರದಲ್ಲಿ ಉಂಟಾಗಿದ್ದ

ನಷ್ಟವು ಪರಿಹಾರವಾಗಿ, ತಾತಾಯವರ ಕಂಪೆನಿಯು ಒಂದು ಗೊತ್ತಾದ ಭದ್ರವಾದ ತಳಹದಿಯ ಮೇಲೆ ನಿಲ್ಲಲು ಅವಕಾಶವಾಯಿತು.

ಇಂತಹ ಅಪಘಾತ ಪ್ರವಾಹದ ಉಬ್ಬರವಿಳಿತಕ್ಕೆ ಒಂದು ಸಾರಿ ಒಳಪಟ್ಟು, ದೈವಯೋಗದಿಂದ ದಡವನ್ನು ಸೇರಿದ ತರುವಾಯ, ಸಾಮಾನ್ಯನಾದರೆ, ಇಷ್ಟು ಮಾತ್ರ ಉಳಿದಂತಾಯಿತಲ್ಲ! ಇನ್ನು ಈ ವ್ಯವಹಾರವು ಸಾಕು ಮುಂದೆ ಇದ್ದುದನ್ನು ತಿಂದುಕೊಂಡು ಕುಳಿತಿರೋಣವೆಂದು ಯೋಚಿಸುವುದು ಸ್ವಾಭಾವಿಕವಷ್ಟೆ! ಆದರೆ ದೊಡ್ಡ ವ್ಯಾಪಾರಿಗಳ—ಘನಕಾರ್ಯಗಳನ್ನು ಆರಂಭಿಸತಕ್ಕವರ ಸ್ಥಿತಿಯು ಅಂಥದಲ್ಲ! ಅವರು ಹಿಂದಿರುಗಿ ನೋಡದೆ, ಎಡಬಲಗಳಿಗೆ ತಿರುಗದೆ ಮುಂದರಿಸುತ್ತಲೇ ಇರಬೇಕು. ಮಾರ್ಗದಲ್ಲಿ ಕಷ್ಟನಷ್ಟಗಳು ಬಂದರೆ ಅಂಜದೆ ತಲೆಗೊಟ್ಟು ಅನುಭವಿಸಬೇಕು ಆದರೆ ಮುಂದಿಟ್ಟ ಹೆಜ್ಜೆಯನ್ನು ಮಾತ್ರ ಹಿಂದಿಡಲಾಗದು. ಅಲ್ಲ—ನಿಲ್ಲಲಾಗದು! ಈ ವ್ಯಾಪಾರ ಧರ್ಮಸೂಕ್ಷ್ಮವನ್ನು ತಿಳಿದಿದ್ದ ನಮ್ಮ ಚರಿತ್ರನಾಯಕರು, ಒಡನೆ ಮುಂದೆ ಯಾವ ಕೆಲಸ ಮಾಡಬೇಕೆಂದು ಯೋಚಿಸತೊಡಗಿದರು ಆ ವೇಳೆಗೆ ಅರಳೆಯ ವ್ಯಾಪಾರ ಬೀಜವು ಪುನಃ ಮೊಳಕೆಯಾಗಿತ್ತು. ಅದನ್ನು ಚೆನ್ನಾಗಿ ಪೋಷಿಸತಕ್ಕುದೇ ಹೆಚ್ಚು ಲಾಭಕರವೆಂದು ಅವರ ಸೂಕ್ಷ್ಮಬುದ್ಧಿಗೆ ತೋರಿತು ಆದರಂತೆಯೇ ಅವರು, ತಮ್ಮ ಸಹೋದ್ಯೋಗಿಗಳಾದ ಒಬ್ಬರಿಬ್ಬರು ವರ್ತಕರೊಂದಿಗೆ ಒಪ್ಪಂದ ಮಾಡಿಕೊಂಡು, ದಿವಾಳಿ ತೆಗೆದಿದ್ದ ಒಂದು ಎಣ್ಣೆಯ ಕಾರ್ಖಾನೆಯ ಯಂತ್ರಸಾಮಗ್ರಿಗಳನ್ನು ಬೆಲೆ ಮಾಡಿ ತೆಗೆದುಕೊಂಡರು, ಮತ್ತು ಅದನ್ನು ನೂಲುವ ಮತ್ತು ನೇಯುವ ಕಾರ್ಖಾನೆಗೆ ಅನುವಾಗುವಂತೆ ರೂಪಾಂತರಗೊಳಿಸಿ ಕೆಲಸಮಾಡತೊಡಗಿದರು ಆಗತಾನೇ ಅರಳೆಯ ಧಾರಣೆಯೂ ಏರ್ಪಿಕೆಯ ತರುಣದಲ್ಲಿದ್ದು ಆ ಕೈಗಾರಿಕೆಯು ಹೆಚ್ಚು ಹೆಚ್ಚು ಲಾಭಕರವಾಗಿ ತೋರುತ್ತಿದ್ದಿತು ಮೇಲೆ ಮೇಲೆ ಬೊಂಬಾಯಿಯ ಧನಿಕರೂ ಅರಳೆಯನ್ನು ನೂಲುವ ಮತ್ತು ನೇಯುವ ಕಾರ್ಖಾನೆಗಳನ್ನು ಸ್ಥಾಪಿಸುವ ಯೋಚನೆಯುಲ್ಲಿದ್ದರು ಹೀಗಾಗಿ ಸುಮಾರು ೧೮೭೦—೭೫ ರ ಸುಮಾರಿಗೆ ಬೊಂಬಾಯಿ ನಗರದಲ್ಲಿ ಎಂಟು ಕಾರ್ಖಾನೆಗಳು ಕೆಲಸಮಾಡುವಂತಾದುವು ಆದನ್ನು ಕಂಡ ಕೇಶವ್ಜೀನಾಯಕ್ ಎಂಬೊಬ್ಬ ಧನಿಕ ಹಿಂದೂ ವರ್ತಕನು, ತಾತಾಯವರು ಪಾಲಿನಿಂದ ಕೆಲಸ ಮಾಡುತಿದ್ದ ಮೇ

ಲ್ಯಾಂಡ ಕಾರ್ಖಾನೆಯನ್ನು ಕೊಂಡುಕೊಳ್ಳಲು ಅಪೇಕ್ಷಿಸಿದನು. ಅವರೂ ತಮ್ಮ ಮೂಲಧನಕ್ಕೆ ಎರಡರಷ್ಟಾದ ಬೆಲೆಗೆ ಅದನ್ನು ಮಾರಿಬಿಟ್ಟರು. ಅದರಲ್ಲೂ ಹೆಚ್ಚು ಲಾಭ ಸಂಪಾದನೆಯಾಯಿತು. ಆ ಸಂದರ್ಭದಲ್ಲೇ ಅವರಿಗೆ; ತಮ್ಮ ಸ್ವಂತಕ್ಕಾಗಿ ಒಂದು ಕಾರ್ಖಾನೆಯನ್ನು ಸ್ಥಾಪಿಸಿಕೊಳ್ಳಬೇಕೆಂಬ ಅಪೇಕ್ಷೆಯುಂಟಾಯಿತು. ಅಲ್ಲದೆ ಅವರು ಬೊಂಬಾಯಿ ನಗರದ ಮುಂದಿನ ಘನತೆಗಾಂಭೀರ್ಯ ಸಂಪತ್ತುಗಳೆಲ್ಲವೂ ಆ ಅರಳೆಯ ನೂಲುವಿಕೆ ಮತ್ತು ನೇಯ್ಗೆಯ ವ್ಯಾಪಾರದ ಮೇಲೆಯೇ ಅವಲಂಬಿಸಿರುವುದೆಂದೂ ತಿಳಿದರು. ಆ ವಿಚಾರದಲ್ಲಿ ಸಂಪೂರ್ಣವಾದ ಮಾಹಿತಿಯನ್ನು ಪಡೆದು, ತಮ್ಮ ಕಾರ್ಖಾನೆಯನ್ನು ಅದ್ವಿತೀಯವಾದುದನ್ನಾಗಿಸಬೇಕೆಂದು ಅವರು ಅಭಿಲಾಷೆಪಟ್ಟರು. ಅದಕ್ಕಾಗಿ ಆವರಗೇ ಇಂಗ್ಲೆಂಡು ದೇಶದಲ್ಲಿ ಸ್ಥಾಪಿತವಾಗಿ, ಬಹು ಫಲಪ್ರದವಾಗಿ ಕೆಲಸ ಮಾಡುತ್ತಿದ್ದ ಕಾರ್ಖಾನೆಗಳ ಕಾರ್ಯಕ್ರಮಗಳನ್ನು ಪ್ರತ್ಯಕ್ಷ ನೋಡಿ ಅನುಭವಪಟ್ಟು ಬರಬೇಕಾದುದು ಆವಶ್ಯಕವೆಂದೂ ಯೋಚಿಸಿದರು. ಅದರಂತೆಯೇ ಇಂಗ್ಲೆಂಡಿನಲ್ಲಿರುವ ಮ್ಯಾಂಚೆಸ್ಟರ್ ಪಟ್ಟಣಕ್ಕಾಗಿ ಪ್ರಯಾಣ ಮಾಡಿದರು ಹೀಗೆ ನಮ್ಮ ಕಥಾನಾಯಕರು ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿ, ಉದ್ಯೋಗ ಪ್ರಾರಂಭ ಮಾಡುವುದರೊಳಗಾಗಿಯೇ, ಸುಪ್ರಸಿದ್ಧ ಕಾರ್ಯಕ್ಷೇತ್ರವೆನಿಸಿದ ಇಂಗ್ಲೆಂಡು ದೇಶಕ್ಕೆ ಎರಡು ಸಾರಿ ಪ್ರಯಾಣಮಾಡಿ, ತಮ್ಮ ಜೀವಿತ ಕಾರ್ಯದಲ್ಲಿ ವಿಶೇಷ ಅನುಭವವನ್ನು ಸಂಪಾದಿಸಿಕೊಂಡರು.



## ಅಧ್ಯಾಯ ೩ "ಸೌಭಾಗ್ಯಾತಿಶಯ"

ಮ್ಯಾಂಚೆಸ್ಟರ್ ಮತ್ತು ಲಿವರ್‌ಪೂಲ್ ಎಂಬ ಪಟ್ಟಣಗಳು, ಇಂಗ್ಲೆಂಡಿನಲ್ಲಿ, ಅರಳೆಯ ನೂಲುವ ಮತ್ತು ನೇಯುವ ಕಾರ್ಖಾನೆಗಳಿಗಾಗಿ ಮಾತೃಸ್ಥಾನವೆನಿಸಿಕೊಂಡಿವೆ ಅವುಗಳಲ್ಲಿ ಆಯಾ ಕಾರ್ಖಾನೆಗಳಿಗೆ ಸಂಬಂಧಪಟ್ಟ ಸಮಸ್ತ ವಸ್ತು ಸಾಮಗ್ರಿಗಳೂ ಸಂಪೂರ್ಣ ಸ್ಥಿತಿಯಲ್ಲಿದ್ದು, ಆ ವೃತ್ತಿಯಲ್ಲಿ ಅನುಭವ ಪಡಬೇಕೆಂದು ಅಪೇಕ್ಷೆಯುಳ್ಳವನಿಗೆ ಅವು ಅತ್ಯುತ್ತಮ ಶಿಕ್ಷಣಕ್ಷೇತ್ರಗಳಾಗಿ ಪರಿಣಮಿಸಿವೆ. ಮೊದಲನೆಯ ಸಾರಿ ಇಂಗ್ಲೆಂಡಿನಲ್ಲಿ

ದ್ದಾಗ್ಗೇ ಆ ಸ್ಥಳಗಳ ಮಹತ್ವವನ್ನು ಅರಿತಿದ್ದ ಮಿ॥ ಜೇಮ್ಸೇಟ್ಜೀಯವರು, ತಮ್ಮ ಆಶಯವನ್ನು ನೆರವೇರಿಸಿಕೊಳ್ಳಲು, ಅವುಗಳಿಗಿಂತಲೂ ಉತ್ತಮ ಸ್ಥಳಗಳು ದೊರೆಯಲಾರವೆಂದು ಬಗೆದು, ಮತ್ತಾವ ಯೋಚನೆಗೂ ಅವಕಾಶ ಕೊಡದೆ,—ಬೇರೆ ವಿಧವಾಗಿ ಕಾಲವ್ಯವಧಾನಮಾಡದ, ನೇರವಾಗಿ ಮ್ಯಾಂಚೆಸ್ಟರ್ ಪಟ್ಟಣಕ್ಕೇ ಪ್ರಯಾಣ ಮಾಡಿದರು. ಅಲ್ಲಿಯ ಕಾರ್ಖಾನೆಗಳು ಅವುಗಳ ಕಾರ್ಯಕ್ರಮ, ಕೆಲಸಗಾರರ ಜಮಾವಣೆ, ಅವರ ವಾಸಸ್ಥಾನ ವಿಚಾರಗಳು, ಕಾರ್ಖಾನೆಯ ಇತರ ಅನುಕೂಲತೆಗಳು, ಅರಳಿಯ ಜಮಾವಣೆ, ಅರಳೆಯು ಹಚ್ಚು ವ್ಯರ್ಥವಾಗದಂತೆ ನೂಲುವಿಕೆಯ ಮತ್ತು ನೇಯುವಿಕೆಯ ಮರ್ಮ, ಸಿದ್ಧವಾದ ಪದಾರ್ಥಗಳನ್ನು ಲಾಭಕರವಾಗಿ ಮಾರುವ ವಿಚಾರದಲ್ಲಿ ಗಮನಿಸಬೇಕಾದ ವಿಷಯಗಳು ಮುಂತಾದ ಕಾರ್ಖಾನೆಯ ಕಾರ್ಯಭಾಗದ ಒಂದೊಂದು ಸಂಗತಿಯಲ್ಲೂ ಅಲ್ಲಿದ್ದ ದೀರ್ಘಾನುಭವಿಗಳಿಂದ ವಿಷಯಸಂಗ್ರಹಣ ಮಾಡಿದರು ಇಂಗ್ಲೆಂಡು ದೇಶದ ಮತ್ತು ಹಿಂದೂಸ್ಥಾನದ ವ್ಯಾಪಾರಸ್ಥಿತಿ, ಅರಳೆಯ ವ್ಯಾಪಾರದ ಏರಿಕೆ ಇಳಿತಗಳ ಕಾಲಗಳು, ನಾಣ್ಯಗಳ ಬೆಲೆಯಲ್ಲಿ ಕಾಲಕಾಲಕ್ಕೆ ಆಗುತ್ತಿದ್ದ ವ್ಯತ್ಯಾಸಗಳಿಂದ ತಮ್ಮ ವ್ಯಾಪಾರಕ್ಕೆ ಸಂಬಂಧಿಸಬಹುದಾದ ಸಾಧಕ ಬಾಧಕಗಳು, ಮುಂತಾದ ಎಲ್ಲಾ ವಿಚಾರಗಳಲ್ಲೂ ಅನುಭವಗೊಂಡು, ಮಾತೃಭೂಮಿಗಾಗಿ ಹಿಂದಿರುಗಿದರು. ಬೊಂಬಾಯಿಯನ್ನು ಸೇರಿದೊಡನೆಯೇ ತಮ್ಮ ಕಾರ್ಖಾನೆಯನ್ನು ಸ್ಥಾಪಿಸಬೇಕಾದ ಸ್ಥಳದ ವಿಚಾರವು ಅವರ ಯೋಚನೆಯನ್ನು ಹೆಚ್ಚಾಗಿ ಆಕ್ರಮಿಸಿತು ಅವರ ಆವರೆಗಿನ ಅನುಭವದಲ್ಲಿ ಹತ್ತಿಯ ಬೆಳೆಯು ಯಾವ ಪ್ರಾಂತದಲ್ಲಿ ವಿಶೇಷವಾಗಿ ನಡೆಯುವುದೋ ಆ ಪ್ರಾಂತಕ್ಕೆ ಒಪ್ಪಂದರೆ ನಾಲ್ಕಾರು ಮೈಲುಗಳ ದೂರದಲ್ಲೇ ಕಾರ್ಖಾನೆಯು ಇರಬೇಕಾದುದು ಆವಶ್ಯಕವೂ—ಲಾಭಕರವೂ ಎಂಬ ಸಿದ್ಧಾಂತವು ಕಂಡುಬಂದಿದ್ದಿತು. ಅಲ್ಲದೆ, ಗುಜರಾತು ಮಧ್ಯಪ್ರಾಂತ ಮತ್ತು ಖಾನದೇಶಗಳು ಹತ್ತಿಯ ವ್ಯವಸಾಯಕ್ಕೆ ತೌರುಮನೆಯಂತಿರುವುವೆಂಬ ಸಂಗತಿಯಾದರೂ ಅವರ ತಿಳಿವಳಿಕೆಗೆ ಆವರೆಗೇ ಬಂದಿತ್ತು. ಆದುದರಿಂದ ಮಧ್ಯಪ್ರಾಂತಗಳ ಮುಖ್ಯಪಟ್ಟಣವಾಗಿ ಇತರ ಪ್ರಾಕೃತಿಕ ಅನುಕೂಲತೆಗಳನ್ನೂ ಉಂಟಾಗಿ, ಆ ಪ್ರಾಂತಕ್ಕೆಲ್ಲಾ ದೊಡ್ಡ ವ್ಯಾಪಾರಸ್ಥಳವೆನಿಸಿಕೊಂಡಿದ್ದ ನಾಗಪುರವು ಅವರ ದೃಷ್ಟಿ

ಯನ್ನು ವಿಶೇಷವಾಗಿ ಆಕರ್ಷಿಸಿತು. ತಮ್ಮ ಮುಖ್ಯ ಕಾರ್ಯಕ್ಷೇತ್ರವಾದ ಬೊಂಬಾಯಿಯನ್ನು ಬಿಟ್ಟು ಪ್ರಾರಂಭಕ್ಕೇ ನಾಗಪುರವನ್ನು ತಮ್ಮ ಕಾರ್ಖಾನೆಗೆ ಯೋಗ್ಯಸ್ಥಳವನ್ನಾಗಿ ಚುನಾಯಿಸಿಕೊಂಡ ಮಿ|| ಟಾಟಾಯವರ ಸೂಕ್ಷ್ಮಮತಿಯೂ, ಚಾತುರ್ಯವೂ ಸಾಮಾನ್ಯವಾದುದಲ್ಲ! ಏಕೆಂದರೆ, ನಾಗಪುರವು ಆ ಪ್ರಾಂತಕ್ಕೆ ಮುಖ್ಯ ಸ್ಥಳವು ಮಾತ್ರವಲ್ಲ! ಒಳನಾಡಿನಿಂದ ರೈಲು ಅಥವ ಜಹಜು ಮೂಲಕ ಹೊರಕ್ಕೆ ಸಾಗಬೇಕಾದ ಎಲ್ಲಾ ಪದಾರ್ಥಗಳೂ ಅಲ್ಲಿಗೆ ಬಂದು ಮುಂದಕ್ಕೆ ಹೋಗಬೇಕು. ಅಲ್ಲದೆ ಹೊರಗಿನಿಂದ ಬರುವ ಪದಾರ್ಥಗಳಾದರೂ ಆ ಪಟ್ಟಣದ ಮೂಲಕವಾಗಿಯೇ ಒಳನಾಡಿನಲ್ಲಿ ಪ್ರವೇಶಗೊಳ್ಳಬೇಕು. ಆದುದರಿಂದ ಕಾರ್ಯವಿಚಕ್ಷಣರಾದ ಶ್ರೀ ಟಾಟಾಯವರು ಬಹು ವಿಧ ದೃಷ್ಟಿಗಳಿಂದ ನೋಡಿ ವಿಚಾರ ಮಾಡಿ ಆ ಸ್ಥಳವನ್ನೇ ಚುನಾಯಿಸಿ ಅಲ್ಲಿ ತಮ್ಮ ಕಾರ್ಖಾನೆಗಾಗಿ ಕಟ್ಟಡಗಳನ್ನು ಕಟ್ಟಿಸಲು ಶಂಕುಸ್ಥಾಪನೆ ಮಾಡಿಸಿದರು. ಕಟ್ಟಡಕ್ಕೆ ಬೇಕಾದ ಸಾಮಗ್ರಿಗಳ ಜಮಾವಣೆ, ಕಂಟ್ರಾಕ್ಟರುಗಳ ಮೇಲ್ವಿಚಾರಣೆ, ಉಪಯೋಗಿಸುವ ಕಬ್ಬಿಣ, ಮರ, ಇಟ್ಟಿಗೆ ಕಲ್ಲು ಸುಣ್ಣ ಗಾರೆಗಳ ವಿಚಾರದಲ್ಲೂ ಶ್ರೀ ಟಾಟಾಯವರು ಕಂಟ್ರಾಕ್ಟರಿಗೆ ವಹಿಸಿ, ತಾವು ವಿಶ್ರಾಂತಿಯನ್ನು ಪಡೆದು ಕುಳ್ಳಿರಲಿಲ್ಲ. ಒಂದೊಂದು ವಿಷಯವನ್ನೂ ಕಣ್ಣುಬಿಟ್ಟು ಕೈಮುಟ್ಟಿ ವಿಚಾರಿಸುತ್ತಿದ್ದರು. ಶೀಘ್ರಕಾಲದಲ್ಲೇ ಕಟ್ಟಡಗಳ ತಯಾರಿಯು ಮುಗಿದು, ಕಾರ್ಖಾನೆಯು ಸಿದ್ಧವಾಯಿತು. ಒಡನೆ ಯಂತ್ರಸಾಮಗ್ರಿಗಳ ಜಮಾವಣೆಯಾಯಿತು. ನಿತ್ಯದ ಉಪಯೋಗಕ್ಕಾಗಿ ಹತ್ತಿ—ಅರಳೆಗಳೂ ಜಮಾಯಿಸಲ್ಪಟ್ಟವು. ಕೆಲಸಗಾರರು—ಗುಮಾಸ್ತರು—ಕೂಲಿಗಳು ಮುಂತಾದವರೂ ಯೋಗ್ಯಸಂಖ್ಯೆಯಿಂದ ಸಂಗ್ರಹಿಸಲ್ಪಟ್ಟರು. ಹೀಗಾಗಿ ೧೮೭೬ ನೆಯ ಸಂವತ್ಸರದ ಡಿಶಂಬರು ಮಾಸದ ವೇಳೆಗೆ ಕಾರ್ಖಾನೆಗೆ ಸಂಬಂಧಪಟ್ಟ ಸಮಸ್ತ ಪ್ರಾರಂಭ ಸಿದ್ಧತೆಗಳೂ ಮುಗಿದುವು. ೧೮೭೭ ನೆಯ ಜನವರಿ ಒಂದನೆಯ ತಾರೀಖಿನ ದಿನ ಕಾರ್ಖಾನೆಯ ಪ್ರಾರಂಭ ಮಹೋತ್ಸವವನ್ನು ನೆರವೇರಿಸಬೇಕೆಂದು ಏರ್ಪಡಿಸಲ್ಪಟ್ಟಿತು. ಆ ಉತ್ಸವಕ್ಕಾಗಿ ಬೊಂಬಾಯಿಯಿಂದಲೂ ಇತರ ಸ್ಥಳಗಳಿಂದಲೂ ಅನೇಕ ಮಂದಿ ಸ್ನೇಹಿತರೂ ದೊಡ್ಡ ಮನುಷ್ಯರೂ ಆಹ್ವಾನಿಸಲ್ಪಟ್ಟರು. ಮಧ್ಯಪ್ರಾಂತಗಳ ಚೀಫ್ ಕಮಿಷನರಾಗಿದ್ದ ಸರ್ ಜಾರ್ಜ್ ಮಾರಿಸ್ ಎಂಬ ದೊಡ್ಡ ಮನುಷ್ಯರು ಆ ದಿನದ

ಸಭೆಗೆ ಅಧ್ಯಕ್ಷರಾಗಬೇಕೆಂದು ಪ್ರಾರ್ಥಿತರಾದರು. ಮೆ|| ಮಾರಿಸ್ ಸಾಹೇಬರು ಸ್ವತಃ ಉತ್ಸಾಹಶಾಲಿಗಳೂ, ಕೈಗಾರಿಕೆಯ ಅಭಿವೃದ್ಧಿಯನ್ನು ಅಪೇಕ್ಷಿಸತಕ್ಕವರೂ ಆಗಿದ್ದುದಲ್ಲದೆ ಕೈಗಾರಿಕೆಯ ಅಂತಹ ಒಂದು ಕಾರ್ಖಾನೆಯು ತಮ್ಮ ಆಡಳಿತಕ್ಕೆ ಒಳಪಟ್ಟು ಮಧ್ಯಪ್ರಾಂತಗಳಲ್ಲಿ ಇರಬೇಕೆಂದು ಹೆಚ್ಚಾಗಿ ಅಪೇಕ್ಷಿಸುವವರೂ ಆಗಿದ್ದರು. ಜನವರಿ ೧ ನೇ ತಾರೀಖಿನ ದಿನ ಕಾರ್ಖಾನೆಯ ಕಾರ್ಯಾಲಯವು ತಳಿರುತೋರಣ ಪತಾಕೆಗಳಿಂದ ಅಲಂಕೃತವಾಗಿ ಸ್ಥಳ ಪರಸ್ಥಳದ ದೊಡ್ಡ ಮನುಷ್ಯರಿಂದ ತುಂಬಿದ್ದಿತು. ನಾಗಪುರದವರಿಗೆ ಆ ದಿನ ಅಧಿಕ ಸಂಭ್ರಮ. ಅಷ್ಟು ಮಾತ್ರವಲ್ಲ' ಅದು ಶ್ರೀಮದ್ವಿಕ್ಟೋರಿಯಾ ಮಹಾರಾಣಿಯವರು, ಹಿಂದೂಸ್ಥಾನದ ಚಕ್ರವರ್ತಿನೀತ್ವವನ್ನು ಸ್ವೀಕರಿಸುವ ಸುದಿನವಾಗಿಯೂ ಇದ್ದಿತು. ಅಂತಹ ಸುದಿನದಲ್ಲಿ ಪ್ರಾರಂಭಿಸಲ್ಪಟ್ಟ ಆ ಕಾರ್ಖಾನೆಗೆ ಶ್ರೀ ತಾತಾಯವರು 'ದಿ ಎಂಪ್ರೆಸ್ ಮಿಲ್' ಎಂದು ನಾಮಕರಣ ಮಾಡಿದರು. ಆದರೆ ಅವರ ಕಂಪೆನಿಯ ಹೆಸರೇನೋ, "ದಿ ಸೆಂಟ್ರಲ್ ಇಂಡಿಯನ್ ಸ್ಪಿನ್ನಿಂಗ್ ಅಂಡ್ ವೀವಿಂಗ್ ಕಂಪೆನಿ ಲಿಮಿಟೆಡ್" ಎಂದು ಇದ್ದರೂ, ಚಕ್ರವರ್ತಿನಿಯವರ ಮಕುಟಾಭಿಷೇಚನದ ಜ್ಞಾಪಕಾರ್ಥವಾಗಿ ಆ ದಿನ ಸ್ಥಾಪಿತವಾದ ಆ ಕಾರ್ಖಾನೆಯನ್ನು 'ದಿ ಎಂಪ್ರೆಸ್ ಮಿಲ್' ಎಂದು ಕರೆದುದೇ ಯುಕ್ತಿಯುಕ್ತವಾಯಿದು. ನೆರೆದ ಸಭಿಕರೆಲ್ಲರೂ ಹಾರತುರಾಯಿಗಳಿಂದಲೂ, ಗಂಧ ಪುಷ್ಪ ತಾಂಬೂಲಗಳಿಂದಲೂ ಸತ್ಕರಿಸಲ್ಪಟ್ಟರು. ಅಂದಿನಿಂದ ಮಿಲ್ಲಿನಲ್ಲಿ ಕೆಲಸವು ಪ್ರಾರಂಭವಾಗಿ ನಡೆಯಸಾಗಿತು.

ಇಂತು ಕೆಲಸವು ಪ್ರಾರಂಭವಾಯಿತಷ್ಟೆ! ಆದರೆ ಕಾರ್ಖಾನೆಯ ಕಾರ್ಯವನ್ನು ಸಮರ್ಪಕವಾಗಿ ನಿರ್ವಹಿಸುವುದು ಸುಲಭ ಸಾಧ್ಯವಾಗಿರಲಿಲ್ಲ. ಮಧ್ಯದಲ್ಲಿ ಅನೇಕ ತೊಂದರೆಗಳೂ ಉಂಟಾದುವು. ಆದರೂ ಕಾರ್ಖಾನೆಯ ಕೆಲಸಗಾರರೆಲ್ಲರೂ ತಮ್ಮ ಯಜಮಾನರಲ್ಲಿ ಇಟ್ಟುಕೊಂಡಿದ್ದ ನಂಬಿಕೆ ಗೌರವ ಭಾವಗಳೇ ಕಾರ್ಖಾನೆಗೆ ದೊಡ್ಡ ಆಸ್ತಿ ಎಂಬಂತಿದ್ದು ಪರ್ವತದಂತೆ ತೋರಿದ ಕಷ್ಟಗಳು ಮಂಜಿನ ರಾಶಿಯಂತೆ ಕರಗಿ ಹೋಗುತ್ತಿದ್ದುದರಿಂದ ದಿನ ದಿನಕ್ಕೆ ಕೆಲಸವು ಸುಲಲಿತವಾಗಿ ಸಾಗತೊಡಗಿತು. ಹಿಂದೆ ಜಿ. ಐ. ಪಿ. ರೈಲ್ವೇ ಕಂಪೆನಿಯ ಅಸಿಸ್ಟೆಂಟ್ ಗುಡ್ಸ್ ಟ್ರಾಫಿಕ್ ಮ್ಯಾನೇಜರಾಗಿದ್ದ ಮಿ|| (ತರುವಾಯ ಸರ್) ಬೆಜೊನ್‌ಜೀ ದಾದಾಭಾಯ್‌ಯವರನ್ನು ಕಾರ್ಖಾನೆಯ

ಮ್ಯಾನೇಜರ್ ಕೇಸಕ್ಕೆ ಒದಗಿಸಿಕೊಂಡುದರಲ್ಲಿ ಮಿ|| ಜೇಮ್ಸ್‌ನ್ಯೆಟ್ಟ್ರೀಯುವರು ನಿಜವಾಗಿ ಅದೃಷ್ಟಶಾಲಿಗಳೆಂದು ಹೇಳಬೇಕು. ತಾತಾಯುವರ 'ಎಂಪ್ರೆಸ್ ಮಿಲ್ಲು' ಪಡೆದ ಹೆಸರುವಾಸಿ, ಬಹು ಶೀಘ್ರವಾಗಿ ಕೈಗೂಡಿ ಬಂದ ಅದರ ಏಳಿಗೆ, ಅದಕ್ಕುಂಟಾಗುತ್ತಿದ್ದ ಅಪಾರ ಲಾಭ, ಅಲ್ಲಿಯ ನೌಕರರರಲ್ಲಿದ್ದ ಸಂತುಷ್ಟಿ—ಸಮಾಧಾನಗಳಿಗೆಲ್ಲಾ ಸರ್ ಬೆಜೊರ್ಜಿಯುವರ ಶಕ್ತಿ—ಸಾಮರ್ಥ್ಯ, ದಯ—ಧರ್ಮಗುಣ, ಪ್ರೀತಿ—ಶಾಂತತೆಗಳೇ ಮುಖ್ಯ ಕಾರಣಗಳೆನ್ನಬಹುದು

ಅಲ್ಲದೆ ಇತರ ಯಾವ ಕಾರ್ಖಾನೆಗೂ ಲಭ್ಯವಾಗದೆ, ಎಂಪ್ರೆಸ್‌ಮಿಲ್ಲಿಗೆ ಮಾತ್ರ ಸಿದ್ಧಿಸಿದ ಜಯ ಅಭಿವೃದ್ಧಿಗಳಿಗೆ ತಾತಾಯುವರಿಗಿದ್ದ ಮುಖ್ಯವಾದ ಎರಡು ಸುಗುಣಗಳೇ ಕಾರಣವೆಂದರೂ ತಪ್ಪಾಗಲಿಕ್ಕಿಲ್ಲ. ಒಂದನೆಯದು ಅವರ ಪೌರುಷ—ಎರಡನೆಯದು ಎಂತಹ ಕಷ್ಟನಷ್ಟಗಳಿಗೂ ಅಂಜದೆ ಹಿಡಿದ ಕಾರ್ಯಸಾಧನೆಯಲ್ಲಿ ದೃಢಮನಸ್ಸಿನಿಂದ ಮುಂದರಿಸುತ್ತಿದ್ದ ಅವರ ದೀರ್ಘಪ್ರಯತ್ನ. ಪ್ರಾರಂಭದಲ್ಲಿ ಮಹಾ ಕಾರ್ಯಸಾಧಕರಲ್ಲಿ ಮುಖ್ಯವಾಗಿರಬೇಕಾದ ಈ ಎರಡು ಸದ್ಗುಣಗಳ ದಿವ್ಯಾದರ್ಶವನ್ನೇ ಕಣ್ಣೆದುರಿನಲ್ಲಿಟ್ಟುಕೊಂಡು ಅವರು ಅನುಸರಿಸುತ್ತಾ ಬಂದರು. 'ಕಷ್ಟಪಡದೆ ಸುಖವು ದೊರೆಯದೆ'ಂಬುದನ್ನು ಅವರು ಚೆನ್ನಾಗಿ ತಿಳಿದಿದ್ದರಾದುದರಿಂದ ಯಾವ ಕಾರ್ಯ ಮಾಡಬೇಕಾದುದು ಆವಶ್ಯಕವೆಂದು ತೋರುವುದೋ ಅದರ ಸಾಧನೆಗಾಗಿ ಮಾಡಬಹುದಾದ ಸಕಲ ಪ್ರಯತ್ನಗಳನ್ನೂ ಸಂಪೂರ್ಣ ಶ್ರದ್ಧೆಯಿಂದ ಮಾಡಲು ಹಿಂಜರಿಯುತ್ತಿರಲಿಲ್ಲ. ಆದುದರಿಂದ ಅವರಿಗೆ ಫಲವೂ ಹಾಗೆಯೇ ಲಭ್ಯವಾಗುತ್ತಿದ್ದಿತು. ಕೆಲವರು ಪಟ್ಟ ಶ್ರಮಕ್ಕೆ ಫಲವು ಒಂದೇ ದಿನದಲ್ಲಿ ಪ್ರಾಪ್ತವಾಗಬೇಕೆಂದು ಅಪೇಕ್ಷಿಸಿ, ಸಂಪತ್ತು ಮೇಘದಿಂದ ಸುರಿವ ಮಳೆಯಂತೆ ಒಂದೇ ದಿನದಲ್ಲಿ ಮೊತ್ತವಾಗಿ ಲಭ್ಯವಾಗಬೇಕೆಂದು ಬಯಸುತ್ತಾರೆ. ಅದು ತಪ್ಪು. ಅನೇಕ ವರ್ಷಕಾಲ ನಿದ್ರಾಹಾರಗಳ ಸುಖಸೌಲಭ್ಯಗಳನ್ನು ಲಕ್ಷಿಸದೆ ಶ್ರಮಪಟ್ಟರಲ್ಲದೆ ಕಾರ್ಯಜಯವು ಉಂಟಾಗದು. ಶ್ರೀ ತಾತಾಯುವರು ಒಂದು ಕೆಲಸದ ಸಾಧಕಬಾಧಕಗಳನ್ನು ಕುರಿತು ಚೆನ್ನಾಗಿ ಯೋಚಿಸಿದನಂತರ ಅದನ್ನು ಪ್ರಾರಂಭಿಸಿಬಿಟ್ಟರೆಂದರೆ, ಅದರಿಂದ ಪ್ರಾಪ್ತಿಸಬಹುದಾದ ಅಲ್ಪ ಸ್ವಲ್ಪ ತೊಂದರೆಗಳಿಗೆಲ್ಲಾ ಬೆದರಿ ಕೈಬಿಡದೆ ವಜ್ರಮುಷ್ಟಿಯಿಂದ

ಲೋ ಎಂಬಂತೆ, ಅದನ್ನು ಹಿಡಿದು ಕೊನೆಯವರೆಗೂ ಸಾಧಿಸುತ್ತಿದ್ದರು. ಅವರು ತಮ್ಮ ಕಾರ್ಯಸಿದ್ಧಿಗಾಗಿ ಮಾಡಿದ ಅನೇಕ ಪ್ರಯತ್ನಗಳಲ್ಲಿ ಕೆಲವು ಕಾರ್ಯಕಾರಿಗಳಾದುವು. ಮತ್ತೆ ಕೆಲವು ಫಲಿಸಲಿಲ್ಲ. ಆದರೆ ನಿಷ್ಫಲವಾದ ಆ ಪ್ರಯತ್ನಗಳಿಂದಲೂ, ಅನುಭವ ಬಂತೆಂದೂ, ಮುಂದಿನ ಕೆಲಸಗಳಲ್ಲಿ ಎಚ್ಚರದಿಂದ ನಡೆಯಲು ಕಲಿತೆನೆಂದೂ ಸಂತೋಷಪಡುತ್ತಿದ್ದರಲ್ಲದೆ, ಎಂದೂ ನಿರುತ್ಸಾಹಗೊಳ್ಳಲಿಲ್ಲ. ತಮ್ಮ ಕಾರ್ಖಾನೆಯಲ್ಲಿ ನಡೆವ ಕೆಲಸಕಾರ್ಯಗಳು ಹಿಂದೂಸ್ಥಾನದ ಎಲ್ಲಾ ಕಾರ್ಖಾನೆಗಳಿಗಿಂತಲೂ ಅತ್ಯುತ್ತಮ ಸ್ಥಿತಿಯಲ್ಲಿರಬೇಕೆಂಬುದು ಅವರ ಆಶಯವಾಗಿದ್ದು, ಅಂತೆಯೇ ಅವರ ದೃಢಪ್ರಯತ್ನ, ಸೂಕ್ಷ್ಮಮತಿಗಳಿಂದಲೂ, ಅವರು ಆಗಾಗ ನಿರ್ಮಿಸುತ್ತಿದ್ದ ಕೈಗಾರಿಕೆಯ ನವನವೀನ ವಿಧಾನಗಳಿಂದಲೂ, ಅವರ ಆಶಯವು ಸಂಪೂರ್ಣವಾಯಿತು. ಕ್ರಮಶಃ ಅವರ ಕಾರ್ಖಾನೆಯೇ ಅದ್ವಿತೀಯವಾದುವೆನ್ನಿಸಿಕೊಂಡಿತು. ಅವರ ಕಂಪೆನಿಯಲ್ಲಿದ್ದಷ್ಟು ಉತ್ಕೃಷ್ಟವಾದ ಯಂತ್ರಸಾಮಗ್ರಿಗಳು ಮತ್ತೆಲ್ಲೂ ಇರಲಿಲ್ಲ. ಸಾಮಾನುಗಳನ್ನು ಉತ್ತಮ ರೀತಿಯಿಂದ ಸಿದ್ಧಪಡಿಸುವಿಕೆಯಲ್ಲಿ ಮಾತ್ರವಲ್ಲ. ಅದನ್ನು ಉತ್ತಮ ರೀತಿಯಿಂದ ಶೀಘ್ರವಾಗಿ ವಿಕ್ರಯಿಸತಕ್ಕ ವಿಚಾರದಲ್ಲೂ ಶ್ರೀ ತಾತಾಯವರು ನಿರ್ಲಕ್ಷ್ಯಭಾವವನ್ನು ವಹಿಸಲಿಲ್ಲ. ಮಾರಿಗೆಯ ಸ್ಥಳಗಳಿಗೆ ಸಾಮಾನುಗಳನ್ನು ಸುಲಭ ವೆಚ್ಚದಿಂದ ಶೀಘ್ರವಾಗಿ ಕಳುಹಿಸುವ ಉಪಾಯವಾವುದೆಂದೂ ಅವರು ಅಹರ್ನಿಸಿ ಯೋಚಿಸುತ್ತಿದ್ದರು. ಹತ್ತಿಯ ಬೆಳೆ—ಅದನ್ನು ಕಾರ್ಖಾನೆಗೆ ಒದಗಿಸುವಿಕೆ ಮುಂತಾದ ಕೆಲಸಗಳಿಂದ ಪ್ರಾರಂಭಿಸಿ, ಬಟ್ಟೆಯ ತಯಾರಿ ಅದನ್ನು ಮಾರಾಟವಾಗುವ ಸ್ಥಳಕ್ಕೆ ಒದಗಿಸುವ ಪ್ರಯತ್ನದವರೆಗಿನ ಕೆಲಸಗಳೆಲ್ಲವೂ ಒಂದು ಸರಪಣಿಯಲ್ಲಿನ ಕೊಂಡಿಗಳಂತೆ ಒಂದೊಂದಾಗಿ ಹೊಂದಿಕೊಂಡು ಬಲಪಟ್ಟು ಕೆಲಸ ನಡೆದರಲ್ಲದೆ, ಸಂಪೂರ್ಣ ಜಯವು ಪ್ರಾಪ್ತಿಯಾಗದೆಂಬುದು ಅವರಿಗೆ ಚೆನ್ನಾಗಿ ತಿಳಿದಿದ್ದು, ಅದಕ್ಕಾಗಿ ಅವರು ಸಾಧ್ಯವಿದ್ದ ಎಲ್ಲಾ ಕೆಲಸಗಳನ್ನೂ ಮಾಡಿದರು. ಅವರು ಅಷ್ಟು ಎಚ್ಚರದಿಂದ ನಡೆದರೂ ಪ್ರಾರಂಭದ ಹತ್ತುಹದಿನೈದು ವರ್ಷ ಕಾಲ ಅತಿಶಯ ಶ್ರಮೆಯಾಗದಿರಲಿಲ್ಲ. ಆದರೆ ಅವರ ನೌಕರರೂ ಇತರ ಸಹಾಯಕರೂ, ನಂಬಿಗಸ್ತರೂ ಚತುರರೂ ಆಗಿದ್ದುದರಿಂದ ಅವರಿಗೆ ಅಷ್ಟು ನಷ್ಟವುಂಟಾಗಲಿಲ್ಲ.

ಅವರು ಪರದೇಶ ಪ್ರಯಾಣದಿಂದ ಒಂದೊಂದು ಸಾರಿ ಹಿಂದಿರುಗಿ ಬಂದಾಗಲೂ, ಅಲ್ಲಿಯ ಕಾರ್ಖಾನೆಗಳ ಸಂಬಂಧವಾದ ನೂರಾರು ವಿಚಾರಗಳನ್ನು ತಿಳಿದುಕೊಂಡು ಬರುತ್ತಿದ್ದರು. ಅಲ್ಲಿ ಒಂದೊಂದು ಕಾರ್ಖಾನೆಯನ್ನು ಸಂದರ್ಶಿಸಿದಾಗಲೂ ಒಂದೊಂದು ವಿಚಾರವನ್ನು ಕಣ್ಣುಬಿಟ್ಟು ನೋಡಿ—ಚೆನ್ನಾಗಿ ವಿಚಾರಮಾಡಿ, ಪ್ರತಿ ಸಣ್ಣ ಸಂಗತಿಯನ್ನೂ ಶ್ರದ್ಧೆಯಿಂದ ಗ್ರಹಿಸುತ್ತಿದ್ದರು. ಜಪಾನ್ ದೇಶಕ್ಕೆ ಹೋದಾಗಲೂ ಹಾಗೆಯೇ! ತಮ್ಮ ಮುಖ್ಯ ಉದ್ಯೋಗವಾದ ಹತ್ತಿಯ ನೂಲುವಿಕೆ ಮತ್ತು ನೇಯ್ಗೆ ಮಾತ್ರವಲ್ಲ. ವ್ಯವಸಾಯ, ಕಲ್ಲಿದ್ದಲ್ಲು, ಗಣಿಗಳ ಸಂಬಂಧವಾದ ಕೆಲಸಕಾರ್ಯಗಳು ಮುಂತಾದ ಅನೇಕ ವಿಚಾರಗಳಲ್ಲಿ ಅನುಭವಗೊಂಡರು. ಪ್ರಾರಂಭದಲ್ಲಿ ಕಷ್ಟಗಳೆಂದು ತೋರಿದುವುಗಳೆಲ್ಲವೂ ಬರುತ್ತಾ ಬರುತ್ತಾ ಸುಲಭವಾಗತೊಡಗಿದುವು ಪ್ರಾರಂಭಕ್ಕೆ ಕಬ್ಬಿಣದ ಸರಪಣಿಯಂತೆ ಭಾರವಾಗಿ ತೋರಿದ ಕಾರ್ಯಗಳೆಲ್ಲಾ ಕೊನೆಕೊನೆಗೆ ಹೂವಿನ ಸರವನ್ನೆತ್ತಿದಂತೆ ಜಯಪ್ರದವಾಗತೊಡಗಿದುವು.

ಮ್ಯಾನೇಜರಾಗಿದ್ದ ಸರ್ ಬೆಜೋನ್‌ಜಿಯವರ ಆಡಳಿತದಿಂದ ಕಾರ್ಖಾನೆಯ ಸಂಪತ್ತು, ವರ್ಷವರ್ಷಕ್ಕೆ ಹೆಚ್ಚುತ್ತಾ ಹೋಯಿತು. ಕಂಪೆನಿಯ ಷೇರುದಾರರಿಗೆ ಮೂಲದ್ರವ್ಯಕ್ಕಿಂತಲೂ ಲಾಭ ದ್ರವ್ಯವೇ ಅಧಿಕವಾಗಿ ಲಭ್ಯವಾಗುತ್ತಿತ್ತು. ದಿನದಿನಕ್ಕೆ ಕಂಪೆನಿಯ ವಿಷಯದಲ್ಲಿ ಷೇರುದಾರರ ಮತ್ತು ಪ್ರಜೆಗಳ ನಂಬಿಕೆಯೂ ಸ್ಥಿರಗೊಳ್ಳತೊಡಗಿತು. ಆದರೆ, ತಾತಾಯವರು, ಕಂಪೆನಿಯ ಕೆಲಸಕಾರ್ಯಗಳೆಲ್ಲವೂ ತಮ್ಮೊಬ್ಬರ ಬುದ್ಧಿ ಕುಶಲತೆ—ಅಥವ ಅದೃಷ್ಟ—ಅಥವ ಸ್ಥಿರಪ್ರಯತ್ನಗಳಿಂದ ಮಾತ್ರವೇ ಲಭ್ಯವಾದುವೆಂದು ತಿಳಿದು ಗರ್ವಪಡುವಂತಹ ಸ್ವಾರ್ಥಿಗಳಲ್ಲ. ಕಾರ್ಖಾನೆಯ ಜಯಸಂಪಾದನೆಗೆ ಕೆಲಸಗಾರರ ಪರಿಶ್ರಮವೇ ಮುಖ್ಯವೆಂಬುದು ಅವರ ಲಕ್ಷ್ಯಕ್ಕೆ ಬಾರದಿರಲಿಲ್ಲ. ಆದುದರಿಂದ ಅವರ ಸುಖಸಂತೋಷ ಸೌಲಭ್ಯಗಳನ್ನು ಹೆಚ್ಚಿಸುವಿಕೆಯೇ—ಅವರನ್ನು ಅತೃಪ್ತಿಗೊಳ್ಳದಂತೆ ಇಟ್ಟುಕೊಂಡಿರುವಿಕೆಯೇ—ಅವರಿಗೆ ಬೇಕಾದ ಅನುಕೂಲತೆಗಳನ್ನೆಲ್ಲ ಒದಗಿಸಿಕೊಡುವಿಕೆಯೇ, ಮುಖ್ಯ ಕರ್ತವ್ಯವೆಂದು ಎಣಿಸಿದರು. ಕೆಲಸಗಾರರಲ್ಲಿ ಯಾರು ಕ್ರಮವಾಗಿಯೂ ಹೊತ್ತು ಮೀರದಯೂ ಕಾರ್ಖಾನೆಗೆ ಬರುತ್ತಿದ್ದರೋ ಅವರಿಗೆ ಬಹುಮಾನಗಳನ್ನು ಕೊಡುತ್ತಿ

ದ್ದರು ಇದರಿಂದ ನೌಕರರಲ್ಲಿ ಪೋಟಾಪೋಟಿಯೂ ಕೆಲಸದಲ್ಲಿ ಹೆಚ್ಚು ಶ್ರದ್ಧೆ ಯೂ ಉಂಟಾಗಲವಕಾಶವಾಯಿತು. ಅಲ್ಲದೆ ಪ್ರತಿವರ್ಷವೂ 'ಬೋನಸ್' ಎಂಬ ನಾಮಧೇಯದಿಂದ ಉಚಿತ ದ್ರವ್ಯವನ್ನೂ ಅವರಲ್ಲಿ ಹಂಚುತ್ತಿದ್ದರು. ಅದಕ್ಕಾಗಿ ಒಂದು ದಿನವನ್ನೇರ್ಪಡಿಸಿ ಆ ದಿನ ಉತ್ಸವವನ್ನು ಜರುಗಿಸಿ, ಬಗೆ ಬಗೆಯ ವಿನೋದಗಳನ್ನು ಕಲ್ಪಿಸಿ ಅವರೆಲ್ಲರನ್ನೂ ಸಂತೋಷಗೊಳಿಸುವರು. ಆ ದಿನ ಕಾರ್ಖಾನೆಗೆ ಸಂಪೂರ್ಣವಾಗಿ ವಿರಾಮ ಕೊಡುತ್ತಿದ್ದರು. ಕಾರ್ಖಾ ನೆಯಲ್ಲಿ ಬಹು ದಿನಗಳವರೆಗೆ ನಂಬಿಕೆಯಿಂದ ಕೆಲಸ ಮಾಡಿದವರಿಗೆ ಅವರ ಮುಪ್ಪಿನಲ್ಲಿ ಯೋಗ್ಯ ಪ್ರತಿಫಲವನ್ನು ಕೊಡಲು ಸಹ ಏರ್ಪಡಿಸಿದರು. ಅಷ್ಟೇ ಅಲ್ಲ, ಕೆಲಸಗಾರರಿಗೆ ವಾಸಸ್ಥಳ, ನೀರೂ ಆಹಾರ ಪದಾರ್ಥಗಳೂ ಸುಲಭ ವಾಗಿ ದೊರೆವ ಅನುಕೂಲತೆ, ಮುಂತಾದುವುಗಳನ್ನೂ ನೌಕರರ ಮಕ್ಕಳಿಗೆ ವಿದ್ಯಾಭ್ಯಾಸಕ್ಕಾಗಿ ಪಾಠಶಾಲೆ, ಆಡುವುದಕ್ಕಾಗಿ ಸ್ಥಳ, ಆಸ್ಪತ್ರೆ, ವಾಚಕ ಶಾಲೆ, ಪುಸ್ತಕಭಂಡಾರ ಮುಂತಾದುವುಗಳನ್ನೂ ಒದಗಿಸಿಕೊಟ್ಟರು ಅವ ರನ್ನು ತಮ್ಮ ಸ್ವಂತ ಕುಟುಂಬಕ್ಕೆ ಸೇರಿದವರೋ ಎಂಬಂತೆ ಪ್ರೀತಿವಿಶ್ವಾಸಗ ಳಿಂದ ನೋಡಿಕೊಳ್ಳುತ್ತಿದ್ದರು

ಹತ್ತಿಯನ್ನು ನೂಲುವ ಮತ್ತು ನೇಯುವ ಕೈಗಾರಿಕೆಯನ್ನು ಕಲಿ ಯುವುದಕ್ಕಾಗಿ ತಮ್ಮಲ್ಲಿಗೆ ಬರುತ್ತಿದ್ದ ವಿದ್ಯಾವಂತರ ಪ್ರಯೋಜನಕ್ಕಾಗಿಯೂ ಶ್ರೀ ಟಾಟಾಯವರು ಕೆಲವು ಅನುಕೂಲತೆಗಳನ್ನು ಮಾಡಿಕೊಟ್ಟರು. ಅವರು ತಮ್ಮ ಕಾರ್ಖಾನೆಯಲ್ಲಿ ನೂಲುವ, ನೇಯುವ, ಬಣ್ಣ ಹಾಕುವ ಮುಂತಾದ ಆ ಕೈಗಾರಿಕೆಯ ವಿವಿಧ ಬಾಬುಗಳಲ್ಲಿ ಯಾವುದನ್ನು ಕಲಿಯಲಿಷ್ಟಪಟ್ಟರೆ ಅದನ್ನು ಮೂರು ವರ್ಷಕಾಲವಿದ್ದು ಕಲಿಯುತ್ತೇವೆಂದು ಅವರಿಂದ ಬರೆಯಿಸಿ ಕೊಂಡು, ಆ ಕಾಲದಲ್ಲಿ ಅವರ ಜೀವನಕ್ಕಾಗಿ ವಿದ್ಯಾರ್ಥಿ ವೇತನವನ್ನೂ ಕೊಡುತ್ತಿದ್ದರು. ಹಾಗೆ ಬರೆದು ಕೊಟ್ಟನಂತರ ಆ ಅವಧಿಯಲ್ಲಿ ಶ್ರದ್ಧೆಯಿಂದ ಲೂ, ನಂಬಿಕೆಯಿಂದಲೂ ನಡೆದುಕೊಂಡವರನ್ನು ಅವಧಿಯು ಮುಗಿದ ತರು ವಾಯ ಆವಶ್ಯಕವಿದ್ದರೆ ತಮ್ಮಲ್ಲೇ ಕೆಲಸಕ್ಕೂ ನಿಯಮಿಸಿಕೊಳ್ಳುತ್ತಿದ್ದರು.

'ದಿ ಎಂಪ್ರೆಸ್ ಮಿಲ್' ಎಂಬುದನ್ನಿಟ್ಟುಕೊಂಡು ಮೇಲ್ಕಂಡಂತೆ ಹತ್ತು ವರ್ಷಕಾಲ ಕೆಲಸ ಮಾಡುವ ವೇಳೆಗೆ, ಶ್ರೀ ಟಾಟಾಯವರು ಆ ಕೈಗಾರಿಕೆ ಯಲ್ಲಿ ಪ್ರಾವೀಣ್ಯತೆಯನ್ನು ಸಂಪಾದಿಸಿದರು. ಆ ವೇಳೆಗೆ ಎಂದರೆ ೧೮೮೫ರ

ಸುಮಾರಿಗೆ ಬೊಂಬಾಯಿಯಲ್ಲಿ ಅನೇಕ ಕಾರ್ಖಾನೆಗಳು ಏರ್ಪಾಟಾಗಿ ನಡೆಯುತ್ತಿದ್ದುವು. ಆದರೆ ಅವುಗಳಲ್ಲಿ ಎಲ್ಲವೂ ದಪ್ಪವಾದ ಒರಟು ಬಟ್ಟೆಯನ್ನೇ ತಯಾರಿಸುತ್ತಿದ್ದುದರಿಂದ ತಾತಾಯವರು ನಯವಾದ ಬಟ್ಟೆಗಳನ್ನು ತಯಾರಿಸುವುದು ಹೇಗೆಂದು ಯೋಚಿಸತೊಡಗಿದರು. ಹತ್ತಿಯು ಎಳೆಯು ಉದ್ದವಾಗಿದ್ದಷ್ಟೂ, ನೂಲು ತೆಳುವಾದರೂ ಕಡಿಯದಂತೆ ತಯಾರಾಗಲು ಅನುಕೂಲವಾಗುವುದೆಂಬುದು ಅವರ ಸೂಕ್ಷ್ಮಬುದ್ಧಿಗೆ ಹೊಳೆಯಿತು. ಅದನ್ನು ಕಾರ್ಯತಃ ಮಾಡಬೇಕೆಂದು ಅದಕ್ಕೆ ಬೇಕಾದ ಸಾಧನ ಸಾಮಗ್ರಿಗಳನ್ನೆಲ್ಲಾ ಒದಗಿಸಿಕೊಳ್ಳಲು ಸಂಕಲ್ಪಿಸಿ ಶ್ರೀ ತಾತಾಯವರು 'ವಿಕ್ಟೋರಿಯಾ ಗಾರ್ಡನ್ಸ್' ಎಂಬ ಸ್ಥಳದಲ್ಲಿ ವಿಸ್ತಾರವಾದ ಭೂಮಿಯನ್ನು ಕೊಂಡುಕೊಂಡರು. ಆ ವೇಳೆಗೆ ಸರಿಯಾಗಿ ಬೊಂಬಾಯಿಯಲ್ಲಿ ಮಹಾ ದೊಡ್ಡದೆನ್ನಿಸಿಕೊಂಡಿದ್ದ 'ಧರಂಸಿ' ಎಂಬ ಕಾರ್ಖಾನೆಯು ಮಾರಿಗೆಗೆ ಸಿದ್ಧವಾಯಿತು. ಹರಾಜಿನಲ್ಲಿ, ತಾತಾಯವರು ಅದನ್ನು ಹನ್ನೆರಡೂವರೆ ಲಕ್ಷ ರೂಪಾಯಿಗಳಿಗೆ ಕೂಗಿದರು. ದೈವಯೋಗದಿಂದ ಅದು ಅವರ ಕೊರಳಿಗೇ ಬಿತ್ತು. ಅದರ ಮಾಲೀಕರು ಅದನ್ನು ಮೊದಲು ಐವತ್ತು ಲಕ್ಷಕ್ಕೆ, ಕೊಂಡಿದ್ದಾರೆಂಬ ಸಂಗತಿಯು ತಿಳಿದಿದ್ದುದರಿಂದ ಪ್ರಾರಂಭದಲ್ಲಿ ಅದು ಬಹು ಲಾಭಕರವಾದ ವ್ಯಾಪಾರವೆಂಬ ಅಭಿಪ್ರಾಯವುಂಟಾಯಿತು ಆದರೆ ಕೆಲಸಕ್ಕೆ ಪ್ರಾರಂಭಿಸಲು, ಅದರ ಒಂದೊಂದು ಭಾಗವೂ ಲಡ್ಡಾಗಿ ಕೆಟ್ಟು ನಿರುಪಯೋಗವಾಗಿದ್ದಿತೆಂಬುದು ಅನುಭವಕ್ಕೆ ಬಂತು. ಅವುಗಳನ್ನು ಸರಿಪಡಿಸಿಕೊಂಡು, ಆ ಕಾರ್ಖಾನೆಯನ್ನು ಕೆಲಸಕ್ಕೆ ಅನುಕೂಲಪಡಿಸಿಕೊಳ್ಳುವ ವೇಳೆಗೆ ಹೊಸ ಕಾರ್ಖಾನೆಯನ್ನು ಕೊಂಡುದಕ್ಕಿಂತ ಹೆಚ್ಚು ಬೆಲೆಯೇ ತಗುಲಿತು. ಆದರೂ ತಾತಾಯವರು, ಸ್ವಲ್ಪವೂ ಧೈರ್ಯಗುಂದದೆ, ಅದರಿಂದ ಪ್ರಾಪ್ತವಾದ ಕಷ್ಟನಷ್ಟಗಳೆಲ್ಲಕ್ಕೂ ಬಹು ಧೈರ್ಯದಿಂದ ಎದೆಗೊಟ್ಟು ನಿಂತು, ಕೊನೆಗೂ ಅದರಿಂದ ತಮ್ಮ ಉದ್ದೇಶದಂತೆ ನಯವಾದ ಬಟ್ಟೆಗಳನ್ನು ತಯಾರಿಸಲು ಶಕ್ತರಾದರು. ಪ್ರಾರಂಭದಲ್ಲಿ ಅಷ್ಟು ಹೀನಸ್ಥಿತಿಯಲ್ಲಿದ್ದ ಆ 'ಸ್ವದೇಶೀ ಮಿಲ್'' (ಧರಂಸಿ ಮಿಲ್ಲಿನ ನೂತನ ನಾಮ) ನಿಂದ ತಯಾರಾದ ಬಟ್ಟೆಗಳು ಎಲ್ಲರಿಗೂ ಆಶ್ಚರ್ಯಜನಕವಾದುವು. ಅಷ್ಟೇ ಅಲ್ಲದೆ, ಕಾರ್ಖಾನೆಯನ್ನು ಕೊಂಡಾಗ ಅದು ಶುದ್ಧ ನಿಷ್ಪ್ರಯೋಜಕವಾದುದೆಂದೂ ಆ ನಷ್ಟದಿಂದ ತಾತಾಯವರ ಸಮಸ್ತ ಕಾರ್ಯಸಾಮರ್ಥ್ಯವೂ

ಉಡುಗಿ ಹೋಗುವುದೆಂದೂ ಎಣಿಸಿದ್ದ ಇತರ ಕಂಪೆನಿಗಳವರು, ಅದೇ ಕಾರ್ಖಾನೆಯನ್ನೇ ತಮ್ಮೆಲ್ಲರ ಕಾರ್ಖಾನೆಗಳಲ್ಲಿ ತಯಾರಾದ ಬಟ್ಟೆಗಳಿಗಿಂತಲೂ, ನಯವಾದ ಮತ್ತು ಶ್ರೇಷ್ಠವಾದ ಬಟ್ಟೆಗಳನ್ನು ಸೃಷ್ಟಿಸಲು ಯೋಗ್ಯವಾದುದನ್ನಾಗಿ ರೂಪಾಂತರಗೊಳಿಸಿದ ಶ್ರೀ ತಾತಾಯವರ ಸಹನೆ, ಮನೋದಾರ್ಢ್ಯ, ದೃಢಪ್ರಯತ್ನ ಮುಂತಾದುವುಗಳನ್ನು ಕಂಡು ಆಶ್ಚರ್ಯಪಡತೊಡಗಿದರು. ಹೀಗೆ ನಮ್ಮ ಕಥಾನಾಯಕರು, ಅಸಾಧ್ಯವೆಂಬುದನ್ನೂ ಸಾಧ್ಯಗೊಳ್ಳುವಂತಹ ಅದ್ವಿತೀಯ ಸಾಮರ್ಥ್ಯವನ್ನೂ ಕರ್ತೃತ್ವ ಶಕ್ತಿಯನ್ನೂ ಪಡೆದಿದ್ದುದರಿಂದಲೇ, ಅವರ ಸೌಭಾಗ್ಯಾತಿಶಯವೂ ದಿನದಿನಕ್ಕೂ ಅಭಿವೃದ್ಧಿಗೊಳ್ಳುತ್ತಿದ್ದಿತು.



## ಅಧ್ಯಾಯ ೪ "ದೇಶಾಭಿವೃದ್ಧಿಕರ ಇತರ ಕೈಗಾರಿಕೆಗಳು"

ಶ್ರೀ ತಾತಾಯವರು ಜಪಾನ್ ದೇಶವನ್ನು ಸಂದರ್ಶಿಸಿದ್ದಾಗ ಅಲ್ಲಿಯ ಕಾರ್ಖಾನೆಗಳಲ್ಲಿ ವಿದ್ಯುಚ್ಛಕ್ತಿಯ ಬೆಳಕಿನ ಉಪಯೋಗದಿಂದ ಕೆಲಸ ನಡೆಯುತ್ತಿದ್ದುದನ್ನು ನೋಡಿದ್ದರಾದುದರಿಂದ ಅದನ್ನು ತಮ್ಮಲ್ಲೂ ಉಪಯೋಗಕ್ಕೆ ತರಲು ಪ್ರಯತ್ನಿಸಬಹುದೇ ಎಂದು ಯೋಚಿಸಿದರು. ಅಂತೆಯೇ ತಮ್ಮ ಸ್ವದೇಶೀ ಮಿಲ್ಲಿನಲ್ಲಿ ವಿದ್ಯುಚ್ಛಕ್ತಿಯ ಬೆಳಕಿನಲ್ಲಿ ರಾತ್ರಿಯ ಹೊತ್ತು ಕೆಲಸ ನಡೆಯಲು ಅನುಕೂಲ ಪಡಿಸಿದರು ಆದರೆ ಅದು ಅಷ್ಟು ಲಾಭಕರವಾಗದಿದ್ದರೂ, ನಮ್ಮ ದೇಶದಲ್ಲಿ ಇತರ ಆಧುನಿಕ ಕೈಗಾರಿಕೆಗಳನ್ನು ಪ್ರಾರಂಭಿಸಿದ ಕೀರ್ತಿಯು ನಮ್ಮ ಕಥಾನಾಯಕರಿಗೆ ಹೇಗೆ ಸೇರಬೇಕಾಗಿದೆಯೋ ಹಾಗಯೇ ವಿದ್ಯುಚ್ಛಕ್ತಿಯ ಕೈಗಾರಿಕೆಯನ್ನು ಪ್ರಾರಂಭಿಸಿ ನಡೆಯಿಸಿದ ಕೀರ್ತಿಯೂ ಅವರಿಗೇ ಸೇರತಕ್ಕುದಿದೆ

ನಯವಾದ ಬಟ್ಟೆಗಳನ್ನು ತಯಾರಿಸಲು ತೆಳುವಾದ ನೂಲನ್ನು ನೂಲಬೇಕಾದುದೂ ಅದಕ್ಕಾಗಿ ಉದ್ದ ಎಳೆಯ ಹತ್ತಿಯನ್ನು ಉಪಯೋಗಿಸಬೇಕಾದುದೂ ಆವಶ್ಯಕವಾಗಿತ್ತೆಂಬ ವಿಚಾರವು ಈ ಹಿಂದೆಯೇ ಶ್ರೀ ತಾತಾಯವರಿಗೆ ತಿಳಿದಿದ್ದಿತಲ್ಲವೇ ಆದರೆ ನಮ್ಮ ದೇಶದಲ್ಲಿ ಅವರಿಗೆ ರೂಢಿಯಲ್ಲಿದ್ದ ಹತ್ತಿಯ ವ್ಯವಸಾಯ ಪದ್ಧತಿಯಿಂದ ಅಂತಹ ಉದ್ದ ಎಳೆಯ ಹತ್ತಿಯನ್ನು ಬೆಳೆಯು

ವುದು ಸಾಧ್ಯವಿಲ್ಲವೆಂಬುದನ್ನು ತಿಳಿದು ಅದಕ್ಕಾಗಿ ಈಜಿಪ್ಟ್ ದೇಶದಿಂದ ನೈಲ್ ನದೀ ಪ್ರಾಂತದಲ್ಲಿ ರೈತರು ಹತ್ತಿ ಬೆಳೆಯುವ ಪದ್ಧತಿಯನ್ನು ವಿವರಿಸಿ ಟಾಟಾಯವರು ಒಂದು ಚಿಕ್ಕ ಪುಸ್ತಕವನ್ನು ಪ್ರಚುರಪಡಿಸಿದರು. ಅಲ್ಲದೆ ಹತ್ತಿಯ ಬೆಳೆಯಲ್ಲಿ ಸುಧಾರಣೆಯನ್ನು ಕಲ್ಪಿಸಬೇಕೆಂದು ಹಿಂದೂಸ್ಥಾನ ಸರಕಾರದವರನ್ನು ಅನೇಕ ಸಾರಿ ಒತ್ತಾಯ ಪಡಿಸಿದರು ಎಂತೂ ಲಾರ್ಡ್ ಕರ್ಜನರ ಕಾಲದಲ್ಲಿ ಪ್ರಾರಂಭವಾಗಿ ತರುವಾಯ ಊರ್ಜಿತವಾಗುತ್ತಾ ಬಂದ ವ್ಯವಸಾಯ ಇಲಾಖೆಗೂ, ಸಿಂಧೂ ದೇಶದಲ್ಲಿ 'ಸಿಂಡ್ ಅಮೆರಿಕನ್ ಕಾಟನ್' ಎಂಬ ನಾಮಧೇಯದಿಂದ ಬೆಳೆಯಲ್ಪಡುವ ಹತ್ತಿಯ ನೂತನ ವ್ಯವಸಾಯ ವಿಧಾನಕ್ಕೂ, ಶ್ರೀ ಟಾಟಾಯವರ ಪರಿಶ್ರಮವೇ ಮೂಲಕಾರಣವೆನ್ನಬಹುದು. ತರುವಾಯ ಸರಕಾರ ವ್ಯವಸಾಯ ಕಾರ್ಯಕ್ಷೇತ್ರಗಳಲ್ಲಿ ಬೆಳೆದ ಹತ್ತಿಯನ್ನು ಸತ್ವಪರೀಕ್ಷೆಗಾಗಿ ಸ್ವದೇಶೀ ಮಿಲ್ಲಿಗೆ ಕಳುಹಿಸುವುದೇ ಪದ್ಧತಿಯಾಯಿತು. ಹೀಗೆ ಸ್ವದೇಶೀ ಮಿಲ್ಲು ಒಂದು ಬಗೆಯಿಂದ ಬ್ರಿಟಿಷ್ ಸರ್ಕಾರದ ಗಮನಕ್ಕೆ ಒಂದು ಮೆಚ್ಚಿಗೆಯನ್ನು ಪಡೆಯಲೂ ಅರ್ಹವಾಯಿತು.

ತರುವಾಯ ನಮ್ಮ ಕಥಾನಾಯಕರ ಗಮನವು, ಬೊಂಬಾಯಿಯಲ್ಲಿ ತಯಾರಾಗಿ ಜಪಾನ್ ದೇಶಕ್ಕೆ ವಿಶೇಷವಾಗಿ ಸಾಗುತ್ತಿದ್ದ ನೂಲಿನ ಮೇಲೆ ಕೊಡಬೇಕಾದ ಅಪಾರವಾದ ಹಡಗಿನ ಕೂಲಿಯನ್ನು ಯಾವುದಾದರೊಂದು ಉಪಾಯದಿಂದ ಕಡಮೆ ಮಾಡಿ ತಮ್ಮ ದೇಶೀಯ ವರ್ತಕರಿಗೆ ಉಪಕಾರ ಮಾಡಿ ವ್ಯಾಪಾರವನ್ನು ವೃದ್ಧಿಗೊಳಿಸುವುದು ಸಾಧ್ಯವೇ ಎಂಬ ವಿಚಾರದಲ್ಲಿ ತೊಡಗಿತು ಮೊದಲಿನಿಂದಲೂ ಆ ಕೆಲಸವನ್ನು ಮಾಡುತ್ತಿದ್ದ ಜೈನಾದ ಮತ್ತು ಇಂಗ್ಲೆಂಡಿನ ಹಡಗಿನ ಕಂಪೆನಿಗಳು ಮಿತಿಯಿಲ್ಲದೆ ಎಂದರೆ, ಒಂದು ಕ್ಯೂಬಿಕ್ (ಘನ) ಟನ್ನಿಗೆ ೧೩ ರೂ ಗಳಿಂದ ೧೯ ರೂ. ಗಳವರೆಗೆ ಬಾಡಿಗೆಯ ದರವನ್ನು ಹೇರುತ್ತಿದ್ದುವು ಅದನ್ನು ತಪ್ಪಿಸುವ ಉದ್ದೇಶದಿಂದ ಟಾಟಾಯವರು ಜಪಾನ್ ದೇಶಕ್ಕೆ ಹೋದಾಗ್ಗೆ, ಒಂದು ಕಂಪೆನಿಯೊಂದಿಗೆ ಒಪ್ಪಂದ ಮಾಡಿಕೊಂಡು, ಬೊಂಬಾಯಿಯ ವರ್ತಕರೆಲ್ಲರೂ ಒಂದು ಗೊತ್ತಾದ ಸುಲಭ ದರದಿಂದ ಆ ಕಂಪೆನಿಯ ಹಡಗುಗಳಲ್ಲೇ ತಮ್ಮ ನೂಲನ್ನು ಜಪಾನ್ ದೇಶಕ್ಕೆ ಸಾಗಿಸುವಂತೆ ಏರ್ಪಡಿಸಿದರು. ಈ ಸಂಚನ್ನು ತಿಳಿದ ಆ ಪರದೇಶೀಯ ಹಡಗಿನ ಸಂಘಗಳವರು, ಅವರ ಈ ನೂತನ ಉದ್ಯಮವನ್ನು ಭಂಗಗೊಳಿಸ

ಬೇಕೆಂದು ಮೇಲ್ಕಂಡ ಆ ಬಾಡಿಗೆಯ ದರವನ್ನು ಅತ್ಯಂತ ಕಡಮೆ ಎಂದರೆ ಎರಡು—ಕೊನೆಗೆ ಒಂದು ರೂಪಾಯಿಗೆ ಇಳಿಸಿಬಿಟ್ಟರು. ಇದರಿಂದ ತಾತಾ ಯವರೊಂದಿಗೆ ಒಪ್ಪಂದ ಮಾಡಿಕೊಂಡಿದ್ದ ವರ್ತಕರಲ್ಲಿ ಒಬ್ಬೊಬ್ಬರಾಗಿ ಆಕರ್ಷಿಸಲ್ಪಟ್ಟು, ತಮ್ಮ ಮಾತಿಗೆ ತಪ್ಪಿ, ಅವರು ಏರ್ಪಡಿಸಿದ್ದ ಮಾರ್ಗ ವನ್ನು ಬಿಟ್ಟು ಪುನಃ ಹಿಂದಿನ ಆ ಕಂಪೆನಿಗಳವರನ್ನೇ ಅನುಸರಿಸಿದರು. ತಾತಾ ಯವರು ತಮ್ಮ ದೇಶೀಯರು ತೋರಿಸಿದ ಈ ವಿಶ್ವಾಸ ಘಾತುಕತನಕ್ಕಾಗಿ ಬೇಸತ್ತುಕೊಂಡರಾದರೂ ಬದರದೆ, ತಾವು ಒಪ್ಪಿಕೊಂಡಿದ್ದ ಎರಡು ವರ್ಷ ಕಾಲ, ಅದನ್ನು ನಡೆಯಿಸಿ ಅದರಿಂದುಂಟಾದ ಕಷ್ಟನಷ್ಟಗಳೆಲ್ಲವನ್ನೂ ಧೈರ್ಯ ದಿಂದ ಸಹಿಸಿದರು. ಈ ನಷ್ಟದ ಕಥೆಯನ್ನು ಕುರಿತು ಯಾರಾದರೂ ಮಾತ ನಾಡಿದರೆ, ಅವರು—"ಏನಾದರಾಗಲಿ, ಆ ಪರದೇಶೀಯ ಕಂಪೆನಿಗಳವರಿಗೆ, ಭಾರತೀಯರಾದ ನಾವು ಒಮ್ಮನದಿಂದ ಒಟ್ಟಾದರೆ ಏನು ಕೆಲಸ ಮಾಡಬ ಹುದು—ಅವರ ಬಲವನ್ನು ಹೇಗೆ ತಗ್ಗಿಸಬಹುದು ಎಂಬುದರ ಪಾಠವನ್ನು ಇದರಿಂದ ಕಲಿಸಿದಂತಾಯಿತು. ನನಗೆ ಅಲ್ಪ ಸ್ವಲ್ಪ ನಷ್ಟವಾದರೂ ಚಿಂತೆ ಯಿಲ್ಲ" ಎಂದು ಉತ್ತರ ಕೊಡುತ್ತಿದ್ದರು. ಇದರಿಂದ ಶ್ರೀ ತಾತಾಯವರಲ್ಲಿ ಸ್ವದೇಶ—ಸ್ವದೇಶೀಯರು ಎಂಬ ಭಾವನೆಯೂ, ದೇಶಾಭಿಮಾನವೂ ಎಷ್ಟು ಮಟ್ಟಿಗೆ—ಎಷ್ಟು ಉತ್ಕೃಷ್ಟ ಸ್ಥಿತಿಯಿಂದ ನೆಲಗೊಂಡಿದ್ದುವು ಎಂಬುದನ್ನು ತಿಳಿಯಬಹುದು. ಅವರು ಕಾಲೇಜು ವಿದ್ಯಾಭ್ಯಾಸಮಾಡಿ ಪದವಿಗಳನ್ನು ಪಡೆದವರಲ್ಲವಾದರೂ, ದೀರ್ಘೋಪನ್ಯಾಸಗಳನ್ನು ಕೊಡಲು ಪಳಗಿರಲಿಲ್ಲ ವಾದರೂ, "ಕೆಲಸ—ಕೆಲಸ—ಕೆಲಸ, ಯಾವಾಗಲೂ ಕೆಲಸ" ಎಂದು, ಸ್ವತಃ ಮೌನವಾಗಿ ಮಾಡಿದ ತಮ್ಮ ಜೀವಿತ ಕಾರ್ಯದಿಂದಲೇ ಅನೇಕ ಉಪ ನ್ಯಾಸಗಳಿಂದಲೂ—ಬೋಧನೆಗಳಿಂದಲೂ ಕಲಿಸುವುದಕ್ಕಿಂತ ಹೆಚ್ಚು ಪಾಠ ವನ್ನು ಕಲಿಸಿದರು. ಅವರ ಅಭಿವೃದ್ಧಿಗಳಿಗೆಲ್ಲಾ, ಮೌನವಾದ ಆದರೆ ಅವಿಚ್ಛಿನ್ನವಾದ ಈ ಕಾರ್ಯತತ್ಪರತೆಯೇ ಮೂಲಕಾರಣವು. ಈ ಮೂಲ ಸೂತ್ರವನ್ನು ಅನುಸರಿಸಿ ಅವರು, ಇತರ ಹತ್ತು ಮಂದಿ ಬಾಯಾಳಿಗಳೂ—ವಚನಶೂರರೂ ಮಾಡಲಾರದ ಕಾರ್ಯವನ್ನೂ ನೆರವೇರಿಸಿ ಕೃತಕೃತ್ಯರಾದರು.

ನಮ್ಮ ಕಥಾನಾಯಕರ ಬುದ್ಧಿ ಕುಶಲತೆಯು ಕೇವಲ ಅರಳೆ—ಅದ ರಿಂದ ನೂಲು ತಯಾರಿಸುವುದು. ಬಟ್ಟೆ ನೇಯುವುದು—ಅದನ್ನು ಮಾರು

ವುದು—ಹಣವನ್ನು ಗಳಿಸುವುದು ಇಷ್ಟರಲ್ಲಿ ಮಾತ್ರ ವಿನಿಯೋಗವಾಯಿತೆನ್ನುವಂತಿಲ್ಲ. ಅವರ ಮನಸ್ಸಿನಲ್ಲಿ ಭಾರತದೇಶೀಯ ಉದ್ಧಾರಕಗಳಾದ ಅನೇಕ ಮಹದ ದ್ದೇಶಗಳಿದ್ದುವು. ನಮ್ಮ ದೇಶೀಯರ ಹಸ್ತಕುಶಲತೆಯೊಂದಿಗೆ ನಮ್ಮವರ ಮೇಧಶ್ಶಕ್ತಿಯೂ ಸಹಾಯಕವಾಗದಿದ್ದರೆ, ನಾವು ಎಂದೆಂದಿಗೂ ಪರದೇಶಿಯರೆದುರಿಗೆ ಕೈಜೋಡಿಸಿಕೊಂಡು ನಿಂತಿರಬೇಕಾದ ಸ್ಥಿತಿಯು ತಪ್ಪದೆಂಬುವುದು ಅವರಿಗೆ ಗೋಚರಿಸದಿರಲಿಲ್ಲ. ಅದಕ್ಕಾಗಿ ನಮ್ಮಲ್ಲಿಯ ವಿಶ್ವವಿದ್ಯಾಲಯಗಳಲ್ಲಿ ಅಭ್ಯಸಿಸಿ ಪದವೀಧರರಾಗುವ—ಸ್ವಂತ ಖರ್ಚಿನಿಂದ ಪರದೇಶದಲ್ಲಿ ವಿದ್ಯಾಭ್ಯಾಸ ಮಾಡುವಷ್ಟು ಉಪಪನ್ನರಲ್ಲದ ತರುಣರನ್ನು ಪರದೇಶಗಳಿಗೆ ಕಳುಹಿಸಿ, 'ಇಂಡಿಯನ್ ಸಿವಿಲ್ ಸರ್ವಿಸ್' ಪರೀಕ್ಷೆಯಲ್ಲಾಗಲೀ ಅಥವಾ ಯಾವುದಾದರೊಂದು ಕುಶಲ ವಿದ್ಯೆಯಲ್ಲಾಗಲೀ ಪ್ರಾವೀಣ್ಯತೆಯನ್ನು ಪಡೆದು ಬರುವಂತೆ ಅನುಕೂಲ ಪಡಿಸಲು, ಒಂದು ನಿಧಿ ಅಥವಾ ಫಂಡನ್ನು ಏರ್ಪಡಿಸಬೇಕೆಂಬುದು ಅವರ ಮುಖ್ಯಾಶಯವಾಗಿದ್ದಿತು ಅದನ್ನು ಕಾರ್ಯಕಾರಿಯಾಗಿ ಮಾಡಲು, ೧೮೯೨ ನೆಯ ಸಂವತ್ಸರದಲ್ಲಿ ಒಂದು 'ಟ್ರಸ್ಟ್‌ಡೀಡ್' ಯಾನೆ ದಾನಪತ್ರವನ್ನು ಬರೆಯಿಸಿ, ಅದನ್ನು ಸರ್ಕಾರದಲ್ಲಿ ದಾಖಲ್ಮಾಡಿಸಿ ಅವರ ಒಪ್ಪಿಗೆಯನ್ನೂ ಪಡೆದುದಾಯಿತು. ಅದರ ನಿಬಂಧನೆಗಳನ್ನನುಸರಿಸಿ, ಮೊದಲ್ಮೊದಲು, ಪಾರ್ಶೀ ತರುಣರಿಗೆ ಮಾತ್ರ, ಅಂತಹ ಸಹಾಯವನ್ನೊದಗಿಸುವ ಉದ್ದೇಶವಿದ್ದಿತು. ಆದರೆ ೧೮೯೪—೯೫ ರಲ್ಲಿ ಅದನ್ನು ಭಾರತದೇಶದ ಯಾವ ವಿಶ್ವವಿದ್ಯಾಲಯದಲ್ಲಿ ಉತ್ತೀರ್ಣನಾದ ಯಾವ ಕುಲಸ್ಥನಾದ ಯೋಗ್ಯಪಾತ್ರನಿಗಾದರೂ ಕೊಡಬಹುದೆಂಬ ಉದಾರತೆಯು ತೋರಿಸಲ್ಪಟ್ಟಿತು ಹಾಗೆ ಸಹಾಯ ದ್ರವ್ಯವನ್ನು ಪಡೆದು ಸೀಮೆಗೆ ಹೋಗಿ, ಅಲ್ಲಿ, ನ್ಯಾಯವಾದಿತನ, ವೈದ್ಯ, ಕೈಗಾರಿಕೆ, ಯಂತ್ರ ನಿರ್ಮಾಣ ಕೌಶಲ್ಯ, ಶಿಲ್ಪಿ, ವ್ಯವಸಾಯ, ವಾಣಿಜ್ಯ ಮುಂತಾದ ತಮಗೆ ಇಷ್ಟವಾದ ಯಾವ ಕಲೆಯಲ್ಲಿ ಪ್ರವೀಣರಾಗಿ ಬಂದರೂ, ಇಲ್ಲಿ ಬಂದು ಸ್ವಯಂ ಸಂಪಾದನೆಗೆ ತೊಡಗಿದಾಗಿನಿಂದ ಅದನ್ನು ಬಡ್ಡಿಯೊಂದಿಗೆ, ತಿಂಗಳಿಗೆ ಸ್ವಲ್ಪ ಸ್ವಲ್ಪವಾಗಿ ತೀರಿಸಬೇಕೆಂಬ ನಿಬಂಧನೆಯಿದ್ದಿತು ಅಲ್ಲದೆ ಅವರು 'ಸೀಮೆ ಯಲ್ಲಿದ್ದಾಗ್ಗೆ, ತಮಗೆ ನಿಧಿಯಿಂದ ಕೊಟ್ಟ ದ್ರವ್ಯವನ್ನೂ, ಮತ್ತು ಪರದೇಶ ವಾಸದ ಅಮೌಲ್ಯ ಕಾಲವನ್ನೂ ವ್ಯರ್ಥಗೊಳಿಸದಂತೆ ಸತ್ಕಾಲಕ್ಷೇಪ ಮಾಡಿ

ಕೊಂಡಿರುವಂತೆ ಮೇಲ್ವಿಚಾರಣೆ ನೋಡಿಕೊಳ್ಳುವ ಒಂದು ಕಮಿಟಿಯೂ ಇದ್ದಿತು. ಇದರಿಂದ ಅನೇಕ ಮಂದಿ ಬಡ ವಿದ್ಯಾರ್ಥಿಗಳಿಗಿದ್ದ ಶಕ್ತಿ ಸಾಮರ್ಥ್ಯಗಳು ಪ್ರಕಾಶಿತವಾಗಲು ಸಹಾಯವಾಯಿತೆಂದು ಹೇಳಬೇಕಾದುದೇನು? ಈ ನಿಧಿಯಿಂದ ೧೯೧೫ ನೆಯ ಸಂವತ್ಸರದವರೆಗೆ ಒಟ್ಟು ೨೩ ಮಂದಿ ಪಾರ್ಶೀ ತರುಣರೂ, ೧೫ ಮಂದಿ ಇತರ ಮತಸ್ಥರೂ ಉತ್ತೀರ್ಣರಾಗಿ ಸ್ವದೇಶದ ಜ್ಞಾನಭಾಂಡಾರವನ್ನು ಅಭಿವೃದ್ಧಿಗೊಳಿಸಲು, ಹಿಂದಿರುಗಿದ್ದರು. ಈ ಸಂಖ್ಯೆಯು ಪ್ರತಿ ಸಂವತ್ಸರವೂ ಏರುತ್ತಿದೆಯೆಂಬುದನ್ನು ಕೇಳಿ, ದೇಶಾಭಿಮಾನಿಯಾದ ಯಾವನು ತಾನೇ ಆನಂದಿಸಲಾರನು!

ಮೇಲ್ಕಂಡ ವಿದ್ಯಾರ್ಥಿ ಸಹಾಯ ನಿಧಿಯಿಂದ ನಡೆಯಬೇಕಾದ ಕಾರ್ಯವು ಒಂದು ಸ್ಥಿರರೂಪವನ್ನು ಹೊಂದಿದ ಮೇಲೆ ನಮ್ಮ ಕಥಾನಾಯಕರ ಗಮನವು ಅತ್ಯಾವಶ್ಯಕವಾದ ಮತ್ತೊಂದು ವಿಚಾರಕ್ಕೆ ತಿರುಗಿತು. ಹಿಂದೂಸ್ಥಾನದಲ್ಲಿ ತಯಾರಾದ ಹತ್ತಿಯ ಬಟ್ಟೆಗಳ ಮೇಲೆ ಸರ್ಕಾರದವರು ಹೇರಿದ್ದ ತೆರಿಗೆಯು ದಿನದಿನಕ್ಕೆ ಏರುತ್ತಾ ಬಂದು, ೧೮೯೪ರ ವೇಳೆಗೆ ಸಹಿಸಲಸಾಧ್ಯವಾಗುವಂತಾಯಿತು ಇಂಗ್ಲೆಂಡು ದೇಶದಲ್ಲಿ ಮ್ಯಾಂಚೆಸ್ಟರ್ ನಗರವು ಹೇಗೋ ಹಿಂದೂಸ್ಥಾನದಲ್ಲಿ ಬೊಂಬಾಯಿಯೂ ಹಾಗೆಯೇ ಹತ್ತಿಯ ಕೈಗಾರಿಕೆಗೆ ಮುಖ್ಯ ಸ್ಥಳವಷ್ಟೆ! ಅಲ್ಲಿಯ ವರ್ತಕರು, ಮೇಲೆ ಮೇಲೆ ಅಧಿಕಾಧಿಕವಾಗಿ ತೆರಬೇಕಾಗಿ ಬಂದ ಈ ತೆರಿಗೆಯಿಂದ ಬಹು ಮಟ್ಟಿಗೆ ಪೀಡಿತರಾದರು. ಆ ತಮ್ಮ ಕಷ್ಟವನ್ನು ಸರ್ಕಾರಕ್ಕೆ ಪ್ರತ್ಯಕ್ಷ ತಿಳಿಸಿ, ಅದನ್ನು ಕಡಮೆ ಮಾಡಿಸಿಕೊಳ್ಳದಿದ್ದರೆ, ಮುಂದೆ ಆ ಕೈಗಾರಿಕೆಯನ್ನು ಲಾಭಕರವಾಗಿ ನಡೆಯಿಸುವುದು ಅಸಾಧ್ಯವೆಂಬುದು ಎಲ್ಲರ ಅನುಭವಕ್ಕೂ ಬಂದಿತು. ಆಗ ಬೊಂಬಾಯಿಯ, 'ಮಿಲ್ ಓನರ್ಸ್ ಅಸೋಸಿಯೇಷನ್' ಪರವಾಗಿ, ಶ್ರೀ ತಾತಾಯವರೂ, ಮತ್ತು ಶ್ರೀ ಎನ್. ಎನ್. ವಾಡಿಯಾಯವರೂ ತಮ್ಮ ಈ ಕೊರತೆಗಳನ್ನು ಸರಿಪಡಿಸಿಕೊಡಬೇಕೆಂದು ಇಂಡಿಯಾ ಸರ್ಕಾರಕ್ಕೆ ಮನವಿ ಮಾಡಿಕೊಳ್ಳಲು, ಕಳುಹಿಸಲ್ಪಟ್ಟರು. ಅವರು ವೈಸರಾಯಿಯವರ ಮಂತ್ರಿಮಂಡಲ (Council) ದ ಆರ್ಥಿಕ ಸಚಿವ (Financial Minister) ರೊಂದಿಗೆ ಆ ವಿಚಾರವನ್ನು ಯುಕ್ತಿಯುಕ್ತವಾಗಿ ವಿವರಿಸಿ ವಾದಿಸಿದರು. ಅಲ್ಲದೆ, ಈ ಮಧ್ಯೆ ಇಂಗ್ಲೆಂಡು ದೇಶವನ್ನು ಸಂದರ್ಶಿಸಿದ್ದಾಗ್ಗೆ, ಶ್ರೀ ತಾತಾಯವರು,

ಆಗ 'ಸ್ಟೇಟ್ ಸೆಕ್ರೆಟರಿ ಆಫ್ ಇಂಡಿಯಾ' ಪದವಿಯನ್ನು ವಹಿಸಿದ್ದ ಲಾರ್ಡ್ ಜಾರ್ಜ್ ಹ್ಯಾಮಿಲ್ಟನ್ ಎಂಬವರನ್ನೂ ಕಂಡು, ಆ ವಿಷಯವನ್ನು ಕುರಿತು ದೀರ್ಘವಾಗಿ ಸಂಭಾಷಿಸಿದರು. ಆದರೆ, ಹಾಗೆ ಹಿಂದೂಸ್ಥಾನದ ವರ್ತಕರಿಗೆ ರಿಯಾಯಿತಿ ತೋರಿಸುವುದರಿಂದ ತಮ್ಮ ದೇಶದ ಮ್ಯಾಂಚೆಸ್ಟರ್—ಲಿವರ್ ಪೂಲ್ ನಗರಗಳಲ್ಲಿ ತಯಾರಾಗುವ ಹತ್ತಿಯ ಬಟ್ಟೆಗೆ ಗಿರಾಕಿ ತಪ್ಪಬಹುದೆಂಬ ಅಂತರ್ಯ ಸ್ವಾರ್ಥತೆಯಿದ್ದುದರಿಂದ ಅವರು ಭಾರತದೇಶದ ಕಾರ್ಖಾನೆಗಳು ಬೇಕಾದಷ್ಟು ಲಾಭವನ್ನು ಪಡೆಯುತ್ತಿರುವುದರಿಂದ ಅವುಗಳ ಮೇಲೆ ಹಾಕಿರುವ ತೆರಿಗೆಯು ಭಾರವಾದುದಲ್ಲವೆಂದು ಸಮರ್ಥಿಸಿದರು ಆದರೂ ಅವರ ಅಪೇಕ್ಷೆಯಂತೆ, ನಮ್ಮ ಕಥಾನಾಯಕರು, ಮಿಲ್ಲುಗಳಿಂದ ಬರುವ ಉತ್ಪತ್ತಿಯು ಅತಿಶಯವೆನ್ನಿಸುವಷ್ಟಿದೆಯೇ ಎಂಬುದನ್ನು ಕಂಡುಕೊಳ್ಳಲಿಕ್ಕಾಗಿ ಎಲ್ಲಾ ಮಿಲ್ಲುಗಳಿಂದಲೂ ಲೆಕ್ಕವನ್ನು ತರಿಸಿಕೊಂಡು, ಒಂದು ಲೆಕ್ಕಗಳ ತಖ್ತೆ (Statistics) ಯನ್ನು ತಯಾರಿಸಿ, ಸ್ಟೇಟ್ ಸೆಕ್ರೆಟರಿಯವರ ಅವಗಾಹನೆಗಾಗಿ ಅದರ ಒಂದು ಪ್ರತಿಯನ್ನು ಕಳುಹಿಸಿದರು. ಆದರೆ ಅಷ್ಟು ಶ್ರಮಪಟ್ಟರೂ ಅದರಿಂದ ಯಾವ ಪ್ರತಿಫಲವೂ ಉಂಟಾಗಲಿಲ್ಲ.

ಶ್ರೀ ಜೇಮ್ಸೇಟ್ಜೀ ತಾತಾಯವರು ಯಾವ ತಮ್ಮ ಅಮರ ಕಾರ್ಯಗಳಿಂದ ಚಿರಸ್ಮರಣೀಯರಾಗಿದ್ದಂತೆಯೋ, ಚರಿತ್ರಪ್ರಸಿದ್ಧಗಳಾದ ಯಾವ ಮಹತ್ಕಾರ್ಯಗಳಿಂದ ಅವರು ಜಗತ್ಪ್ರಸಿದ್ಧರೆನಿಸಿದ್ದಾರೆಯೋ ಆ ಕಾರ್ಯಗಳು ಸುಮಾರು ಇಪ್ಪತ್ತು ವರ್ಷಗಳಿಂದಲೂ ಅವರ ಮನಸ್ಸಿನಲ್ಲಿ ಛಾಯಾರೂಪಿನಲ್ಲಿದ್ದುವು. ಆದರೆ ೧೮೯೫ನೆಯ ಸಂವತ್ಸರಕ್ಕೆ ಮೇಲ್ಪಟ್ಟು, ಆ ಕೆಲಸಗಳನ್ನು ಕುರಿತ ಅವರ ಯೋಚನೆಯು ವಿಶೇಷವಾಯಿತು. ದೇಶಾಭಿಮಾನಪೂರಿತಗಳೂ, ದೇಶಾಭಿವೃದ್ಧಿಗೆ ಅತಿಶಯ ಸಹಾಯಕಗಳೂ ಆದ ಆ ಮಹತ್ಕಾರ್ಯಗಳನ್ನು ಕುರಿತು ಅವರು ಸಂಪೂರ್ಣ ಕಾಲು ಶತಮಾನದವರೆಗೆ ಯೋಚಿಸಿ, ಅವುಗಳ ಸಾಧಕ ಬಾಧಕ—ಸಾಧ್ಯಾಸಾಧ್ಯ ಭಾಗಗಳನ್ನೆಲ್ಲಾ ಚೆನ್ನಾಗಿ ಹೃದ್ಗತ ಮಾಡಿಕೊಂಡು, ತಮಗಿದ್ದ ಉದ್ದೇಶಗಳಿಂಥುವೆಂದು ಸ್ಥಿರವಾಗಿ ಕಾರ್ಯರೂಪದಲ್ಲಿಡಲು ಆಗ ಸಂಕಲ್ಪ ಮಾಡಿದರು ಅವರಿಗಿದ್ದ ಮಹೋದ್ದೇಶಗಳಲ್ಲಿ ಮುಖ್ಯವಾದುವು ಮೂರು. ಹಿಂದೂಸ್ಥಾನದ ಬೇರೆ ಬೇರೆ ಪ್ರಾಂತಗಳಲ್ಲಿ ದೊರೆವ ಅಪಾರವಾದ ಕಬ್ಬಿಣದ ಅದರಿನಿಂದ ಶ್ರೇಷ್ಠ

ವಾದ ಉಕ್ಕನ್ನು ತಯಾರಿಸಿ, ಅದನ್ನು ದೇಶದ ಉಪಯೋಗಕ್ಕೆ ಸಿದ್ಧಪಡಿಸುವುದು ಒಂದನೆಯದು. ಪಶ್ಚಿಮ ಘಟ್ಟದಲ್ಲಿ ಪ್ರತಿ ವರ್ಷವೂ ಸುರಿದು ಸಮುದ್ರಕ್ಕೆ ಸೇರಿ ವ್ಯರ್ಥವಾಗುತ್ತಿರುವ ಅಪಾರವಾದ ಮಳೆಯ ನೀರನ್ನು ಶೇಖರಿಸಿ, ಅದರಿಂದ ವಿದ್ಯುಚ್ಛಕ್ತಿಯನ್ನು ತಯಾರಿಸಿ ದೇಶೀಯ ಕೈಗಾರಿಕೆಯು ಉತ್ಕೃಷ್ಟ ರೀತಿಯಿಂದ ನಡೆಯಲು ಪ್ರೋತ್ಸಾಹವನ್ನೂ ಉತ್ತೇಜನವನ್ನೂ ಉಂಟುಮಾಡಬೇಕೆಂಬುದು ಎರಡನೆಯದು. ಭೌತಿಕ ಶಾಸ್ತ್ರಾನ್ವೇಷಣವನ್ನು ಆಧುನಿಕ ಮಾರ್ಗಗಳಲ್ಲಿ ನಡೆಯಿಸುವ ಒಂದು ಕಲಾಶಾಲೆಯನ್ನು ಸ್ಥಾಪಿಸುವುದು ಮೂರನೆಯದು. ಸದ್ಯಃ ಕಾಲದಲ್ಲಿ ಪ್ರಪಂಚದ ಕೈಗಾರಿಕೆಗಳಿಗೆ ಭೌತಿಕ ಶಾಸ್ತ್ರ ಜ್ಞಾನವು ಅನಿವಾರ್ಯವಾಗಿ ಆವಶ್ಯಕವೆನ್ನಿಸಿದೆ. ಪದಾರ್ಥ ವಿಜ್ಞಾನ ಶಾಸ್ತ್ರಾನುಭವವಿದ್ದರಲ್ಲದೆ, ಯಾವುದೊಂದು ಕೈಗಾರಿಕೆಯನ್ನೂ ಲಾಭದಾಯಕವಾಗಿ ನೆರವೇರಿಸಲಸಾಧ್ಯವೆಂಬುದು ಶ್ರೀ ತಾತಾಯವರಿಗೆ ಚೆನ್ನಾಗಿ ತಿಳಿದಿದ್ದಿತು. ಅಲ್ಲದೆ ನಮ್ಮ ದೇಶೀಯರು ವಿಜ್ಞಾನ ಶಾಸ್ತ್ರ ಪ್ರವೀಣರಾಗಿ ಒಂದಿಗೇ, ದೇಶದಲ್ಲಿ ಉತ್ಪತ್ತಿಯಾಗುತ್ತಿರುವ ಲೆಕ್ಕವಿಲ್ಲದಷ್ಟು ವಸ್ತು ಸಾಮಗ್ರಿಗಳನ್ನು ಶಾಸ್ತ್ರದೃಷ್ಟಿಯಿಂದ ಕೆಲಸಕ್ಕೆ ಉಪಯೋಗಿಸಿಕೊಳ್ಳುವಂತಾದರೆ ಮಾತ್ರ ದೇಶದ ಸಂಪತ್ತೂ ಅಮಿತವಾಗಿ ಹೆಚ್ಚುವುದೆಂಬುದು ಅವರ ಆಶಯವಾಗಿದ್ದಿತು. ಈ ವಿಜ್ಞಾನ ಶಾಸ್ತ್ರಾನ್ವೇಷಣೆಯ ವಿಚಾರವು ಅವರ ಮನಸ್ಸಿನಲ್ಲಿ ಬಹು ದಿನಗಳಿಂದಲೂ ಇದ್ದಿತು. ಅದನ್ನು ಕುರಿತು ಯೋಚಿಸಿದಂತೆಲ್ಲಾ ಕೈಗಾರಿಕೆಗೆ ವಿಜ್ಞಾನ ಶಾಸ್ತ್ರ ಸಹಾಯವು ಶುದ್ಧವಾಗಿ ಅನಿವಾರ್ಯವು ಎಂಬುದರ ಸತ್ಯತೆಯು ಅತ್ಯಂತ ಸ್ಪಷ್ಟರೀತಿಯಿಂದ ಅವರಿಗೆ ಗೋಚರಿಸತೊಡಗಿತು. ಕೊನೆಗೆ ಇನ್ನು ಸಾವಕಾಶಮಾಡಲಾಗದೆಂದೂ ಆ ವಿಷಯದಲ್ಲಿ ಸಂಪೂರ್ಣ ವೃತ್ತಾಂತವನ್ನು ತಿಳಿದು ತರುವಾಯ ಕೆಲಸಕ್ಕೆ ಪ್ರಾರಂಭಿಸಬೇಕೆಂದೂ ಸಂಕಲ್ಪಿಸಿದರು. ಅದಕ್ಕಾಗಿ ಮಿ॥ ಬೆರ್ಜೋರ್ಜೀ ಪಾಡ್ಷಾ ಎಂ. ಎ. ಎಂಬ ಸೂಕ್ಷ್ಮಮತಿಯಾದ ವಿದ್ಯಾವಂತರೊಬ್ಬರನ್ನು ಯೂರೋಪ್ ಮತ್ತು ಅಮೆರಿಕಾ ಖಂಡಗಳಲ್ಲಿ ಸಂಚರಿಸಿ, ಆ ಸಂಬಂಧ ವಿಚಾರಗಳಲ್ಲಿ ಸಂಪೂರ್ಣ ತಿಳಿವಳಿಕೆಯನ್ನು ಹೊಂದಿ ಬರಲು ಕಳುಹಿಸಿದರು. ಅವರು ಆಯಾ ಖಂಡಗಳಲ್ಲಿದ್ದ ಸುಪ್ರಸಿದ್ಧ ವಿಜ್ಞಾನ ಶಾಸ್ತ್ರವೇತ್ತರನ್ನು ಕಂಡು, ಅವರೊಂದಿಗೆ ಪ್ರಶ್ನೋತ್ತರ ನಡೆಯಿಸಿ, ಆ ಸಂಬಂಧದಲ್ಲಿ ತಿಳಿಯಬೇಕಾದ ಎಲ್ಲಾ ವಿಚಾರ

ಗಳಲ್ಲೂ ತಿಳಿವಳಿಕೆ ಹೊಂದಿ ಹಿಂದಿರುಗಿದರು. ಶ್ರೀ ತಾತಾಯವರು ಅವರು ತಿಳಿದು ಬಂದು ಹೇಳಿದ ವಿಚಾರಗಳನ್ನು ಕೇಳಿ ಬಹಳ ಸಂತುಷ್ಟರಾದರು. ತರುವಾಯ ಅದಕ್ಕೆ ಆವಶ್ಯಕವಾದ ಮೂಲದ್ರವ್ಯವೆಷ್ಟು ಎಂಬುದನ್ನು ನಿರ್ಧರಿಸಬೇಕಾಯಿತು. ಆ ಕೆಲಸಕ್ಕಾಗಿ ನಿಯಮಿತರಾದ ಅನೇಕ ಮಂದಿ ಪ್ರವೀಣರು, ಆ ಕಲಾಶಾಲೆಗೆ ಆವಶ್ಯಕವಾದ ಕಟ್ಟಡಗಳು, ವಿದ್ಯಾರ್ಥಿಗಳ ಮತ್ತು ಅಧ್ಯಾಪಕರ ವಾಸಗೃಹಗಳು, ಶಾಸ್ತ್ರಾನ್ವೇಷಣ ಶಾಲೆಗಳು ಮುಂತಾದ ಕಟ್ಟಡಗಳಿಗಾಗಿಯೂ, ಮೂಲಧನಕ್ಕಾಗಿಯೂ ಮುಂದೆ ಬೇಕಾದ ಪ್ರತಿ ತಿಂಗಳ ಖರ್ಚುವೆಚ್ಚಗಳಿಗಾಗಿಯೂ, ಎರಡು ಲಕ್ಷ ಪೌಂಡುಗಳು (ಎಂದರೆ ಮೂವತ್ತು ಲಕ್ಷ ರೂಪಾಯಿಗಳು) ಆವಶ್ಯಕವೆಂದು ನಿರ್ಧರಿಸಿದರು.

ಶಾಸ್ತ್ರಾನ್ವೇಷಣ ಶಾಲೆಯು ಆದಷ್ಟು ಶೀಘ್ರವಾಗಿ ಸ್ಥಾಪಿತವಾಗಬೇಕೆಂಬ ವಿಷಯದಲ್ಲಿ ಶ್ರೀ ತಾತಾಯವರ ಆತುರವು ಹೆಚ್ಚಾಗಿತ್ತು. ಕೆಲವು ಕಾಲದವರೆಗೆ ರಾತ್ರಿ ಹಗಲೂ ಆ ಚಿಂತೆಯು ಅವರನ್ನು ಬಿಟ್ಟಿರಲಿಲ್ಲ. ಆ ವಿಷಯದಲ್ಲಿ ಬ್ರಿಟಿಷ್ ಸರ್ಕಾರದವರ ಅನುಮತಿಯೂ ಆವಶ್ಯಕವಾಗಿದ್ದಿತು. ಆ ಸಂದರ್ಭದಲ್ಲೇ ಅವರಿಗೂ ಕಲ್ಕತ್ತಾ ನಗರದಲ್ಲಿದ್ದ ಸರ್ಕಾರಿಯ ಅಧಿಕಾರಿಗಳಿಗೂ ಆ ವಿಚಾರದಲ್ಲಿ ಅನೇಕ ಕಾಗದ ಪತ್ರಗಳೂ ವಿಚಾರ ವ್ಯವಹಾರಗಳೂ ನಡೆದುವು. ಲಾರ್ಡ್ ಕರ್ಜನರು ವೈಸರಾಯಿ ಪದವಿಯ ಸ್ವೀಕಾರಕ್ಕಾಗಿ ಬೊಂಬಾಯಿಗೆ ಬಂದ ಪ್ರಥಮ ಸಂದರ್ಶನದಲ್ಲೇ ಶ್ರೀ ತಾತಾಯವರು ಆ ವಿಷಯವನ್ನು ಕುರಿತು ಪ್ರಸ್ತಾಪ ಮಾಡಿದರು. ಆ ವಿಷಯವು ಸ್ವಲ್ಪ ಹೆಚ್ಚು ಕಡಮೆ ಒಪ್ಪಿಕೊಳ್ಳಲ್ಪಟ್ಟಂತಾಗಲು, ಮುಂದೆ ಆ ಮಹಾಶಾಲೆಯ ಸ್ಥಾಪನೆಗಾಗಿ ಯೋಗ್ಯ ಸ್ಥಳವಾವುದೆಂಬ ವಿಚಾರವು ಅವರ ಯೋಚನೆಗೆ ವಿಷಯವಾಯಿತು. ಬೊಂಬಾಯಿ ಸಮೀಪದಲ್ಲಿರುವ ಟ್ರಾಂಬೇ ಎಂಬ ದ್ವೀಪವು ಮೊದಲು ಚುನಾಯಿಸಲ್ಪಟ್ಟಿತು. ಆದರೆ, ಅಲ್ಲಿ ನೀರಿನ ಅನುಕೂಲತೆಗೆ ಕುಂದಕವಿದ್ದುದರಿಂದ, ಅದು ಯೋಗ್ಯವಲ್ಲವೆಂದು ನಿರಾಕೃತವಾಗಿ, ನಮ್ಮ ಮೈಸೂರು ಸಂಸ್ಥಾನದಲ್ಲಿರುವ ಬೆಂಗಳೂರು ನಗರವು ಸಮಸ್ತ ವಿಷಯಗಳಲ್ಲೂ ಸಮರ್ಪಕವಾದುದೆಂದು ಅಂಗೀಕೃತವಾಗಿ, ಮೈಸೂರು ಸರ್ಕಾರದವರೊಂದಿಗೂ ಪತ್ರವ್ಯವಹಾರಗಳು ನಡೆಯಲಾಗಿದುವು. ಇಂತಹ ದೇಶಾಭಿವೃದ್ಧಿ ವಿಚಾರಗಳಲ್ಲಿ ಅತಿಶಯ ಉತ್ಸಾಹಿಗಳೂ, ಉದಾರಹೃದಯರೂ ಆದ ಆಳುವ

ನಮ್ಮ ಶ್ರೀಮನ್ಮಹಿಸೂರು ಮಹಾರಾಜಾ ಶ್ರೀಕೃಷ್ಣರಾಜೇಂದ್ರ ಒಡೆಯರವರು ನಮ್ಮ ಕಥಾನಾಯಕರ ಧರ್ಮಬುದ್ಧಿಯನ್ನೂ ದೇಶಾಭಿಮಾನವನ್ನೂ ಮೆಚ್ಚಿಕೊಂಡು, ಆ ಅನ್ವೇಷಣ ಶಾಲೆಗಾಗಿ ಆವಶ್ಯಕವಾದಷ್ಟು ಸ್ಥಳವನ್ನು ಉಚಿತವಾಗಿ ಕೊಡಿಸಲು ಒಪ್ಪಿ ವಾಗ್ದಾನ ಮಾಡಿದ್ದಲ್ಲದೆ, ಅದರ ಉತ್ತರೋತ್ತರ ಸಹಾಯ ನಿಧಿಗಾಗಿ ಐದು ಲಕ್ಷ ದ್ರವ್ಯದಾನವನ್ನೂ ಅನುಗ್ರಹಿಸಿದರು ಮತ್ತು ಹಿಂದೂಸ್ಥಾನ ಸರ್ಕಾರದವರೂ ಉದಾರತೆಯಿಂದ ಎರಡೂವರೆ ಲಕ್ಷ ದ್ರವ್ಯವನ್ನೂ—ಮೂರು ವರ್ಷ ಕಾಲದೊಳಗಾಗಿ ಪುನಃ ಒಂದೂವರೆ ಲಕ್ಷ ದ್ರವ್ಯವನ್ನು ಕೊಡುವಂತೆ ವಾಗ್ದಾನವನ್ನೂ ಅನುಗ್ರಹಿಸಿದರು. ಮೇಲ್ಕಂಡ ಒಂಬತ್ತು ಲಕ್ಷ ದ್ರವ್ಯದಿಂದ ಕಟ್ಟಡ ಮುಂತಾದುವುಗಳೆಲ್ಲಾ ಮುಗಿದುವು. ಇನ್ನು ಆ ಕಲಾಶಾಲೆಯ ಖರ್ಚಿಗಾಗಿ ದ್ರವ್ಯಶೇಖರ ಮಾಡಬೇಕೆಂಬ ವಿಚಾರವೊದಗಿತು ಆಗ ಶ್ರೀ ತಾತಾಯವರು, ಬೊಂಬಾಯಿಯಲ್ಲಿನ ತಮ್ಮ ಸುಮಾರು ಮೂವತ್ತು ಲಕ್ಷ ಬೆಲೆ ಬಾಳುತ್ತಿದ್ದ ಆಸ್ತಿಯಿಂದ ಉತ್ಪತ್ತಿಯಾಗುವ ಹಣದಿಂದ ಅದರ ಖರ್ಚುವೆಚ್ಚಗಳನ್ನು ತೆಗೆದುಕೊಳ್ಳಬಹುದೆಂಬ ಸಮ್ಮತಿಯನ್ನಿತ್ತರು. ಅದರ ಸಾಂವತ್ಸರಿಕ ಉತ್ಪತ್ತಿಯು ಒಂದೂಕಾಲು ಲಕ್ಷವೆಂದು ನಿರ್ಧರಿಸಲ್ಪಟ್ಟಿತು. ಆದರೆ ಅಷ್ಟು ದ್ರವ್ಯವು, ಸಾಕಾಗಲಾರದೆಂದೂ ಅದರೊಂದಿಗೆ ವರ್ಷವೊಂದಕ್ಕೆ ಎಂಟು ಸಾವಿರ ರೂಪಾಯಿಗಳಂತೆ ಹತ್ತು ವರ್ಷಗಳವರೆಗೆ ಶ್ರೀ ತಾತಾಯವರೂ ಅವರ ವಾರಸುದಾರರೂ ಕೊಡಲು ಒಪ್ಪಬೇಕೆಂದೂ ಬ್ರಿಟಿಷ್ ಸರ್ಕಾರದವರು ಅಪೇಕ್ಷಿಸಿದರು. ಅದೂ ಒಪ್ಪಿತವಾಯಿತು

ಈ ಶಾಸ್ತ್ರಾನ್ವೇಷಣಾಲಯದಲ್ಲಿ (೧) ಭೌತಿಕ ವಿಜ್ಞಾನ ಶಾಸ್ತ್ರ (ಕ್ರಿಯಾಪೂರ್ವಕ) (೨) ವೈದ್ಯ ಶಾಸ್ತ್ರ, (೩) ತತ್ವ ಶಾಸ್ತ್ರ ಮತ್ತು ಶಿಕ್ಷಣ ಶಾಸ್ತ್ರಾದಿಗಳು ಬೋಧಿಸಲ್ಪಡಬೇಕೆಂದು ಏರ್ಪಾಡಾಯಿತು ಈ ಶಾಸ್ತ್ರಗಳ ಬೋಧನೆ, ಅಧ್ಯಯನಾದಿಗಳಿಗೆ ಸಂಬಂಧಿಸಿದ ಅನ್ವೇಷಣ ಶಾಲೆಗಳು (Laborataries) ವಸ್ತುಪ್ರದರ್ಶನ ಶಾಲೆಗಳು (Museums) ಪುಸ್ತಕ ಶಾಲೆಗಳು (Libraries) ಮುಂತಾದ ಸಕಲಾನುಕೂಲತೆಗಳೂ ಸಂಪೂರ್ಣ ರೀತಿಯಿಂದ ಒದಗಿಸಲ್ಪಟ್ಟುವು. ಸುಪ್ರೌಢ—ವಿಜ್ಞಾನ ಶಾಸ್ತ್ರ ಪಾರಂಗತರಾದ ಡಾಕ್ಟರ್ ಟ್ರಾವರ್ಸ್ ಎಂಬ ಪಂಡಿತರು ಪ್ರಾರಂಭಕ್ಕೆ

ಮುಖ್ಯಾಧ್ಯಾಪಕರಾಗಿ ನಿಯಮಿತರಾದರು. ಈ ಮಹಾ ಪಾಠಶಾಲೆಗೆ ಕರ್ಜನರ ತರುವಾಯ ವೈಸರಾಯರಾಗಿ ಬಂದ ಲಾರ್ಡ್ ಮಿಂಟೋ ಮತ್ತು ಲಾರ್ಡ್ ಹಾರ್ಡಿಂಜ್ ಪ್ರಭುಗಳು ಸಹ ಅತಿಶಯ ರೀತಿಯಿಂದ ಸಹಾಯ ಮಾಡಿ, ಅದರ ಸಂಪೂರ್ಣತೆಗೆ ತಮ್ಮಿಂದ ಸಾಧ್ಯವಿದ್ದ ಸಹಾಯಗಳನ್ನೆಲ್ಲಾ ಒದಗಿಸಿ ಚಿರಯಶಸ್ವಿಗಳಾದರು. ಕೊನೆಗೆ ಹಿಂದೆ ೧೮೯೮ ನೆಯ ಸಂವತ್ಸರದಲ್ಲಿ ಶ್ರೀ ತಾತಾಯವರ ಮನಸ್ಸಿನಲ್ಲಿ ಮೊಳಕೆಯಾಗಿದ್ದ ಭೌತಿಕ ಶಾಸ್ತ್ರಾನ್ವೇಷಣಾ ಶಾಲೆಯ ಸ್ಥಾಪನಾಕಾರ್ಯ ಬೀಜವು, ೧೯೧೦—೧೧ ನೆಯ ಸಂವತ್ಸರದಲ್ಲಿ ಎರಡೆರಡು ನಾಲ್ಕೆಲೆಗಳನ್ನು ಬಿಟ್ಟು ರೆಂಬೆ—ಕೊಂಬೆಗಳಿಂದ ಕೂಡಿ, ಚಿಗುರಿದ ಹಚ್ಚನೆಯ ಎಲೆಗಳಿಂದ ನಿಬಿಡವಾಗಿ ನೇತ್ರಾನಂದಕರವಾಗಿ ಪ್ರಕಾಶಿಸತೊಡಗಿತು. ಪ್ರಕೃತಿಯಲ್ಲಿ ಬೀಜದ ರೂಪವು ನಾಶವಾದರಲ್ಲದೆ—ಎಂದರೆ ದೃಷ್ಟಿಗೆ ಮರೆಯಾಗದಲ್ಲದೆ, ವೃಕ್ಷರೂಪವು ತೋರ್ಪಡಲಾರದಲ್ಲವೆ? ಹಾಗೆಯೇ ಮೇಲ್ಕಂಡ ದೇಶಾಭಿವೃದ್ಧಿಕರವಾದ ಮಹದ್ಯೋಜನೆಯನ್ನು ಗಳಿಸಿದ್ದ ಬೀಜರೂಪಿಯಾದ ಶ್ರೀ ತಾತಾಯವರ ದೇಹವು ನಾಶವಾದಲ್ಲದೆ ಅವರಿಂದ ಸಾಧಿಸಲ್ಪಡಬೇಕಾದ ಮಹತ್ಕಾರ್ಯಗಳೆಂಬ ದಿವ್ಯವೃಕ್ಷವು ಮೊಳೆತು—ಬೆಳೆವುದು ಅಸ್ವಾಭಾವಿಕವೆಂಬುದು ಸರ್ವೇಶ್ವರನ ಸಂಕಲ್ಪದಲ್ಲಿದ್ದಂತೆ ತೋರುತ್ತದೆ. ಅಂತೆಯೇ ಅವರೂ ತಮ್ಮ ಮಹದ್ಯೋಜನೆಗಳು ಸಂಪೂರ್ಣವಾಗಿ ಕಾರ್ಯಕಾರಿಯಾದುದನ್ನು ನೋಡಲು ಜೀವಿಸಲಿಲ್ಲ. ಆದರೆ ಅದಕ್ಕಾಗಿ ಯೋಚಿಸಲೇಕೆ? ಅವರ ಯಶೋವೃಕ್ಷವು, ಅಜರವಾಗಿ ಅಮರವಾಗಿ ದೇಶಸೇವಾಮಾರ್ಗದಲ್ಲಿ ನಡೆಯಲಪೇಕ್ಷಿಸುವ ಪ್ರಯಾಣಿಕರಿಗೆ ಬೇಕಾದ ನೆಳಲು—ಫಲಗಳನ್ನು ಕೊಟ್ಟು ಆದರಿಸಲು ಸಿದ್ಧವಾಗಿರುವುದಲ್ಲವೆ?



## ಅಧ್ಯಾಯ ೫ "ಇತರ ಮಹತ್ಕಾರ್ಯಗಾರಿಕೆಗಳು"

'ಅಪುತ್ರಸ್ಯಗತಿರ್ನಾಸ್ತಿ' ಎಂಬೊಂದು ಮಾನನೀಯ ಆರ್ಯ ವಚನವು ನಮ್ಮಲ್ಲಿ ಸರ್ವಸಾಮಾನ್ಯವಾಗಿ ರೂಢಿಯಲ್ಲಿದ್ದು, ನಮ್ಮ ಹಿರಿಯರ ಇತರ ಎಲ್ಲಾ ವಚನಗಳಂತೆಯೇ ಅದೂ ಅಪಾರ್ಥ ಮಾಡಿಕೊಳ್ಳಲ್ಪಟ್ಟು—ಅಪವ್ಯಯವಾಗುತ್ತಿದೆ. 'ಪುತ್ರರಿಲ್ಲದವರಿಗೆ ಗತಿಯಿಲ್ಲ' ವೆಂಬುದು ಅದರ ಅರ್ಥ.

ಆದರೆ 'ಗತಿ' ಎಂದರೇನು? 'ಗತಿಗಾಣಿಸುವುದೆಂದರೆ, ಹೇಗೆ? ಮಗನು ತಂದೆಗೆ ಗತಿಗಾಣಿಸುವುದೆಂದರೆ, ಮೃತನಾದ ಆ ತನ್ನ ಪಿತೃವಿನ ಹೆಸರಿನಲ್ಲಿ ತನ್ನ ಸ್ವಾರ್ಜಿತದಿಂದ ಪಿಂಡಪ್ರದಾನ ಮಾಡುವುದು ಮತ್ತು ತಿಲೋದಕವನ್ನು ಬಿಡುವುದು ಎಂಬುದಿಷ್ಟೇ ಸದ್ಯಃ ನಾವು ಪ್ರಚಾರದಲ್ಲಿಟ್ಟುಕೊಂಡಿರುವ ಅದರ ಅರ್ಥ! ಇದು ಬ್ರಾಹ್ಮಣಾದಿ ದ್ವಿಜವರ್ಣಗಳವರಿಗೆ ವಿಧಿಯುಕ್ತವಾದ ಕಾರ್ಯವು. ಈ ವಿಷಯದಲ್ಲಿ ವಿವಾದವಿಲ್ಲ. ಆದರೆ, ಮಕ್ಕಳನ್ನು ಕೋರುವುದು ಕೇವಲ ಇದೊಂದು ಕಾರ್ಯಕ್ಕಾಗಿ ಮಾತ್ರವಲ್ಲ! ತಂದೆತಾಯಿಗಳ ಜೀವಿತ ಕಾಲದಲ್ಲಿ ಅವರಿಗೆ ಅವಿಧೇಯರಾಗಿದ್ದು, ಅವರ ಗೌರವಕ್ಕೆ ಕುಂದನ್ನು ತರುತ್ತಿದ್ದು, ಅವರ ಆರ್ಷೇಯ ಧರ್ಮಕ್ಕೆ ವ್ಯತಿರಿಕ್ತವಾದ ದೂಷ್ಯ ಮಾರ್ಗಗಳಲ್ಲಿ ಜೀವಿಸಿದ್ದು, ಅವರು ಸತ್ತನಂತರ ಮಾತ್ರ ನೀರಿನಲ್ಲಿ ಮುಳುಗಿ ಅವರ ಹೆಸರಿನಲ್ಲಿ ಮೂರು ಪಿಂಡಗಳನ್ನೂ ಎಳ್ಳು ನೀರುಗಳನ್ನೂ ಬಿಟ್ಟು ಋಣಮುಕ್ತರಾದೆವೆಂದುಕೊಂಡರೆ, ಸಾರ್ಥಕವೇನು? ಪಿತೃಋಣ ಮಾತೃಋಣಗಳು ಅಷ್ಟು ಮಾತ್ರದಿಂದ ತೀರತಕ್ಕುವುಗಳಲ್ಲ. ಅಷ್ಟು ಮಾತ್ರ ಕೆಲಸಕ್ಕಾಗಿಯೇ ಮಕ್ಕಳೆನ್ನಿಸಿಕೊಳ್ಳುವವರು ಇರಬೇಕೆಂದು ಅಪೇಕ್ಷಿಸುವುದಾದರೆ, ಅಂತಹ ಮಾತಾಪಿತೃಗಳು ದೀರ್ಘದರ್ಶಿಗಳಲ್ಲವೆನ್ನಬೇಕಾಗುವುದು. ವಂಶ ಮರ್ಯಾದೆಯನ್ನು ರಕ್ಷಿಸಿ ಮಾತಾಪಿತೃಗಳಿಗೆ ಕೀರ್ತಿ ಗೌರವಗಳನ್ನು ತಂದಿತ್ತು, ಅವರಿಂದ ಸ್ಥಾಪಿತವಾದ ಅಥವ ಅವರ ಅಪೇಕ್ಷಾನುಸಾರ ದೇಶಾಸೇವಾ ರೂಪಿಗಳಾದ— ಭಗವತ್ಸೇವಾ ಸಾಧಕಗಳಾದ—ಪರೋಪಕಾರ ಸಾಧಕಗಳಾದ ಧರ್ಮ ಕಾರ್ಯಗಳನ್ನು ಫಲೋದಯ ಪರ್ಯಂತವಾಗಿ ಮಾಡಿ ಇಂತು ಅವರಿಂದ ಸ್ಥಾಪಿತವಾದ ಕಾರ್ಯವು ಮಧ್ಯದಲ್ಲಿ ಘಾತವಾಗದಂತೆ ಪೂರ್ತಿಗೊಳಿಸತಕ್ಕ, ಅತ್ಯಂತ ಸವಿನಾಪದ—ಆಪ್ತರಕ್ಷಕರೊಬ್ಬರು ಇರಬೇಕೆಂಬುದೇ ಪುತ್ರರನ್ನು ಅಪೇಕ್ಷಿಸುವಲ್ಲಿ ಮುಖ್ಯೋದ್ದೇಶವು. ಮಕ್ಕಳು ಹಾಗೆ ಮಾಡಿದರೆ ಮಾತ್ರ ಮಾತಾಪಿತೃಗಳ ಆತ್ಮಕ್ಕೆ ನಿಜವಾದ 'ಗತಿ' (ಮಾರ್ಗ) ವನ್ನು ಕಾಣಿಸಿದಂತಾಗುವುದು, ಅಲ್ಲವೆ? ಹಾಗೆ ಮಾತಾಪಿತೃಗಳಿಗೆ ಮಹತ್ಕಾರ್ಯ— ಮಹದುದ್ದೇಶಗಳಿಲ್ಲದಿರುವ ಸಂದರ್ಭದಲ್ಲಿ ಪುತ್ರನು ಸ್ವತಃ ಚಿಂತಿಸಿ ದೇಶಾಭಿವೃದ್ಧಿ ಸಾಧಕಗಳಾದ ಮಹತ್ಕಾರ್ಯಗಳಿಗೆ ತೊಡಗಿ ತನ್ನ ದೇಹದಾತರಾದ ಮಾತಾಪಿತೃಗಳಿಬ್ಬರಲ್ಲಿ ತಂದೆಯಿಂದ ಗಳಿಸಿದ ಜ್ಞಾನ—ಧೈರ್ಯಸ್ಥೈರ್ಯ

ಗಳು—ಶೌರ್ಯ ಔದಾರ್ಯಾದಿ ಸುಗುಣಗಳನ್ನೂ, ತಾಯಿಯಿಂದ ಗಳಿಸಿದ ತಾಳ್ಮೆ, ನಮ್ರತೆ, ವಿಶ್ವಪ್ರೇಮ ನಿಷ್ಕಾಪಟ್ಯ ಮುಂತಾದ ಸದ್ಗುಣಗಳನ್ನೂ ಉಪಯೋಗಿಸಿ ತನ್ನಿಂದ ಸಾಧ್ಯವಿರುವಷ್ಟು ಶ್ರಮಿಸಿ ಈಶಸೇವೆ—ದೇಶಸೇವೆಗಳನ್ನು ಮಾಡಿದರೆ ಮಾತ್ರ ಋಣಮುಕ್ತನಾಗಬಹುದು. ಇಂತಹ ಸಾರ್ಥಕೋದ್ದೇಶದಿಂದ ಪುತ್ರೀಪುತ್ರರನ್ನು ಪಡೆಯಲಪೇಕ್ಷಿಸುವ ಮಾತಾಪಿತೃಗಳೂ, ಅಂತಹ ಉನ್ನತ ಭಾವನೆಯಿಂದ ಸೇವಿಸಿ, ಪಿತೃ ಋಣದಿಂದ ಮುಕ್ತರಾಗಲಾಶಿಸುವ ಶ್ರದ್ಧಾವಂತರಾದ ಪುತ್ರರೂ ನಮ್ಮಲ್ಲಿ ಹೆಚ್ಚಿದಂತೆಲ್ಲಾ ನಮ್ಮ ದೇಶವೂ ಅಭಿವೃದ್ಧಿಯಾಗುವುದು ಹಾಗಲ್ಲದೆ ಕಾಮಕ್ಕೆ ದಾಸರಾಗಿ ಮೂರ್ಖರೂ, ಅವಿಧೇಯರೂ, ಧರ್ಮನಿಂದಕರೂ ಅಸಮರ್ಥರೂ, ಧೈರ್ಯಹೀನರೂ, ವಿಷಯಲೋಲುಪರೂ, ಸ್ವಾರ್ಥಿಗಳೂ ಆದ ಅನೇಕ ಮಂದಿ ಮಕ್ಕಳನ್ನು ಪಡೆದು, ಅದೂ ಪುತ್ರಸಂಪತ್ತೆಂದು ಎಣಿಸುವುದಾದರೆ—ಅದೂ ಭಗವದ್ದತ್ತವಾದ ಸಂತಾನ ಸೌಭಾಗ್ಯವೆಂದು ಸಮಾಧಾನ ಪಡುವುದಾದರೆ, ಅಂಥವರ ತಿಳಿವಳಿಕೆಗಾಗಿ ಪರಿತಾಪ ಪಡಬೇಕಾಗುವುದು ಅದು ಪುಣ್ಯೋದಯವಲ್ಲ, ಈ ದುಷ್ಕಾಲದಲ್ಲಿ ಅಶನಧ್ವಂಸಕ್ಕೆ ಮಾರ್ಗವು, ಅಷ್ಟೆ!

ಶ್ರೀ ತಾತಾಯವರಿಗಿದ್ದ ಎರಡನೆಯ ಮಹೋದ್ದೇಶವು, ನಮ್ಮ ದೇಶದಲ್ಲಿ ದೊರೆಯುವ ಕಬ್ಬಿಣದ ಅದರಿನಿಂದ ಉಕ್ಕನ್ನು ತಯಾರಿಸಿ ಉಪಯೋಗಕ್ಕೆ ಸಿದ್ಧಪಡಿಸಬೇಕೆಂಬುದಲ್ಲವೇ ಮಧ್ಯಪ್ರಾಂತಗಳಿಗೆ ಸೇರಿದ ಚಾಂಡಾ ಎಂಬಲ್ಲಿ ಕಬ್ಬಿಣದ ಅದರು ವಿಶೇಷವಾಗಿ ದೊರೆಯುತ್ತದೆಂದು ತಿಳಿದು ಬರಲು ಶ್ರೀ ತಾತಾಯವರು, ಅದನ್ನು ಕಾರ್ಯರೂಪಕ್ಕೆ ತರಲು ಉದ್ದೇಶಪಟ್ಟರು. ಪ್ರಾರಂಭದಲ್ಲಿ ನಮ್ಮಲ್ಲಿ ಕಬ್ಬಿಣ ಮುಂತಾದ ಲೋಹಗಳು, ತಕ್ಕಷ್ಟು ಪ್ರಮಾಣದಿಂದ ಸಿಕ್ಕಲಾರವೆಂಬ ಅಭಿಪ್ರಾಯವೇ ನಮ್ಮಲ್ಲಿ ಅನೇಕರಿಗಿತ್ತು. ಆದರೆ ಬ್ರಿಟಿಷ್ ಸರ್ಕಾರದವರು 'ಜಿಯಲಾಜಿಕಲ್ ಸರ್ವೆ' ಎಂದರೆ ಖನಿಜ ಸಂಬಂಧವಾದ ದೀರ್ಘಪರೀಕ್ಷಣಗಳನ್ನು ನಡೆಯಿಸಿದುದರಿಂದಲೂ, ಆ ಕಾಲದಲ್ಲೇ ಆ ಕಾರ್ಯ ಶಾಖೆಗೆ ಅಧಿಕಾರಿಗಳಾಗಿದ್ದ ಸರ್ ಹೆನ್ರಿ ಹಾಲೆಂಡ್ ಎಂಬವರು ನಮ್ಮ ದೇಶೀಯರಿಗೆ ಖನಿಜ ಸಂಬಂಧ ಕಾರ್ಯಗಳನ್ನು ನಡೆಯಿಸಲು ಅವಕಾಶವನ್ನು ಕಲ್ಪಿಸಿಕೊಟ್ಟುದರಿಂದಲೂ ಆ ಕಾರ್ಯವು ನಡೆಯಲು ಅನುಕೂಲ ದೊರೆಯಿತು. ಶ್ರೀ ತಾತಾಯವರು ಚಾಂಡಾ ಸಮೀಪದ ಗಣಿಯನ್ನು

ಲಾಭಕರವಾಗಿ ನಡೆಯಿಸಬಹುದೇ ಎಂಬುದನ್ನು ತಿಳಿಯಲಿಕ್ಕಾಗಿಯೂ, ಆ ಪ್ರದೇಶದಲ್ಲಿ ಅದರು ವಿಸ್ತಾರವಾಗಿ ದೊರೆಯುವುದೇ ಎಂಬುದನ್ನು ಪರೀಕ್ಷಿಸುವುದಕ್ಕಾಗಿಯೂ, ಬಹು ದ್ರವ್ಯವನ್ನು ವೆಚ್ಚಮಾಡಿ ಯೋಗ್ಯ ಶೋಧಕರನ್ನು ನಿಯಮಿಸಿದ್ದರು. ಇನ್ನೂ ಪ್ರಾರಂಭದ ಕೆಲವು ಕೆಲಸಗಳನ್ನು ನಡೆಯಿಸಿ, ಮುಖ್ಯ ಕಾರ್ಖಾನೆಯನ್ನು ಪ್ರಾರಂಭಿಸಬೇಕಾಗಿದ್ದ ತರುಣದಲ್ಲೇ ಕ್ರೂರ ವಿಧಿಯು ಅವರನ್ನು ಇಹಲೋಕದಿಂದ ಮರೆಮಾಡಿತು. ಆದರೂ ಅವರ ಸತ್ಪುತ್ರರು, ಧೈರ್ಯದಿಂದ ತಮ್ಮ ತಂದೆಯಿಂದ ಪ್ರಾರಂಭಿಸಲ್ಪಟ್ಟಿದ್ದ ಆ ಮಹತ್ಕಾರ್ಯಕ್ಕೆ ತಲೆಗೊಟ್ಟು ಅದನ್ನು ಸಿದ್ಧಿಗೆ ಮುಟ್ಟಿಸಿದರು. ಮುಖ್ಯವಾಗಿ ಆ ಕಾರ್ಯವೇ ನಮ್ಮ ದೇಶಕ್ಕೆ ಹೊಸದು. ಅಲ್ಲದೆ ಬಹು ಶ್ರಮಸಾಧ್ಯವಾದುದು. ಅದಕ್ಕೆ ಹಾಕಬೇಕಾದ ಮೂಲ ದ್ರವ್ಯವೂ ಕೂಡ ಎಂತಹ ಧೈರ್ಯಶಾಲಿಗಳನ್ನೂ ಎದೆಗೆಡಿಸುವುದಾಗಿದ್ದಿತು. ಆದರೆ, ಅಂತಹ ದುರ್ಘಟವಾದ ಕಾರ್ಯ ನಿರ್ವಹಣದಲ್ಲಿ ಶ್ರೀ ತಾತಾಯವರ ಸತ್ಪುತ್ರರಲ್ಲಿ ಕಂಡು ಬಂದ ಧೈರ್ಯ ಸಾಹಸಗಳಿಗೂ, ಅದನ್ನು ಎದೆಗುಂದದೆ ಪ್ರಾರಂಭಿಸಿ ನಡೆಯಿಸಿದುದರಲ್ಲಿ ಅವರಲ್ಲಿ ತೋರಿ ಬಂದ ದೀರ್ಘ ಪರಿಶ್ರಮ ತಾಳ್ಮೆಗಳಿಗೂ ಅವರಿಗೆ ಅವರ ತಂದೆಯಲ್ಲಿದ್ದ ಶ್ರದ್ಧಾ ಭಕ್ತಿಗಳೇ ಕಾರಣವು. ಆ ಪಿತೃಭಕ್ತಿಯಿಂದ ಪ್ರೇರಿತರಾದ ಆ ಪುತ್ರರು, ಶ್ರೀ ತಾತಾಯವರು ಸ್ವರ್ಗಸ್ಥರಾದ ಮೂರು ವರ್ಷಗಳ ನಂತರ, ಈ ಕಾರ್ಯ ಪ್ರಾರಂಭವನ್ನು ಕುರಿತು ತಮ್ಮ ಮಹೋದ್ದೇಶವನ್ನು ಪ್ರಪಂಚಕ್ಕೆ ತೋರಿಸಿದರು ೧೯೦೭ ನೆಯ ಸಂವತ್ಸರದಲ್ಲಿ ಅವರು ಒಂದು ಜಾಯಿಂಟ್‌ಸ್ಟಾಕ್ ಕಂಪೆನಿ ಎಂದರೆ, ಸಂಯುಕ್ತ ನಿಧಿಯನ್ನು ಏರ್ಪಡಿಸಿ ಅದರಲ್ಲಿ ಎರಡು ಕೋಟಿ ಮೂವತ್ತೊಂದು ಲಕ್ಷ ದ್ರವ್ಯವು ಷೇರುಗಳ ಮೂಲಕ ಸೇರಬೇಕೆಂದು ಅಪೇಕ್ಷಿಸಿದರು. ಶ್ರೀ ತಾತಾಯವರು ಕಾಪಾಡಿಕೊಂಡು ಬಂದಿದ್ದ ಪ್ರಾಮಾಣಿಕತೆಯೂ, ಅವರು ತೋರಿಸಿದ್ದ ಕರ್ತೃತ್ವ ಶಕ್ತಿಯೂ ಅವರ ಕಂಪೆನಿಯ ವಿಷಯದಲ್ಲಿ ಜನಾಂಗಕ್ಕೆ ದೃಢವಾದ ನಂಬಿಕೆ ವಿಶ್ವಾಸಗಳನ್ನು ಹುಟ್ಟಿಸಿದ್ದುದರಿಂದ ಶೀಘ್ರಕಾಲದಲ್ಲೇ ಅವರು ಅಪೇಕ್ಷಿಸಿದ್ದಷ್ಟು ಹಣದ ಜಮಾವಣೆಯಾಯಿತು. ಕಾರ್ಖಾನೆಯೂ, 'ದಿ ತಾತಾ ಐರನ್ ಅಂಡ್ ಸ್ಟೀಲ್ ಕಂಪೆನಿ' ಎಂದರೆ 'ತಾತಾಯವರ ಕಬ್ಬಿಣದ ಮತ್ತು ಉಕ್ಕಿನ ಕಾರ್ಖಾನೆ' ಎಂಬ ಹೆಸರಿನಿಂದ ಪ್ರಾರಂಭಿಸಲ್ಪಟ್ಟಿತು. ಅದರಲ್ಲಿ

ದೇಶೀಯ ಕಬ್ಬಿಣ, ಉಕ್ಕಿನ ಕಂಬಿ, ತಗಡುಗಳು, ಸಲಾಕೆಗಳು ಮುಂತಾದುವು ತಯಾರಾಗಲು ಸಾಧನಗಳು ಏರ್ಪಡಿಸಲ್ಪಟ್ಟುವು. ಬಂಗಾಳಾ ನಾಗಪುರದ ರೈಲ್ವೇ ಕಂಪೆನಿಯವರು ಅದಕ್ಕೆ ಬೇಕಾದ ಯಂತ್ರೋಪಕರಣಗಳನ್ನೂ ಇತರ ಪದಾರ್ಥಗಳನ್ನೂ ಕಮ್ಮಿ ದರಕ್ಕೆ ಸಾಗಿಸಿ ಕೊಡಲು ಒಪ್ಪಿ ಸಹಾಯ ಮಾಡಿದರು. ಅಲ್ಲದೆ ಹಿಂದೂಸ್ಥಾನ ಸರ್ಕಾರದವರು, ವರ್ಷ ಒಂದಕ್ಕೆ ೨೦,೦೦೦ ಟನ್ ಉಕ್ಕಿನ ಹಳಿ (ಕಂಬಿ) ಗಳನ್ನು ಹೊರಗಿನಿಂದ ಆಮದಾಗುವ ಬೆಲೆಗೆ ಕೊಂಡುಕೊಳ್ಳುವಂತೆ ಒಪ್ಪಿಕೊಂಡು ಪ್ರೋತ್ಸಾಹಕೊಟ್ಟರು ಕಂಪೆನಿಯು ಉತ್ತಮರೀತಿಯಿಂದ ಪ್ರಾರಂಭಿಸಲ್ಪಟ್ಟು, ಯಂತ್ರೋಪಕರಣಗಳ ಕಾರ್ಯದಲ್ಲಿ ಪಳಗಿದವರಾದ ಕುಶಲಕರ್ಮಚಾರಿಗಳಿಂದ ನಡೆಯಿಸಲ್ಪಡತೊಡಗಿತು ಇದರಷ್ಟು ದೊಡ್ಡದಾದ ಮತ್ತು ಅಗಾಧವೂ ಲಾಭಕರವೂ ಆದ ಕೈಗಾರಿಕೆಯು ನಮ್ಮ ದೇಶದಲ್ಲಿ ಮತ್ತೊಂದಿಲ್ಲ. ಭೌತಿಕ ಶಾಸ್ತ್ರ ಜ್ಞಾನವೂ, ಧನವೂ ಹಸ್ತ ಕೌಶಲ್ಯವೂ ಒಂದಾದರೆ ಎಂತಹ ಕಾರ್ಯವನ್ನು ಸಾಧಿಸಬಹುದೆಂಬುದನ್ನು ತೋರಿಸುವುದಕ್ಕೆ ಇದು ನಿದರ್ಶನವಾಗಿದೆ. ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ನಮ್ಮ ದೇಶದಲ್ಲಿ ಸ್ಥಾಪಿತವಾದ ಈ ಮಹತ್ಕಾರ್ಯಾಲಯವು ನಮ್ಮ ದೇಶದ ಕೈಗಾರಿಕೆಗಳ ಚರಿತ್ರೆಯಲ್ಲೊಂದು ಹೊಸ ಅಧ್ಯಾಯವನ್ನೇ ಪ್ರಾರಂಭಿಸಿತು. ಇದರಿಂದ ೧೯೧೨ ನೆಯ ಸಂವತ್ಸರದಲ್ಲಿ ೮,೩೧,೦೦೦ ರೂಪಾಯಿಗಳ ಲಾಭವು ಉತ್ಪತ್ತಿಯಾಯಿತೆಂದೂ, ಮೂರನೆಯ ವರ್ಷವೇ ಈ ಲಾಭದ್ರವ್ಯವು ೨೩ ಲಕ್ಷಕ್ಕೆ ಏರಿತೆಂದೂ ಡೈರೆಕ್ಟರುಗಳು ಒಪ್ಪಿಸಿದ ಲೆಕ್ಕದಿಂದ ತಿಳಿಯಬರುತ್ತದೆ. ಈಚೆಗೆ ಈ ಕಾರ್ಖಾನೆಯು ಇನ್ನೂ ಲಾಭಕರವಾಗಿ ಕೆಲಸ ಮಾಡುತ್ತಿದೆ. ಇಂತು ನಮ್ಮ ಕಥಾನಾಯಕರ ಮಹದುದ್ದೇಶಗಳಲ್ಲಿ ಎರಡನೆಯ ಮಹತ್ಕಾರ್ಯವನ್ನೂ ಪ್ರಾರಂಭಿಸಿ ಅವರ ಸತ್ಪುತ್ರರು ಅವರನ್ನು ಸಿದ್ಧಸಂಕಲ್ಪರೆನ್ನಿಸಿದರು

ಶ್ರೀ ತಾತಾಯವರು ಸಂಕಲ್ಪಿಸಿದ್ದ ಮೂರನೆಯ ಮಹತ್ಕಾರ್ಯವೆಂದರೆ, ಪಶ್ಚಿಮ ಘಟ್ಟಗಳ ಪ್ರಾಂತದಲ್ಲಿ ಪ್ರತಿವರ್ಷವೂ ಸುರಿದು ವ್ಯರ್ಥವಾಗುವ ಮಳೆಯ ನೀರನ್ನು ಶೇಖರಿಸಿ ಅದರಿಂದ ವಿದ್ಯುಚ್ಛಕ್ತಿಯನ್ನು ತಯಾರಿಸುವುದೇ! ಪಶ್ಚಿಮ ಘಟ್ಟಗಳಿಂದ ಕೆಳಗಿನ ಕಣಿವೆಗಳಿಗೆ ಸುರಿಯುವ ಅಪಾರ ವರ್ಷ ಜಲವು ತಕ್ಕ ಪ್ರಯೋಜನವಿಲ್ಲದೆ ವ್ಯರ್ಥವಾಗಿ ಹರಿದು ಸಮುದ್ರವನ್ನು

ಸೇರುತ್ತಿದೆಯಷ್ಟೆ! ಈ ಪ್ರಾಂತವನ್ನು ಸಂದರ್ಶಿಸಿದ ಮಿ|| ಡೇವಿಡ್ ಗಾಸ್ಲಿಂಗ್ ಎಂಬೊಬ್ಬ ಬೊಂಬಾಯಿ ಇಂಜನಿಯರು ಈ ವಿಷಯವನ್ನು ಕುರಿತು ವಿಶದವಾಗಿ ಯೋಚಿಸಿ, ಆ ನೀರನ್ನು ಶೇಖರಿಸುವುದಾದರೆ, ಅದರಿಂದ ಪ್ರಯೋಜನಕರವಾದ ಅನೇಕ ಕೆಲಸಗಳನ್ನು ನಡೆಯಿಸಬಹುದೆಂದು ಶ್ರೀ ತಾತಾಯವರಿಗೆ ಸೂಚಿಸಿದ್ದನು. ಅವರೂ ಬಹುಕಾಲ ತಮ್ಮ ಮನಸ್ಸಿನಲ್ಲೇ ಆ ವಿಷಯವನ್ನು ಕುರಿತು ಚಿಂತನೆ ಮಾಡಿ ಮಾಡಿ ಕೊನೆಗೆ ಅದನ್ನು ಕಾರ್ಯರೂಪಕ್ಕೆ ತರಲು ಸಾಧ್ಯವೇ ಎಂಬುದನ್ನು ತಿಳಿಯಲಪೇಕ್ಷಿಸಿ ಅನೇಕ ಪ್ರವೀಣರನ್ನು ಪ್ರಶ್ನಿಮಾಡಿದ್ದರು. ಅಂಥವರಲ್ಲಿ ಮಿ|| ಜಾಯ್ನರ್ ಎಂಬೊಬ್ಬ ಶಿಲ್ಪ ಶಾಸ್ತ್ರ ಪ್ರವೀಣನು, ಆ ನೀರು ಎರಡು ಸಾವಿರ ಅಡಿಗಳ ಎತ್ತರದಿಂದ ಧುಮುಕುವುದರಿಂದ ಅದರಿಂದ ವಿದ್ಯುಚ್ಛಕ್ತಿಯನ್ನೂ ಪಡೆಯುವುದ ಸಾಧ್ಯವೆಂದು ಸಲಹೆ ಕೊಟ್ಟಿದ್ದನು. ಈ ಯೋಚನೆಯೂ ಬಹು ಬಲವಾಗಿ ಶ್ರೀ ತಾತಾಯವರ ಮನಸ್ಸಿಗಂಟಿ ಮುಂದೊಂದು ಅಮೃತ ಮುಹೂರ್ತದಲ್ಲಿ ಅದನ್ನು ಸಾಧಿಸಲೇ ಬೇಕೆಂದು ಸ್ಥಿರಸಂಕಲ್ಪ ಮಾಡಿದರು. ಆದರೂ ಅವರ ಇತರ ಎರಡು ಮಹದುದ್ದೇಶಗಳಂತೆಯೇ ಅಪೂರ್ಣವಾಗಿ ಉಳಿದಿದ್ದ ಈ ಕಾರ್ಯವನ್ನೂ, ತಾತಾಯವರೊಂದಿಗಿದ್ದು ಬಹುಕಾಲ ಅನುಭವ ಪಟ್ಟಿದ್ದ ಮಿ|| ಎ. ಜೆ. ಬಿಲ್ಲಿ ಮೋರಿಯಾ ಎಂಬೊಬ್ಬ ಸದ್ಗೃಹಸ್ಥರ ಸಹಾಯದಿಂದ ಅವರ ಸತ್ಪುತ್ರರು ಕೊನೆಗಾಣಿಸಿದರು. ಆ ಕಾರ್ಯದ ಅಸ್ತಿಭಾರ ಸ್ಥಾಪನೆಯ ಕಾಲದಲ್ಲಿ ನೆರೆದ ಸಭೆಯಲ್ಲಿ ಶ್ರೀ ತಾತಾಯವರ ಜ್ಯೇಷ್ಠ ಪುತ್ರರಾದ ಸರ್ ದೊರಾಬ್ಜೀ ತಾತಾಯವರು, ತಮ್ಮ ಭಾಷಣದಲ್ಲಿ ಹೇಳಿರುವ ಕೆಲವು ಸಂಗತಿಗಳಿಂದ, ಈ ಕಾರ್ಯದಿಂದ ದೇಶದ ಕೈಗಾರಿಕೆಗಳಿಗೂ ಮುಖ್ಯವಾಗಿ ಬೊಂಬಾಯಿ ನಗರಕ್ಕೂ ಲಭ್ಯವಾದ ಪ್ರಯೋಜನಗಳೇನೆಂಬುದನ್ನು ಊಹಿಸಬಹುದು. "ಈ ಕಾರ್ಯವನ್ನು ಯೋಗ್ಯ ರೀತಿಯಲ್ಲಿ ಸಾಧಿಸುವುದರಿಂದ ಬೊಂಬಾಯಿ ನಗರಕ್ಕೆ ಪುಷ್ಕಳವಾದ ಶುದ್ಧ ಜಲವನ್ನು ಒದಗಿಸುವುದು ಮಾತ್ರವಲ್ಲ. ನಗರದ ಹತ್ತಿರದಲ್ಲಿರುವ ೩೦—೪೦ ಸಾವಿರ ಎಕರೆ ಭೂಮಿಯಲ್ಲಿ ಕಾಯಿಪಲ್ಯಗಳು ಮುಂತಾದುವುಗಳ ಬೆಳೆವಣಿಗೆಗೂ ಅನುಕೂಲಗೊಳಿಸಬಹುದು. ಅಲ್ಲದೆ ಇದರಿಂದ ಒಂದು ಲಕ್ಷ 'ಹಾರ್ಸ್ ಪವರ್' ವಿದ್ಯುಚ್ಛಕ್ತಿಯನ್ನು ಶೇಖರಿಸಲು ಸಾಧ್ಯವಿರುವುದರಿಂದ ಬೊಂಬಾಯಿ ಮಹಾ ನಗರದಲ್ಲೂ ಇತರ ಸಮೀಪದ ಸ್ಥಳಗಳಲ್ಲೂ ಇರುವ ಅನೇಕಾನೇಕ

ಕೈಗಾರಿಕೆಗಳಿಗೆ ಇದರಿಂದ ಅತಿಶಯ ಪ್ರಯೋಜನವಾಗುವುದು. ಈಗ ಇರುವಂತಹ ಆವಿಯ ಶಕ್ತಿಯಿಂದಲಲ್ಲದೆ, ವಿದ್ಯುಚ್ಛಕ್ತಿಯಿಂದ ಯಂತ್ರಾದಿಗಳೂ ಕಾರ್ಖಾನೆಗಳೂ ನಡೆಯುವಂತಾದರೆ, ಬೊಂಬಾಯಿ ನಗರದಲ್ಲಿ ಈಗ ಕಾರ್ಖಾನೆಗಳಿಂದುಂಟಾಗುತ್ತಿರುವ ಹೊಗೆಯು ತಪ್ಪಿ, ನಾಗರವಾಸಿಗಳಿಗೆ ಶುದ್ಧವಾಯುವು ದೊರೆಯಲೂ ಸಾಧಕವಾಗುವುದು" ಎಂದು ಭಾಷಿಸಿದರು.

ಇದಕ್ಕೆ ಬೇಕಾದ ಎರಡು ಕೋಟಿ ರೂಪಾಯಿಗಳ ಮೂಲಧನಕ್ಕಾಗಿ 'ಟಾಟಾಸನ್ಸ್ ಕಂಪೆನಿ'ಯವರು ಮೊದಲು ಇಂಗ್ಲೆಂಡಿನಲ್ಲಿ ಪ್ರಯತ್ನ ಮಾಡಿದರು. ಆದರೆ ಇಂಗ್ಲೆಂಡು ದೇಶೀಯರು ಅದರ ವಿಷಯದಲ್ಲಿ ಯಾವ ಶ್ರದ್ಧೆಯನ್ನೂ ತೋರಿಸಲಿಲ್ಲ ಪರದೇಶದಲ್ಲಿ ಸ್ಥಾಪನೆಯಾಗಲಿರುವ ಒಂದು ಕಂಪೆನಿಗೆ ಮೂಲಧನವನ್ನು ಒದಗಿಸಿಕೊಡಬೇಕೆಂದರೆ ಶ್ರೀಮಂತರು ಹಿಂದು ಮುಂದು ನೋಡುವುದಿಲ್ಲ ಅವರಿಗೆ 'ಕವಿನಾರ್ಷ್' ರೂಪದಲ್ಲಿ ಬರುವ ಎರಡು ಕಾಸುಗಳು, ಕಣ್ಣಿಗೆ ಥಳಥಳನೆಂದು ಹೊಳೆವುವು. ಆದರೆ ಪರದೇಶೀಯರು, ನಮ್ಮ ದೇಶದ ಕೈಗಾರಿಕೆಗಳ ಅಭಿವೃದ್ಧಿಯ ವಿಷಯದಲ್ಲಿ ಎಷ್ಟು ಮಟ್ಟಿನ ಶ್ರದ್ಧೆ ವಹಿಸುತ್ತಾರೆಂಬುದನ್ನೂ, ತಮ್ಮ ಧನವು ಪರದೇಶದಲ್ಲಿ ವಿನಿಯೋಗವಾಗಲು ಕೊಡದಿರುವಂತೆ ಎಷ್ಟು ಜಾಗರೂಕರಾಗಿರುತ್ತಾರೆಂಬುದನ್ನೂ, ಇದರಿಂದ ಗಮನಿಸಬಹುದು. ಆದರೇನು? ಶ್ರೀ ಟಾಟಾಯವರ ಮಕ್ಕಳು ಪುನಃ ಈ ದೇಶದಲ್ಲೇ ಪ್ರಯತ್ನಿಸಲು ಎರಡು ಕೋಟಿ ರೂಪಾಯಿಗಳ ಮೂಲಧನವೂ ಇಲ್ಲೇ ದೊರೆತು ಕಂಪೆನಿಯು ಪ್ರಾರಂಭವಾಯಿತು ೧೯೧೫ ನೆಯ ಸಂವತ್ಸರದಲ್ಲಿ ವಿದ್ಯುಚ್ಛಕ್ತಿಯು ಬೊಂಬಾಯಿ ಮಹಾ ನಗರವನ್ನು ಬೆಳಗಿತು. ಆ ಮಹಚ್ಛಕ್ತಿಯಿಂದ ಹೊಗೆಯಿಲ್ಲದೆ, ಕೊಳೆಯಿಲ್ಲದೆ, ತೀವ್ರವಾಗಿ, ಶುಭ್ರವಾಗಿ ಕೆಲಸ ಕಾರ್ಯಗಳು ಜರುಗಲಿಕ್ಕೂ ಅವಕಾಶ ದೊರೆಯಿತು.

ಚಂಚಲಳಾದ ಲಕ್ಷ್ಮಿಯನ್ನು ಪೂಜೆ ಪ್ರಾರ್ಥನೆಗಳಿಂದ ಒಲಿಸಿಕೊಳ್ಳುವಂತಹ ಶ್ರದ್ಧಾಭಕ್ತಿಗಳು ಪೂರ್ವದಂತೆ ಈಗ ನಮ್ಮಲ್ಲಿ ಉಳಿದಿಲ್ಲ. ಅನಿರ್ವಚನೀಯವಾದ ಭಕ್ತಿಶ್ರದ್ಧೆಗಳಿಂದ ಸೇವಿಸಿ ಆತ್ಮಸಮರ್ಪಣೆಗೂ ಸಿದ್ಧರಾದಲ್ಲದೆ ಯಾವ ದೇವತೆಯ ಅನುಗ್ರಹವೂ ಉಂಟಾಗದು. ಹೀಗಿರುವಲ್ಲಿ ನಮ್ಮ ಶುಷ್ಕಭಕ್ತಿಯೂ—ಕೋರಿಕೆಯ ಪೂಜೆಗಳೂ ಲಕ್ಷ್ಮೀಕಟಾಕ್ಷವನ್ನುಂಟುಮಾಡಿಕೊಡಲು ಶಕ್ತವಾಗಲಾರವು. ಲಕ್ಷ್ಮಿಯು, ದುರ್ದಮನೀಯವಾದ

ಧೈರ್ಯಸ್ಥೈರ್ಯಗಳು, ದೀರ್ಘ ಪರಿಶ್ರಮ, ಕಷ್ಟಸಂಕಟಗಳಿಗಂಜದೆ ದೃಢ ಚಿತ್ತದಿಂದ ಮುಂದರಿಯುವ ಕಾರ್ಯಸಾಮರ್ಥ್ಯ, ಸುಖಸೌಲಭ್ಯಗಳಿಗೆ ಮರುಳಾಗದೆ ಮುಂದರಿಯುವ ಇಂದ್ರಿಯ ನಿಗ್ರಹ ಮುಂತಾದ ಗುಣಗಳನ್ನು ಗಳಿಸಿದ ನಮ್ಮ ಕಥಾನಾಯಕರಂತಹ ಪುರುಷಪುಂಗವರನ್ನಲ್ಲದೆ, ಆಲಸ್ಯ, ಅಸಮರ್ಥತೆ, ಅಧೈರ್ಯಗಳ ನೆಲೆವೀಡಾದ ಅಳುಬುರಕರನ್ನು ಮೆಚ್ಚಳು. ಪ್ರಕೃತಿಯನ್ನು ಕಟ್ಟಿ ಆಳುವಂತಹ ಸಾಮರ್ಥ್ಯಶಾಲಿಯಲ್ಲದೆ ಹೇಡಿಯು ಲಕ್ಷ್ಮಿಯಿಂದ ಅನುಗೃಹೀತನಾಗಲಾರನು. ಸ್ತ್ರೀಯರ ಒಡವೆಗಳ ರೂಪವನ್ನು ಹೊಂದಿ, ಕಬ್ಬಿಣದ ಪೆಟ್ಟಿಗೆಗಳನ್ನು ಸೇರುವ ನಮ್ಮವರಲ್ಲಿಯ ದ್ರವ್ಯವು ಹೊರಬಿದ್ದು, ನಮ್ಮ ಕಥಾನಾಯಕರು ತಮ್ಮ ಜೀವಿತೋದಾಹರಣೆಯಿಂದ ತೋರಿಸಿರುವಂತೆ ವಿಜ್ಞಾನದ ಬೆಳಕಿನಿಂದ ಕಾರ್ಯರೂಪಕ್ಕೆ ಬರಲು ಮೂಲಕಾರಣವಾಗಿ—ಲಕ್ಷ್ಮಿಯು, ಇಂತು ಮೂಲಧನ ರೂಪದಲ್ಲಿ ಚೈತನ್ಯವನ್ನುಂಟುಮಾಡುವಳಾದರೆ, ನಮ್ಮಲ್ಲೂ ಎಷ್ಟೋ ಕಾರ್ಯಗಳು ನಡೆಯಲವಕಾಶವಾಗಬಹುದು! ದೇಶವೂ ಎಷ್ಟೋ ಮಟ್ಟಿಗೆ ಸಂಪತ್ಸೌಭಾಗ್ಯದಿಂದ ಶೋಭಿಸಬಹುದು! ಕೇವಲ ಒಂದು ಸೂಜಿ, ಬರೆಯುವ ಒಂದು ಮುಳ್ಳು, ಸಾಯಂಕಾಲವಾದರೆ ಮನೆಯನ್ನು ಬೆಳಗಲು ಹಚ್ಚುವ ಒಂದು ದೀಪಕ್ಕಾದರೂ ನಮ್ಮಲ್ಲಿ ಸ್ವತಂತ್ರ ಪದಾರ್ಥಗಳಿಗೆ ಗತಿಯಿವೆಯೇ? ನಮ್ಮ ದೇಶದಲ್ಲಿನ ಹಣವು, ನಮ್ಮಲ್ಲೇ ವಿನಿಯೋಗವಾಗಲು, ಮೇಲ್ಕಂಡಂತೆ ಹಣವೂ ವಿಜ್ಞಾನವೂ ಒಂದಾದರೆ—ಲಕ್ಷ್ಮೀಸರಸ್ವತಿಯರಿಗೆ ಸ್ನೇಹವಾದರೆ, ಆಹಾ, ನಮ್ಮಲ್ಲಿಯ ಕೋಟ್ಯಾಂತರ ಬಡಜನಗಳಿಗೆ ಭಿಕ್ಷದ ಕೂಳಲ್ಲ—ಕೈಗಳಿಗೆ ಕೆಲಸ ದೊರೆತು, ಅವರು ಪರರ ಹಂಗಿನಿಂದಲ್ಲ—ತಮ್ಮ ಮೈ ಬೆವರಿನಿಂದ ಜೀವಿಸಲು ಅವಕಾಶ ದೊರೆವುದಲ್ಲವೆ? ಭಿಕ್ಷುಕರ ಸಂಖ್ಯೆಯೂ ಅಷ್ಟಕ್ಕಷ್ಟಕ್ಕೆ ಕಡಮೆಯಾಗಬಹುದಲ್ಲವೆ?—ನಮ್ಮ ದೇಶೀಯರೇ ಆದ ಇಂತಹ ಮಹಾ ಪುರುಷರು, ಹಾಗೆ ನಮ್ಮಲ್ಲಿಯ ಧನವನ್ನು ಸಂಗ್ರಹಿಸಿ ಪ್ರಾಮಾಣಿಕತೆಯಿಂದ ಮಹತ್ಕೈಗಾರಿಕೆಗಳನ್ನು ನಡೆಯಿಸಿ ಕೃತಕೃತ್ಯರಾದ ಉದಾಹರಣೆಗಳಿದ್ದರೂ, ಅಕಟಾ, ನಮ್ಮವರಿಗೆ ಅವು ಏಕೆ ಮಾರ್ಗದರ್ಶಕಗಳಾಗವು?

## ಅಧ್ಯಾಯ ೬ "ಸಾರ್ಥಕ ಜೀವಿತ"

ಶ್ರೀ ಜೇಮ್ಸೆಟ್ಜೀ ನಸರ್ವಾನ್‌ಜೀ ತಾತಾಯವರು, ೧೮೮೬ ನೆಯ ಸಂವತ್ಸರದಲ್ಲಿ 'ಧರಂಸಿ' ಮಿಲ್ಲನ್ನು ಕೊಂಡು ಅವಕ್ಕೆ 'ಸ್ವದೇಶಿಮಿಲ್ ಎಂದು ನಾಮಕರಣ ಮಾಡಿ ಕೆಲಸಕ್ಕೆ ಪ್ರಾರಂಭಿಸಿದಾಗ ಯಂತ್ರ ನಡಿಸುವುದಕ್ಕೂ, ಕೂಲಿಗೂ ಸಾಕಾದಷ್ಟು ಮಂದಿ, ಕೆಲಸಗಾರರು ಸಿಕ್ಕುತ್ತಿರಲಿಲ್ಲ. ದೊರೆತ ಅಲ್ಪ ಸ್ವಲ್ಪ ಮಂದಿಯಲ್ಲೂ ಹೆಚ್ಚು ಸಂಖ್ಯೆಯವರು ಸೋಮಾರಿಗಳೂ, ಜೂಜು ಕಳ್ಳತನ ಮುಂತಾದುವುಗಳಿಂದ ಕಾಲಹರಣ ಮಾಡುವ ದುರುಳರೂ ಆಗಿದ್ದರು. ಆ ಕಾರ್ಖಾನೆಯಿದ್ದ ಕೂರ್ಲ ಎಂಬಲ್ಲಿ ವಾಸಿಸುತ್ತಿದ್ದ ಸ್ವಲ್ಪ ಮಂದಿಯಲ್ಲಿ ಇಂದು ಬಂದವರು ನಾಳೆ ಬರುವರೆಂಬ ನಂಬಿಕೆಯಿರಲಿಲ್ಲ. ಕಾರ್ಖಾನೆಯಲ್ಲಿ ನೇಯ್ಗೆ ಕೆಲಸ ಮಾಡುವವರು ದಂಗೆಕೋರರೂ ಮೂರ್ಖರೂ ಆದ ತುರುಷ್ಕರು—ಅವರೊಂದಿಗೆ ಸಾಲದುದಕ್ಕೆ ಕಲಹಪ್ರಿಯರಾದ ಮರಾಟೆಯವರೂ ಸೇರಿ, ಕಾರ್ಖಾನೆಯವರಿಗೆ ಆಗಾಗ ಬಹು ತೊಂದರೆ ಕೊಡುತ್ತಿದ್ದರು ಎಷ್ಟೋ ಸಾರಿ ಕಾರ್ಖಾನೆಯ ಎಲ್ಲಾ ಕೆಲಸಗಳನ್ನೂ ನಿಲ್ಲಿಸಿಬಿಡಬೇಕಾಗುತ್ತಿದ್ದಿತು. ಬಹು ಸಮಾಧಾನ ಪ್ರಕೃತಿಯವರಾದ ಶ್ರೀ ತಾತಾಯವರು ಒಳ್ಳೆಯ ಮಾತಿನಿಂದ ಅವರನ್ನು ಮಾರ್ಗಕ್ಕೆ ತರಲು ಮಾಡಿದ ಪ್ರಯತ್ನಗಳೆಲ್ಲವೂ ವ್ಯರ್ಥವಾದುವು. ಕೆಲಸಗಾರರ ಅಭಾವದಿಂದ ಯಂತ್ರಗಳು ಒಂದೊಂದಾಗಿ ನಿಲ್ಲತೊಡಗಿದುವು. ಆ ಕಾಲದಲ್ಲಿ ಒಂದು ಊರಿನಿಂದ ಇನ್ನೊಂದು ಊರಿಗೆ ಲಾಭಕರವಾದ ಸಂಪಾದನೆಯಿದ್ದರೂ ಹೋಗಲು ಜನಗಳು ಒಪ್ಪುತ್ತಿರಲಿಲ್ಲ. ಅಲ್ಲದೆ ಬೊಂಬಾಯಿಯಲ್ಲೂ ಸಮೀಪದ ಒಂದೊಂದು ಸ್ಥಳದಲ್ಲೂ ಕಾರ್ಖಾನೆಗಳು ಸ್ಥಾಪಿತವಾಗಿ ಜನಗಳಿಗೆ ಅವರವರ ಸ್ಥಳದಲ್ಲೇ ಕೆಲಸ ದೊರೆವಂತಾಗಲು, ಬೊಂಬಾಯಿಯಿಂದ ಕೇವಲ ಒಂಬತ್ತು ಮೈಲು ದೂರದಲ್ಲಿದ್ದ ಕೂರ್ಲಕ್ಕೆ ಹೋಗಲು ಕೂಡ ಜನಗಳು ಒಪ್ಪುತ್ತಿರಲಿಲ್ಲ. ತಾತಾಯವರ ಏಜೆಂಟರು ಭರೋಚ್ ಮತ್ತು ಸೂರತ್ ಪ್ರಾಂತಗಳಲ್ಲಿ ಸಂಚರಿಸಿ, ಕೂಲಿಯವರನ್ನು ಶೇಖರಿಸಿ, ಹೆಚ್ಚು ಕೂಲಿಯನ್ನು ಕೊಡಲೊಪ್ಪಿ ಕರೆತಂದರು. ಆದರೇನು! ಅವರೂ ಕೆಲವು ದಿನಗಳೊಳಗಾಗಿ ಹಿಂದಿರುಗಿಬಿಟ್ಟರು. ಪ್ರತಿದಿನವೂ, ಕಾರ್ಖಾನೆಗೆ ಕೆಲಸಗಾರರನ್ನು ಹವಣಿಸುವಿಕೆಯೇ ದೊಡ್ಡ ಕೆಲಸವಾಯಿತು. ಧರಂಸಿ ಮಿಲ್ಲು ಸರಿಯಾದ ಉಪಯೋಗಕ್ಕೆ ಬರಲು ಮಾಡಿಸಿದ

ತಯಾರಿಗಾಗಿ ತಗುಲಿದ ಅಪಾರ ದ್ರವ್ಯ ನಷ್ಟ ಬೇರೆ! ಅಲ್ಲದೆ ಮೇಲೆ ಮೇಲೆ ಒದಗುತ್ತಿದ್ದ ಈ ತೊಂದರೆಗಳು ಬೇರೆ! ಇವುಗಳಿಂದ ತಾತಾಯವರಂತಹ ಸ್ಥಿರಚಿತ್ತರೂ ಯೋಚಿಸುವಂತಾಯಿತು. ಆದರೂ ಧೀರರಾದ ಅವರು ಕಂಗೆಡದೆ, ವಾಯುವ್ಯ ಪ್ರಾಂತಗಳಿಂದ ಕೂಲಿಯವರನ್ನು ತರಿಸಲು ಪ್ರಯತ್ನಿಸಿದರು. ಅಲ್ಲಿಯ ಕೂಲಿಯವರು ದಿನಕ್ಕೆ ಒಂದಾಣೆ ದೊರೆತರೆ ಅಷ್ಟರಲ್ಲೇ ಜೀವನೋಪಾಯವನ್ನು ಜರುಗಿಸುವವರಾಗಿದ್ದುದರಿಂದ ಅವರಿಗೆ ದಿನಕ್ಕೆ ಆರಾಣೆಯ ಕೂಲಿ ದೊರೆವುದೆಂದು ತಿಳಿಸಿ, ಅವರನ್ನು ಸುಲಭವಾಗಿ ಕರೆತರಬಹುದಾಗಿದ್ದಿತು. ಆ ಸಂಬಂಧದಲ್ಲಿ ಶ್ರೀ ತಾತಾಯವರು, ವಾಯುವ್ಯ ಪ್ರಾಂತಗಳ ಗವರ್ನರಿಗೊಂದು ಮನವಿಯನ್ನು ಬರೆದು, ಅದರಲ್ಲಿ ದೇಶೀಯ ಕೈಗಾರಿಕೆಗಳಿಗೊದಗಿರುವ, ಈ ಕೆಲಸಗಾರರ ತೊಂದರೆಯಲ್ಲಿ ತಮಗೆ ಸಹಕರಿಸಬೇಕೆಂದು ಅವರನ್ನು ಕೇಳಿಕೊಂಡರು. ಹೆಚ್ಚು ಕೂಲಿಯ ಆಸೆಯಿಂದ ಆಕರ್ಷಿತರಾಗಿ ಅವರಲ್ಲಿ ಅನೇಕರು ಹೊರಟು ಬಂದರು ಮುಂದೆ ಕಾರ್ಖಾನೆಯ ಕೆಲಸಕಾರ್ಯಗಳು ವಿಶೇಷ ತೊಂದರೆಯಿಲ್ಲದೆ ಸಾಗಲು ಆರಂಭವಾಯಿತು. ಕಾರ್ಖಾನೆಗಳ ಸಂಖ್ಯೆಯು ಹೆಚ್ಚಿದಂತೆಲ್ಲಾ ಈ ಕಷ್ಟವೂ ಹೆಚ್ಚುವುದೆಂದು ಈಗ್ಗೆ ನಾಲ್ವತ್ತು ವರ್ಷಗಳಿಗೆ ಮುಂದೆಯೇ ತಾತಾಯವರು ಭವಿಷ್ಯವನ್ನು ನುಡಿದಿದ್ದರೂ, ಆಗ ಅವರ ಸಲಹೆಯು ಅನೇಕರಿಗೆ ಪಥ್ಯವಾಗದಿದ್ದುದರಿಂದ ಆ ಕಷ್ಟವು ಈಗಲೂ ತಪ್ಪಿಲ್ಲ ಕೆಲಕೆಲವು ವೇಳೆ ಕಾರ್ಖಾನೆಯ ಮಾಲೀಕರು ಕೆಲಸಗಾರರಿಗಾಗಿ ಪಡುವ ಕಷ್ಟನಷ್ಟಗಳು ಭಯೋತ್ಪಾದಕಗಳಾಗಿರುತ್ತವೆ.

ಶ್ರೀ ತಾತಾಯವರು ಮೇಲೆ ಉದಹರಿಸಿದಂತೆ ಕೇವಲ ದೇಶೀಯ ಕೈಗಾರಿಕೆಗಳ ಅಭಿವೃದ್ಧಿ ವಿಚಾರದಲ್ಲೇ ಮಗ್ನರಾಗಿದ್ದುದರಿಂದ ಅವರು ಸಾಮಾಜಿಕ ರಾಜಕೀಯಾದಿ ಇತರ ವಿಷಯಗಳನ್ನು ಗಮನಿಸುತ್ತಲೇ ಇರಲಿಲ್ಲವೆಂದು ಭಾವಿಸಲಾಗದು. ತಮ್ಮ ಮುಖ್ಯ ಕಾರ್ಯವೂ ಜನ್ಮೋದ್ದೇಶವೂ ಆದ ಆ ಕಾರ್ಯಗಳಿಗೆ ವಿನಿಯೋಗವಾಗಿ ಮಿಕ್ಕ ತಮ್ಮ ಅವಕಾಶವನ್ನೆಲ್ಲಾ ರಾಜಕೀಯ ವಿಚಾರದಲ್ಲಿ ಸಲಹೆಗಳನ್ನು ಕೊಡುವುದರಲ್ಲೂ, ನೆರೆಹೊರೆಯವರಿಗೆ ಪ್ರಯೋಜನಕರವಾದ ಸಾಮಾಜಿಕ ಕಾರ್ಯಗಳಲ್ಲಿ ಸಹಕರಿಸುವುದರಲ್ಲೂ ಕಳೆಯುತ್ತಿದ್ದರು.

ಕಾಲದ ಬೆಲೆಯನ್ನು ತಿಳಿದು, ಅದನ್ನು ಉತ್ತಮ ರೀತಿಯಿಂದ ಉಪಯೋಗಿಸಿಕೊಳ್ಳುವವರಾರೋ ಅವರಿಂದಲೇ ಲೋಕದಲ್ಲಿ ಅನೇಕ ಕೆಲಸಗಳು ನಡೆಯಲು ಅವಕಾಶವಿರುವುದು. ತಾತಾಯವರು, ಕಾಲದ ಬೆಲೆಯನ್ನು ಚೆನ್ನಾಗಿ ತಿಳಿದಿದ್ದು ಅದನ್ನು ಸ್ವಲ್ಪವೂ ಪೋಲುಮಾಡದಂತೆ ಉಪಯೋಗಿಸಿಕೊಳ್ಳುವುದರಲ್ಲಿ ಬಹು ಜಾಗರೂಕರಾಗಿದ್ದರು. ಒಂದೇ ಸಾರಿ ನಾಲ್ಕಾರು ಕೆಲಸಗಳನ್ನು ಪ್ರಾರಂಭಿಸಿದರೆ, ಸಮರ್ಪಕವಾಗಿ ಯಾವುದನ್ನೂ ಮಾಡಲೂ ಸಾಧ್ಯವಾಗಲಾರದೆಂಬುದು ಅವರಿಗೆ ಚೆನ್ನಾಗಿ ಗೊತ್ತಿತ್ತು. ಒಂದೊಂದು ಸಾರಿ ಒಂದು ಕಾರ್ಯವನ್ನು ಪ್ರಾರಂಭಿಸಿ, ಅದಕ್ಕೆ ಸಂಪೂರ್ಣ ಗಮನಕೊಟ್ಟು, ಅದನ್ನು ಶ್ರದ್ಧೆಯಿಂದ ಪೂರ್ತಿಗೊಳಿಸುತ್ತಿದ್ದುದೇ ಅವರು ಪಡೆದ ಕಾರ್ಯಜಯಕ್ಕೆ ಮೂಲಗುಟ್ಟು. ಯಾವ ವಿಚಾರವನ್ನೂ ಸಾಧಕಬಾಧಕಗಳೊಂದಿಗೆ ಆಮೂಲಾಗ್ರವಾಗಿ ವಿಚಾರಿಸಿ ತರುವಾಯ ಆ ಕೆಲಸವನ್ನು ಪ್ರಾರಂಭಿಸುವುದು ಅವರ ಪದ್ಧತಿಯಾಗಿತ್ತು. ಅವರಿಗೆ ಕೇವಲ ಹತ್ತಿಯ ಕೈಗಾರಿಕೆಯೊಂದರಲ್ಲಿ ಮಾತ್ರವಲ್ಲ! ರೇಷ್ಮೆಯ ಕೈಗಾರಿಕೆಯಲ್ಲೂ ಅತ್ಯಧಿಕ ಪರಿಶ್ರಮವಿತ್ತು. ಬೆಂಗಳೂರಿನಲ್ಲಿ ರೇಷ್ಮೆ ಕೈಗಾರಿಕೆಯ ಪ್ರಯೋಗ ಶಾಲೆಯೊಂದನ್ನಿಟ್ಟು, ಆ ಕೈಗಾರಿಕೆಗೂ ಎಷ್ಟೋಮಟ್ಟಿಗೆ ಉತ್ತೇಜನವನ್ನಿತ್ತರು.

ಅವರು ಪಾಶ್ಚಾತ್ಯ ರಾಜ್ಯಗಳಲ್ಲಿ ಸಂಚರಿಸುವಾಗಲೆಲ್ಲಾ, ಅಲ್ಲಿಯ ಜನರು ಚಟುವಟಿಕೆಯಿಂದ ಕೆಲಸ ಮಾಡಿ, ಕಸವನ್ನೂ ರಸವಾಗಿ ಮಾಡಿ ವಿಶೇಷ ಧನಸಂಗ್ರಹಣ ಮಾಡುತ್ತಿರುವುದನ್ನು ನೋಡಿ ಗುಣಗ್ರಹಣಶೀಲರಾದ ಅವರು ಸಂತೋಷಪಡುತ್ತಿದ್ದರು. ಒಂದಿಗೇ ನಮ್ಮವರ ಸೋಮಾರಿತನ, ಹೇಡಿತನ, ಅವುಗಳಿಂದ ಪ್ರಾಪ್ತವಾದ ಒಡತನ ಮುಂತಾದುವುಗಳನ್ನು ನೋಡಿ ಮರುಗುತ್ತಲೂ ಇದ್ದರು. ಜಪಾನ್ ದೇಶೀಯರಂತೆ ಲಾಭಕರವಾದ ಅನೇಕ ಬಗೆಯ ಕೈಗಾರಿಕೆಗಳಲ್ಲಿ ತೊಡಗಬೇಕೆಂದು ತಮ್ಮ ದೇಶೀಯ ವರ್ತಕರಿಗೆ ಪದೇ ಪದೇ ಬುದ್ಧಿ ಹೇಳುತ್ತಿದ್ದರು. ನಮ್ಮ ರೈತರೂ ಇತರ ದೇಶಗಳ ರೈತರಂತೆ ವಿದ್ಯಾವಂತರಾಗಿ ಸುಧಾರಿಸಿದ ನವೀನ ವಿಧಾನಗಳಿಂದ ವ್ಯವಸಾಯ ಕ್ರಮವನ್ನು ಉತ್ತಮಗೊಳಿಸಿಕೊಳ್ಳಬೇಕೆಂಬುದು ಅವರ ಆಶಯವಾಗಿದ್ದಿತು. ಅವರು ತೋಟ—ಉದ್ಯಾನ—ಹೂಗಿಡಗಳ ಬೆಳೆವಣಿಗೆಯಲ್ಲೂ ವಿಶೇಷ ಆಸಕ್ತರಾಗಿದ್ದರು. ದೇಶವಿದೇಶಗಳ ಸಂಚಾರದಲ್ಲಿ ಕಣ್ಣಿಗೆ ಬಿದ್ದ

ನವೀನ ವೃಕ್ಷಜಾತಿಗಳನ್ನೂ, ಗಿಡಬಳ್ಳಿಗಳನ್ನೂ ತಂದು, ಸ್ವಗ್ರಾಮವಾದ ನವಸಾರಿಯಲ್ಲಿ ಮಾಡಿಸಿದ್ದ ತಮ್ಮ ಸ್ವಂತ ಉದ್ಯಾನದಲ್ಲಿಟ್ಟು ಅಕ್ಕರೆಯಿಂದ ಬೆಳೆಸುತ್ತಿದ್ದರು

ಸಾಮಾಜಿಕ ವಿಚಾರಗಳಲ್ಲಿ ಅವರ ಮುಖ್ಯವಾದ ಗಮನವನ್ನೆಳೆದುದು ನಮ್ಮ ಜನಸಾಮಾನ್ಯದಲ್ಲಿ ನೆಲೆಸಿದ್ದ ಬಡತನ ಅದಕ್ಕೆ ಆ ಜನರಲ್ಲಿ ರೂಢಮೂಲವಾಗಿದ್ದ ಅವಿವೇಕ, ಕುಡಿತ, ವಿದ್ಯಾವಿಹೀನತೆ, ಸೋಮಾರಿತನಗಳೇ ಕಾರಣವೆಂಬುದೂ ಅವುಗಳನ್ನು ನೀಗಿಸಿ ಜನಸಾಮಾನ್ಯರು ಚಟುವಟಿಕೆಯಿಂದ ಕಾರ್ಯೋನ್ಮುಖರಾಗುವಿಕೆಯೇ ಬಡತನವನ್ನು ಓಡಿಸುವ ಪ್ರಥಮೋಪಾಯವೆಂಬುದೂ ಅವರ ಮುಖ್ಯಾಭಿಪ್ರಾಯವಾಗಿದ್ದಿತು. ಹೊಟ್ಟೆಗಿಲ್ಲದ ಬಡವರೂ, ಕೂಲಿಯವರೂ ಮದ್ಯಪಾನ ಮಾಡುತ್ತಿದ್ದುದನ್ನು ಎಂದಾದರೂ ಕಂಡರೆ, ಅದನ್ನು ತೀವ್ರವಾಗಿ ನಿಷೇಧಿಸಿ ಹಾಗೆ ಮಾಡಬಾರದೆಂದು ಬುದ್ಧಿ ಹೇಳುತ್ತಿದ್ದರು ಅಲ್ಲದೆ ಮದ್ಯಪಾನ ನಿವಾರಣೆಗಾಗಿ ಯಾರಾದರೂ ಕೆಲಸ ಮಾಡುತ್ತೇವೆಂದರೆ ಅವರಿಗೆ ಧಾರಾಳವಾಗಿ ಧನಸಹಾಯ ಮಾಡುತ್ತಿದ್ದರು.

ಶ್ರೀ ತಾತಾಯವರು ಅನೇಕ ದೇಶಗಳಲ್ಲಿ ಸಂಚರಿಸಿ, ಸುಪ್ರಸಿದ್ಧರಾದ ಅನೇಕರೊಂದಿಗೆ ಸಂಭಾಷಿಸಿದ್ದರು ಯಾವುದೊಂದು ದೇಶವೂ ಸ್ವಾತಂತ್ರ್ಯವನ್ನು ಹೊಂದಿದರಲ್ಲದೆ, ಅಭಿವೃದ್ಧಿಯಾಗಲಾರದೆಂಬುದು ಅವರ ಮತವಾಗಿತ್ತು ಸ್ವತಃ ಕಾಯಕಷ್ಟದಿಂದ ಸ್ವಾತಂತ್ರ್ಯವನ್ನು ಪಡೆದವರಾಗಿದ್ದುದರಿಂದ ಅವರಲ್ಲಿ ದಾಸ್ಯಮನೋಭಾವವಿರಲಿಲ್ಲ. ಅವರು ಯಾರಿಗೂ ಬೆದರಿ ತಮ್ಮ ಮನಸ್ಸಾಕ್ಷಿಗೆ ವಿರೋಧವಾಗಿ ನಡೆಯಬೇಕಾದ—ನುಡಿಯಬೇಕಾದ ಆವಶ್ಯಕವಿರಲಿಲ್ಲ. ಯಾವುದಾದರೊಂದು ಕೆಲಸವು ತಪ್ಪೆಂದು ತೋರಿ ಅದನ್ನು ಖಂಡಿಸಬೇಕೆನ್ನಿಸಿದರೆ, ನಿರ್ದಾಕ್ಷಿಣ್ಯವಾಗಿ ಖಂಡಿಸುತ್ತಿದ್ದರು ತಮ್ಮಲ್ಲಿ ಕಾರ್ಯದಕ್ಷತೆ ಸಹನೆ, ಧೈರ್ಯ, ಔದಾರ್ಯ ಮುಂತಾದ ಸದ್ಗುಣಗಳಿದ್ದುದರಿಂದ ಬೇರೊಬ್ಬನಲ್ಲಿರುವ ಅಂತಹ ಗುಣಗಳನ್ನು ಮೆಚ್ಚಿ ಪುರಸ್ಕರಿಸಲೂ ಅವರಿಗೆ ಸಾಧ್ಯವಿದ್ದಿತು.

ಅವರ ಚೈತನ್ಯ ಉತ್ಸಾಹಾದಿಗಳು ಇನ್ನೂ ಯೌವನಾವಸ್ಥೆಯಲ್ಲಿದ್ದು ಉಜ್ವಲ ರೀತಿಯಿಂದ ಪ್ರಕಾಶಿಸುತ್ತಿದ್ದರೂ ೬೫ ವರ್ಷಗಳ ದೀರ್ಘಪರಿಶ್ರಮದಿಂದ ಅವರ ಭೌತಿಕ ದೇಹವು ಗಳಿತವಾಯಿತು. ಕೊನೆಗೆ ರೋಗವು

ದೇಹವನ್ನಾಕ್ರಮಿಸಿತು. ವೈದ್ಯರು ಅದರ ಪರಿಹಾರಕ್ಕಾಗಿ ಹವೆಯನ್ನು ಬದಲಾಯಿಸಬೇಕೆಂದು ಸಲಹೆಕೊಟ್ಟರು. ಅದನ್ನನುಸರಿಸಿ ಅವರು ೧೯೦೪ ನೆಯ ಜನವರಿಯಲ್ಲಿ ಶೀಮೆಗೆ ಪ್ರಯಾಣಮಾಡಿದರು. ವಿಧಿಯ ವಿಚಿತ್ರ ಪ್ರಸಂಗವನ್ನು ಅರಿತವರಾರು! ಅಲ್ಲಿಗೆ ಹೋದ ಎರಡು ತಿಂಗಳೊಳಗಾಗಿ ಅವರ ಪತ್ನಿಯವರು ಕಾಲಾಧೀನರಾದರು. ದೇಹದಲ್ಲಿದ್ದ ರೋಗ ಬಾಧೆಯೊಂದಿಗೆ ಪ್ರಿಯಪತ್ನೀವಿಯೋಗ ಚಿಂತೆಯೂ ಸೇರಿ ಅವರ ಮನಸ್ಸನ್ನು ವಿಶೇಷವಾಗಿ ಮರ್ದಿಸಿತು. ಕೊನೆಗೆ ದೇಹಧಾರಣವು ಅಸಹನೀಯವಾಗಲು, ತಮ್ಮ ಸಾರ್ಥಕಜೀವಿತದಿಂದ ಭಾರತಮಾತೆಯ ಪುತ್ರಶ್ರೇಷ್ಠರೆನ್ನಿಸಿಕೊಂಡ,—ಮಹನೀಯರಾದ ನಮ್ಮ ಕಥಾನಾಯಕರು, ೧೯೦೪ ನೆಯ ಮೇ ತಿಂಗಳು ೧೯ ನೆಯ ದಿನ ಜರ್ಮನೀ ದೇಶದಲ್ಲಿ ತಮ್ಮ ಭೌತಿಕ ಕಳೇಬರವನ್ನು ತ್ಯಜಿಸಿದರು. ಆಗ ಅವರೊಂದಿಗೇ ಪ್ರಯಾಣಮಾಡಿ, ಮರಣಕಾಲದಲ್ಲಿ ಸಮೀಪದಲ್ಲೇ ಇದ್ದ, ಸರ್ ದೊರಾಬ್ಜೀ ತಾತಾ ಎಂಬ ಅವರ ಜ್ಯೇಷ್ಠ ಕುಮಾರರೂ, ಮಿ|| ರತನ್ ಡಿ. ತಾತಾ ಎಂಬ ಅವರ ಸೋದರರೂ ಅವರ ಮೃತ ದೇಹಕ್ಕೆ ಪಾರ್ಶೀ ಮತಾನುಸಾರವಾಗಿ ಉತ್ತರ ಕ್ರಿಯೆಗಳನ್ನು ನಡೆಯಿಸಿದರು.



## ಉ ಪ ಸಂ ಹಾ ರ



ತಾತಾಯವರ ಮೃತ ವಾರ್ತೆಯು ಭಾರತದೇಶಕ್ಕೆ ತಿಳಿದು, ಅವರ ಸಹಸ್ರಾರು ಮಂದಿ ಸ್ನೇಹಿತರನ್ನೂ—ಅನುಬಂಧಿಗಳನ್ನೂ ವಿಶೇಷ ದುಃಖಕ್ಕೀಡುಮಾಡಿತು. ಬೊಂಬಾಯಿ ಮಹಾ ನಗರದಲ್ಲಿ ಅವರ ಮರಣದಿಂದುಂಟಾದ ದುಃಖಪ್ರದರ್ಶನಕ್ಕಾಗಿ, ಒಂದು ಮಹಾ ಸಭೆಯು ನಡೆಯಿತು. ಅದರಲ್ಲಿ ಆಗ ಗವರ್ನರಾಗಿದ್ದ ಲಾರ್ಡ್ ಲೆಮಿಂಗ್‌ಟನ್‌ರವರೇ ಅಧ್ಯಕ್ಷ ಸ್ಥಾನವನ್ನು ವಹಿಸಿದ್ದರು. ಆ ಸಭೆಯಲ್ಲಿ ಅವರ ಪರಮ ಮಿತ್ರರೂ ಬೊಂಬಾ

ಯಿಯ ಚೀಫ್ ಜಡ್ಜರೂ ಆದ, ಸರ್ ಲಾರೆನ್ಸ್ ಜಂಕಿನ್ಸ್ ಎಂಬ ಆಂಗ್ಲೇಯ ಗೃಹಸ್ಥರು ಭಾಷಣ ಮಾಡಿ, ನಮ್ಮ ಚರಿತ್ರನಾಯಕರಲ್ಲಿ ತಮಗಿದ್ದ ಗೌರವವನ್ನು ವ್ಯಕ್ತಗೊಳಿಸಿದರು. ತಮ್ಮ ಭಾಷಣದಲ್ಲಿ, ಆ ಸುಪ್ರಸಿದ್ಧ ವಕ್ಕ್ಯಗಳು, ತಾತಾಯವರ ದೃಢಚಿತ್ತ, ದೀರ್ಘಪ್ರಯತ್ನ, ಕಷ್ಟಗಳನ್ನೆದುರಿಸಿ ಮುಂದರಿಯುತ್ತಿದ್ದ ಅವರ ಕುಂದದ ಧೈರ್ಯ ಸಾಹಸಗಳು, ಸಾರ್ಥಕ ಕಾರ್ಯಪ್ರಯತ್ನಗಳು, ಅಲ್ಲದ ಅವರ ಸ್ವದೇಶಾಭಿಮಾನ, ಸ್ವಕೀಯರಲ್ಲಿದ್ದ ಪ್ರೇಮ—ಅನುಕಂಪೆಗಳು, ಇವುಗಳನ್ನೂ, ತಮ್ಮ ಜೀವಿತ ಕಾಲವನ್ನೆಲ್ಲಾ ಧಾರೆಯೆರೆದು ಅವರು ಮಾಡಿದ ದೇಶಾಭಿವೃದ್ಧಿಕರವಾದ ಮಹತ್ಕಾರ್ಯಗಳನ್ನೂ, ಮನೋಹರ ವಾಕ್ಯಚಿತ್ರಗಳಿಂದ ಚಿತ್ರಿಸಿದರು. ಪದವಿ ಗೌರವಗಳನ್ನಾಗಲೀ, ಬಿರುದು ಬಹುಮತಿಗಳನ್ನಾಗಲೀ ಅಪೇಕ್ಷಿಸದೆ, ಅಹಂಕಾರವೆಂದರೇನೆಂಬುದನ್ನರಿಯದೆ, ಹಸು ಮಗುವಿನಂತಹ ಸೌಲಭ್ಯ—ಸರಳ ಭಾವಗಳು, ನಿಷ್ಕಲ್ಮಷತೆ, ಪವಿತ್ರ ಪ್ರೇಮ ಮುಂತಾದುವುಗಳಿಂದ ಮಾನವ ಕುಲಭೂಷಣರೆನ್ನಿಸಬಹುದಾದ ಅಂತಹ ಮಹನೀಯರನ್ನು ನೋಡುವುದೇ—ಅವರೊಡನಾಡುವುದೇ ಪರಮಭಾಗ್ಯವೆಂದು ತಮ್ಮ ಭಾಷಣದಲ್ಲಿ ನುಡಿದರು ಅವರಂತೆಯೇ ಮ|| ಬುದ್ರುದ್ದೀನ್ ತಯಾಬ್ಜೀಯವರೂ ನಮ್ಮ ಚರಿತ್ರನಾಯಕರಲ್ಲಿ ತಮ್ಮ ಜಾತೀಯರು ಮಾತ್ರವಲ್ಲದೆ ಸಮಸ್ತ ಕುಲಗಳಿಗೆ ಸೇರಿದ ಎಲ್ಲರ ಮೇಲೂ ಏಕಪ್ರಕಾರವಾಗಿ ಇದ್ದ ವಿಶ್ವಪ್ರೇಮ—ಸರಳಭಾವ ಮುಂತಾದುವುಗಳನ್ನೂ, ಸ್ವದೇಶಾಭಿವೃದ್ಧಿಯ ವಿಷಯದಲ್ಲಿ ಅವರಿಗಿದ್ದ ಅಭಿಲಾಷೆಯನ್ನೂ ವಿಶೇಷ ರೀತಿಯಿಂದ ಪ್ರಶಂಸೆ ಮಾಡಿದರು. ತರುವಾಯ ಅಧ್ಯಕ್ಷರಾದ ಗವರ್ನರವರೂ ತಾತಾಯವರ ಸದ್ಗುಣಗಳನ್ನು ಹೊಗಳಿ, ಅವರು ತಮ್ಮಲ್ಲಿ ಸೇರಿದ ಧನವನ್ನು ಪ್ರಜೋಪಕಾರಕ್ಕೂ ದೇಶಾಭಿವೃದ್ಧಿಗೂ ಉಪಯೋಗಿಸಿ ಹೇಗೆ ಸಾರ್ಥಕಗೊಳಿಸಿದರೆಂಬುದನ್ನು ವಿಶದೀಕರಿಸಿದರು.

ಚಿರಸ್ಮರಣೀಯರಾದ ಅಂತಹ ಮಹನೀಯರಿಗೆ ಯಾವುದಾದರೊಂದು ಬಗೆಯಿಂದ ತಮ್ಮ ಕೃತಜ್ಞತೆಯನ್ನು ತೋರಿಸಿ ತನ್ಮೂಲಕ ಅವರ ಆದರ್ಶವು ತಲೆತಲಾಂತರಗಳಿಗೂ ದೊರೆವಂತೆ ಮಾಡಬೇಕೆಂಬ ಉದ್ದೇಶದಿಂದ ಚಂದಾ ಹಣವನ್ನು ಸೇರಿಸುವ ಪ್ರಸ್ತಾಪವುಂಟಾಗಲು ಒಡನೆ ಐವತ್ತು ಸಹಸ್ರ ರೂಪಾಯಿಗಳು ಸೇರಿದುವು ಆ ದ್ರವ್ಯದಿಂದ ಅವರ ಒಂದು ಭಾವ ಪ್ರತಿ

ಮೆಯನ್ನು ತಯಾರು ಮಾಡಿಸಿದರು. ಆದರ ಪ್ರತಿಷ್ಠೆಯ ಕಾಲದಲ್ಲಿ ಲಾರ್ಡ್ ಓರ್ಕ್ಹ್ಯಾಂ ಎಂಬ ದೊಡ್ಡ ಮನುಷ್ಯರು ಅಧ್ಯಕ್ಷರಾಗಿದ್ದರು. ಆ ಸಂದರ್ಭದಲ್ಲಿ ಅವರ ಸಮೀಪದಲ್ಲೇ ಬಹು ಕಾಲ ವಾಸಿಸಿದ್ದು, ಅವರ ಸದ್ಗುಣಸನ್ನಡತೆಗಳ ವಿಷಯದಲ್ಲಿ ವಿಶೇಷ ಅನುಭವಪಟ್ಟಿದ್ದ ಸರ್ ಫಿರೋಜ್ ಷಹ ಮೆಹತಾಯವರು, ಭಾಷಣ ಮಾಡಿ, ಶ್ರೀ ತಾತಾಯವರ ಅಸಾಮಾನ್ಯ ಯೋಗ್ಯತೆ, ಪ್ರತಿಭಾಶಕ್ತಿ, ಲೋಕೋಪಕಾರತತ್ಪರತೆ, ವ್ಯಾಪಾರ ವಿಷಯದಲ್ಲಿ ಅತ್ಯಾವಶ್ಯಕವಾಗಿರಬೇಕಾದ ಪ್ರಾಮಾಣಿಕತೆ ಮುಂತಾದುವುಗಳನ್ನೆಲ್ಲಾ ವಿಶೇಷವಾಗಿ ಕೊಂಡಾಡಿದರು.

ಶ್ರೀ ಜೇಮ್ಸೆಟ್ಜೀ ತಾತಾಯವರು ಮನಸಾ ಉದ್ದೇಶಗೊಂಡಿದ್ದು, ಅವರ ಸತ್ಪುತ್ರರು ಪ್ರತಿಷ್ಠಿಸಿರುವ ಮೇಲೆ ಉದಾಹೃತವಾದ ಮೂರು ಕಾರ್ಯಗಳೂ ಈಗ ಸಂಪೂರ್ಣ ರೀತಿಯಿಂದ ಕೆಲಸ ಮಾಡುತ್ತಿವೆ. ಸಾಚಿಯಲ್ಲಿ ಅತ್ಯುತ್ತಮವಾದ ಉಕ್ಕು ತಯಾರಾಗುತ್ತಿದೆ. ಬೆಂಗಳೂರಿನಲ್ಲಿರುವ 'ದಿ ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಸೈನ್ಸ್' ವಿದ್ಯಾಲಯದಲ್ಲಿ ಶಾಸ್ತ್ರಪಾಠವೂ ಕ್ರಮವಾಗಿ ನಡೆಯುತ್ತಿದೆ. ಬೊಂಬಾಯಿಯ ಸಮೀಪದ ವಿದ್ಯುಚ್ಛಕ್ತಿ ಕಾರ್ಖಾನೆಯು, 'ತಾತಾ ಹೈಡ್ರೋ ಎಲೆಕ್ಟ್ರಿಕ್ ಪವರ್ ಸಪ್ಲೈ ಕಂಪೆನಿ ಲಿಮಿಟೆಡ್'' ಎಂಬ ಹೆಸರಿನಿಂದ ಉತ್ತಮ ಕಾರ್ಯ ಮಾಡುತ್ತಿದೆ. ಈಚೆಗ ೧೯೨೯ ನೆಯ ಜನವರಿ ೨ ನೆಯ ತಾರೀಖಿನಲ್ಲಿ, ಆಗ ವೈಸರಾಯ್‌ರಾಗಿದ್ದ ಲಾರ್ಡ್ ಛೆಲ್ಮ್ಸ್‌ಫರ್ಡ್‌ರವರು ತಮ್ಮ ಇಷ್ಟಮಿತ್ರರೊಂದಿಗೆ ಸಾಚಿಯ ಉಕ್ಕಿನ ಕಾರ್ಖಾನೆಯನ್ನು ಸಂದರ್ಶಿಸಿ, ಅಲ್ಲಿಯ ಕಾರ್ಯಕ್ರಮಗಳನ್ನು ಕಂಡು ಪರಮಾನಂದಪಟ್ಟರು. ಈಗ್ಗೆ ಎಂಟು ಹತ್ತು ವರ್ಷಗಳ ಕೆಳಗೆ ದುಷ್ಟ ಮೃಗಾವಾಸವಾಗಿದ್ದ ಆ ಅರಣ್ಯ ಪ್ರದೇಶದಲ್ಲಿ ಈಗ ಮನೋಹರ ಕಟ್ಟಡಗಳೂ, ರಸ್ತೆಗಳೂ, ಉದ್ಯಾನಗಳೂ, ಕಾರ್ಖಾನೆಗಳೂ ಕಂಗೊಳಿಸುತ್ತಾ, ಅದು ೪೦—೫೦ ಸಹಸ್ರ ಪ್ರಜಾಸಂಖ್ಯೆಯಿಂದ ಕೂಡಿದ ದಿವ್ಯ ಪಟ್ಟಣವಾಗಿದೆ. ಬೆಂಗಾಡಾಗಿದ್ದ ಆ ಸ್ಥಳವನ್ನು ಹಾಗೆ ರೂಪಾಂತರಗೊಳಿಸಿದುದರಲ್ಲಿ ಶ್ರೀ ತಾತಾಯವರಲ್ಲಿ ತೋರಿ ಬಂದ ದೀರ್ಘದರ್ಶಿತ್ವ, ಅದ್ಭುತ ಬುದ್ಧಿ ಸಾಮರ್ಥ್ಯ, ಮುಂತಾದುವುಗಳನ್ನು ಶ್ಲಾಘಿಸಿ ವೈಸ್‌ರಾಯ್‌ಯವರು, ಆ ನೂತನ ಪಟ್ಟಣವು ಇನ್ನು ಮುಂದೆ ನಮ್ಮ ಚರಿತ್ರನಾಯಕರ

ಹೆಸರಾದ ಜೇಮ್ಸ್ಸೇಟ್ಜೀ ಎಂಬುದನ್ನು ನಿರಂತರವಾಗಿ ಜ್ಞಾಪಿಸುತ್ತಿರುವಂತೆ, ಅದನ್ನು 'ಜೆಮ್ಶೇಡ್ ಪುರ್'' ಎಂಬ ನಾಮಧೇಯದಿಂದ ಕರೆದರು. ಈಚೆಗೆ ತಾತಾಯವರ ತೆಂಗಿನ ಎಣ್ಣೆಯ ಕಾರ್ಖಾನೆಯು ಸ್ಥಾಪಿತವಾದ ಕಾಳೀಮುಟ್ಟಿ ಯೆಂಬ ಸ್ಥಳವೂ 'ತಾತಾ ನಗರ' ವೆಂಬ ಹೆಸರಿನಿಂದ ಪ್ರಸಿದ್ಧವಾಗಿ ಅವರ ಹೆಸರು ಆಚಂದ್ರಾರ್ಕವಾಗಿ ಸ್ಥಿರಗೊಳಿಸಲ್ಪಟ್ಟಿತು.

ಭಾರತಮಾತೆಯ ಸುಪುತ್ರರಲ್ಲೊಬ್ಬರೂ, ಮಹಾ ಪ್ರತಿಭಾಶಾಲಿ ಗಳೂ, ಮಹತ್ಕಾರ್ಯ ಸಾಧಕರೂ, ದಯಾಗುಣ ಪೂರಿತರೂ, ಆದ ನಮ್ಮ ಕಥಾನಾಯಕರ ಚರಿತ್ರೆಯು ಕೊನೆಗಂಡಿತು. ಅವರ ಮಿತ್ರೋತ್ತಮರಾದ ಮೋಲ್ಕಂಡ ಸರ್ ಫಿರೋಜ್‌ಷಹ ಮೆಹತಾಯವರು ಆಂಗ್ಲೇಯ ಭಾಷೆಯಲ್ಲಿ ಅವರ ಚರಿತ್ರೆಯನ್ನು ವಿಸ್ತಾರವಾಗಿ ಬರೆದಿದ್ದಾರೆ. ಆದರೆ ಈ ಚಿಕ್ಕ ಪುಸ್ತಕದ ಮೂಲಕ, ಕನ್ನಡಿಗರಿಗೆ ಆ ಮಹನೀಯರ ಪ್ರಥಮಪರಿಚಯವಾಗಲು ಸಂಶಯವಿಲ್ಲ. ಈ ಪರಿಚಯವು, ಆ ಮಹನೀಯರಲ್ಲಿ ಕಂಡು ಬಂದ ಅವಿರಳ ಕಾರ್ಯತತ್ಪರತೆ, ದೇಶಾಭಿಮಾನ—ಸ್ವಜನಾಭಿಮಾನಗಳು, ಉದಾರತೆ, ಪ್ರಾಮಾಣಿಕತೆ, ಆಡಂಬರರಾಹಿತ್ಯತೆ, ವಿಶ್ವಪ್ರೇಮ, ಲೋಕೋಪಕಾರ ಬುದ್ಧಿ, ಮುಂತಾದ ಸದ್ಗುಣಗಳನ್ನು ನಮ್ಮವರಲ್ಲೂ ನೆಲೆಗೊಳಿಸಲು ಸಹಾಯಕವಾಗಲಿ! ಕನ್ನಡಿಗರೂ ನಮ್ಮ ಕಥಾನಾಯಕರಂತೆ ಮಹತ್ಕಾರ್ಯ ಸಾಧಕರಾಗಲು ಆವಶ್ಯಕವಾದ ಶಕ್ತಿ ಸಾಹಸ ಧೈರ್ಯಸ್ಥೈರ್ಯಗಳನ್ನು ಗಳಿಸಲಿ! ಸರ್ವೇಶ್ವರನು ನಮ್ಮ ಪ್ರಾರ್ಥನೆಯನ್ನು ಅನುಗ್ರಹಿಸಲಿ!

ತಥಾಸ್ತು.



-ॐ ಶ್ರೀರಾಮಸಹಾಯಂ ॐ-

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

**ಮುನ್ನುಡಿ:—**

ಭಾಗವತೋತ್ತಮರಾದ ಶ್ರೀ ಕನಕದಾಸರು, ಕರ್ಣಾಟಕ ಮಾತೆಯ ಪವಿತ್ರಗರ್ಭ ಸಂಭೂತರಾದ ಭಕ್ತಶ್ರೇಷ್ಠರಲ್ಲೊಬ್ಬರು. ಭಗವಂತನು ಮಾನವರಿಗೆ ಅನುಗ್ರಹಿಸುವ ಮಹದ್ಭಾಗ್ಯಗಳಲ್ಲೆಲ್ಲಾ, ತನ್ನ ದಿವ್ಯಸ್ವರೂಪವನ್ನು ಅವರ ಚರ್ಮ ಚಕ್ಷುಗಳಿಗೆ ಗೋಚರವೆನ್ನಿಸುವುದೇ ಸರ್ವಶ್ರೇಷ್ಠವಾದುದೆಂಬುದಕ್ಕೆ ಸಂದೇಹವೇನು? ಅಂತಹ ಮಹದ್ಭಾಗ್ಯವನ್ನು ಪಡೆದ ಪುಣ್ಯಶಾಲಿಗಳು ನಮ್ಮ ಕಥಾನಾಯಕರಾದ ಶ್ರೀ ಕನಕದಾಸರು —

ಶ್ರೀ ಕನಕದಾಸರು ಲೌಕಿಕ ದೃಷ್ಟಿಯಲ್ಲಿ ಶ್ರೇಷ್ಠವಾದುದೆಂದು ಗಣನೀಯವಾಗಿರುವ ದ್ವಿಜ-(ಬ್ರಾಹ್ಮಣ, ಕ್ಷತ್ರಿಯ, ವೈಶ್ಯ) ವರ್ಣಗಳಲ್ಲೊಂದರಲ್ಲಿ ಜನ್ಮವೆತ್ತಿದವರಲ್ಲ ಭಗವನ್ಮಹಿಮೆಯು ವಿಚಿತ್ರವಾದುದಲ್ಲವೆ! ಸರ್ವಶಕ್ತನೂ ಸರ್ವನಿಯಾಮಕನೂ ಆದ ಆ ಜಗದೀಶ್ವರನೆಂಬ ಅಂಗಡಿಕಾರನು, ಜಗದ ಜೀವಿಗಳ ದೇಹಪಾತ್ರೆಗಳನ್ನು ತನಗೆ ಇಷ್ಟಬಂದ ರೀತಿಯಲ್ಲಿ ಉಪಯೋಗಿಸಿಕೊಳ್ಳಬಲ್ಲನು ಸುವರ್ಣ ಪಾತ್ರೆಯಲ್ಲಿ ಸುರೆಯನ್ನೂ— ಮೃಣ್ಮಯ ಪಾತ್ರೆಯಲ್ಲಿ ಸುಧೆಯನ್ನೂ ಅಳೆಯಲು ಆತನು ಸ್ವತಂತ್ರನಿರುವನು ಪರಮಾತ್ಮನ ದೃಷ್ಟಿಯಲ್ಲಿ ಗಣನೀಯವಾಗತಕ್ಕ ವಸ್ತುವು ನಮ್ಮ ಹೊರಗಿನ ಎಲುಬು ತೊಗಲುಗಳ ಕವಚವಾದ ಈ ಸ್ಥೂಲ ದೇಹವಲ್ಲ, ಅಂತರಾತ್ಮವು! ಭಗವಂತನನ್ನು ಒಲಿಸಿಕೊಳ್ಳುವಲ್ಲಿ ಪ್ರಧಾನವಾದುದು ಜಾತಿಯಲ್ಲ-ಮತವಲ್ಲ; ಪಾಂಡಿತ್ಯವಲ್ಲ-ಪ್ರೌಢಿಮೆಯಲ್ಲ, ರೂಪವಲ್ಲ-ಸಂಪತ್ತಲ್ಲ, ಅನನ್ಯಭಕ್ತಿಯೊಂದೇ! ಪರಮಪುರುಷನ ಪಾದಾರವಿಂದಗಳಲ್ಲಿ ಅಚಂಚಲವಾದ ಈ ಭಕ್ತಿಭಾಗ್ಯವನ್ನು ಗಳಿಸಿರುವ ಧನ್ಯಜೀವಿಯು, ಬ್ರಾಹ್ಮಣನಾಗಲಿ-ಅಂತ್ಯಜನಾಗಲಿ, ಅವನು ಉತ್ತಮನೇ! ಬ್ರಾಹ್ಮಣ ಅಂತ್ಯಜಾದಿ ವಿಭಾಗಗಳು ಜೀವನ ಆತ್ಮಿಕ ಬೆಳವಣಿಗೆಗಾಗಿ ಮಹಾಪ್ರಾಜ್ಞರಾದ ಪೂರ್ವಿಕರು ಮಾಡಿಟ್ಟ ಸಾಧನ

ಗಳು. ನಮ್ಮಲ್ಲಿಯ ವರ್ಣವಿಭಾಗಗಳ ಅಂತರಾರ್ಥವನ್ನು ಗ್ರಹಿಸದ ಅಲ್ಪಮತಿಗಳು, ಅವು ಮನುಷ್ಯರಲ್ಲಿ ಒಬ್ಬನನ್ನು ಮೇಲಿರಿಸಿ ಮತ್ತೊಬ್ಬನನ್ನು ಕೆಳಗಿರಿಸಿ—ಒಬ್ಬನನ್ನು ಸ್ವಾಮಿಯನ್ನಾಗಿಟ್ಟು ಮತ್ತೊಬ್ಬನನ್ನು ಸೇವಕನಾಗಿಟ್ಟು ಹೀಗೆ ಸ್ವಾರ್ಥಸಾಧನೋದ್ದೇಶದಿಂದ ಪಕ್ಷಪಾತವನ್ನು ತೋರಿಸಿದ ಕೆಲವಂದಿ ಬ್ರಾಹ್ಮಣರ ಕಾರ್ಯವೆಂದು ಅವರ ವಿಷಯದಲ್ಲಿ ದ್ವೇಷಭಾವವನ್ನು ವಹಿಸುತ್ತಾರೆ ಆದರೆ ಅದು ಹಾಗಲ್ಲ!—

ಶ್ರೀಕೃಷ್ಣಪರಮಾತ್ಮನು ಲೋಕಪೂಜ್ಯವಾದ ಭಗವದ್ಗೀತೆಯಲ್ಲಿ "ಮನುಷ್ಯರ ಗುಣ ಮತ್ತು ಕರ್ಮಗಳನ್ನನುಸರಿಸಿ ಚತುರ್ವರ್ಣಗಳನ್ನು ಸೃಷ್ಟಿಸಿದ್ದೇನೆ" ಎಂದು ಅಪ್ಪಣೆ ಕೊಡಿಸಿರುವನಲ್ಲವೆ? ಪ್ರಪಂಚದಲ್ಲಿ ಮನುಷ್ಯನು ಅವಲಂಬಿಸುವ ಕರ್ಮವನ್ನನುಸರಿಸಿಯೇ ಅವನ ಗುಣಸ್ವಭಾವಗಳು ಏರ್ಪಡುವುವು ಪರಹಿಂಸೆ, ಮದ್ಯಪಾನ, ವಿಕ್ರಯ ಮುಂತಾದ ವೃತ್ತಿಗಳಲ್ಲಿ ತೊಡಗುವ ಪ್ರಪಷನಿಗೆ, ಅವನ ಆ ಕರ್ಮದ ನಿಕಟ ಸಂಬಂಧದಿಂದ ಅತಿಶಯ ತಾಮಸಸ್ವಭಾವವೇ ಪ್ರಾಪ್ತಿಸುವುದು. ಧನಧಾನ್ಯ ವೃತ್ತಿಕ್ಷೇತ್ರಗಳಲ್ಲಿ ತಗುಲಿದ ಮನಸ್ಸುಳ್ಳವನಿಗೆ, ಅವುಗಳ ಲಾಭದಿಂದ ಸುಖವೂ ಶಾಂತಿಯೂ, ನಷ್ಟದಿಂದ ದುಃಖವೂ ಲೋಭ ಮೋಹಗಳೂ ಹೀಗೆ ತಾಮಸ ರಾಜಸ ಸ್ವಭಾವಗಳು ತಪ್ಪದೆ ಪ್ರಾಪ್ತಿಸುವುವು. ಆಯುಧ ಹಸ್ತನಾಗಿ ರಕ್ತಾರುಣ ಲೋಚನನಾಗಿ, ಸದಾ ಶತ್ರುದಮನದಲ್ಲೇ ಉದ್ಯುಕ್ತನಾಗಿರಬೇಕಾದವನಿಗೆ ಕ್ರೋಧ ಸಂತಾಪ ಮದ ಮಾತ್ಸರ್ಯಾದಿಗಳ ಉಲ್ಬಣತೆಯಿಂದ ಅತಿಶಯ ರಾಜಸ ಸ್ವಭಾವವು ಪ್ರಬಲವಾಗಿರತಕ್ಕದ್ದೂ ಸ್ವಾಭಾವಿಕವೇ ಅಲ್ಲವೆ? ಅವರಲ್ಲ ವೇದಶಾಸ್ತ್ರ ಪಾರಂಗತನಾಗಿ ಸ್ನಾನ ಸಂಧ್ಯಾ ಅಗ್ನಿಹೋತ್ರ ಪೂಜೆ ಭಜನಾದಿಗಳಲ್ಲಿ ತೊಡಗಿ ನಿರ್ಮಮನೂ, ನಿಷ್ಕಾಮನೂ, ನಿರ್ವೈರಿಯೂ ಆಗಿರುವ ವಿಪ್ರೋತ್ತಮನಲ್ಲಿರಲು ಸಾಧ್ಯವೆನ್ನಿಸುವ ಶುದ್ಧ ಸಾತ್ವಿಕ ಸ್ವಭಾವವು ಹೇಗಿದ್ದೀತು!

ಆದಿ ಕಾಲದಲ್ಲಿ, ಮನುಷ್ಯನ ಗುಣ ಮತ್ತು ಸ್ವಭಾವಗಳನ್ನು ರೂಪಿಸುವುದರಲ್ಲಿ ಮುಖ್ಯ ಸಾಧಕಗಳಾದ ಅವನ ಈ ಪ್ರಾಪಂಚಿಕ ಕರ್ಮಗಳನ್ನನುಸರಿಸಿ ಜಾತಿಗಳುಂಟಾದುವು. ಜನ್ಮದಿಂದ ಜಾತಿಯನ್ನು ನಿರ್ಧರಿಸುವುದು ಅಲ್ಲಿಂದ ಅನುಸರಿಸಿಕೊಂಡು ಬಂದ ಪದ್ಧತಿಯು. ಸ್ಥೂಲದಿಂದ ಆಚೆಗೆ ನೋಡಲು

ಶಕ್ತರಲ್ಲದ ನಮ್ಮ ದೃಷ್ಟಿಯಲ್ಲಿ ಈಗ ಜನ್ಮವೇ ಪ್ರಧಾನವಾಗಿ ತೋರುವುದು ಸಹಜ. ಆದರೆ ಸೂಕ್ಷ್ಮ ವಿಚಾರದಿಂದ ಅದು ತಪ್ಪೆನಿಸುವುದು. ಒಂದು ವೇಳೆ ಜನ್ಮಸ್ಥಳದಿಂದ ಕೀಳೆಂದು ತೋರ್ಪಟ್ಟರೂ ನಮ್ಮ ಕಥಾನಾಯಕರಂತೆ ಪೂರ್ವಕರ್ಮ ಪರಿಪಾಕದಿಂದ ಯಾರು ದುಷ್ಟವೃತ್ತಿ, ದುಷ್ಟಾಹಾರ-ವಿಚಾರಗಳನ್ನು ತ್ಯಜಿಸಿ, ಸಾಧುಸಂಗ ಸದ್ವ್ಯಸನ ಸದಾಚಾರಗಳನ್ನು ಅಭ್ಯಾಸ ಮಾಡುವರೋ ಅವರಲ್ಲಿ ಕ್ರಮವಾಗಿ ಸತ್ಯಶಾಂತತೆ ವಿನಯ ಭೂತದಯೆ ಪರೋಪಕಾರಾದಿ ಸದ್ಗುಣಗಳು ಬೇರೂರುವುವು. ಈ ಗುಣಸ್ವಭಾವಗಳೇ ದೇಹದ ಪಂಚಕೋಶಗಳನ್ನೂ ಶುದ್ಧಿಗೊಳಿಸುವುವು. ಇಂತಹ ಉತ್ತಮ ಗುಣ-ಸ್ವಭಾವಗಳಿಂದಲೇ ಮನುಷ್ಯನಲ್ಲಿ ಅಭಕ್ಷ್ಯ ಭಕ್ಷಣ-ಅಪೇಯ ಪಾನ, ದುರಾಚಾರ ದುರ್ಭಾಷಣಾದಿಗಳೂ ತೊಲಗುವುವು. ಅವನು ಶುದ್ಧನಾಗುವನು —ದೀಪದ ಮೇಲೆ ಮುಚ್ಚಿರುವ ಗಾಜಿನ ಆವರಣವು ಎಷ್ಟೆಷ್ಟು ಮಟ್ಟಿಗೆ ಶುದ್ಧವಾಗಿದ್ದರೆ, ಒಳಗಿರುವ ದೀಪದ ಪ್ರಕಾಶವೂ ಅಷ್ಟಷ್ಟು ಹೆಚ್ಚಾಗಿ ಹೊರಕ್ಕೆ ಹೇಗೆ ಪ್ರಕಟವಾಗುವುದೋ, ಹಾಗೆಯೇ ಪ್ರತಿಯೊಂದು ದೇಹದಲ್ಲೂ ಅಡಗಿರುವ ಅಂತರಾತ್ಮನಿಗೆ ಕೇವಲ ಆವರಣ ಸ್ವರೂಪವಾಗಿರುವ ಈ ಪಾಂಚಭೌತಿಕ ದೇಹವು ಯಾವನಲ್ಲಿ ಎಷ್ಟೆಷ್ಟು ಪವಿತ್ರವಾಗುತ್ತಾ ಹೋಗುವುದೋ, ಅಂತರ್ಯಾಮಿಯಾದ ಸರ್ವೇಶ್ವರನ ಮಹಿಮೆಯೂ ಅವನಲ್ಲಿ ಅಷ್ಟಷ್ಟು ಸ್ಪಷ್ಟವಾಗಿ ಪ್ರಕಟವಾಗತೊಡಗುವುದು. ಯಾರಲ್ಲಿ ಸರ್ವೇಶ್ವರನ ಮಹಿಮೆಯು ಹಾಗೆ ಪ್ರಕಟವಾಗುವುದೋ ಅವರ ಸ್ಥೂಲ ದೇಹವು, ನಮ್ಮ ಬಾಹ್ಯ ದೃಷ್ಟಿಗೆ ಎಷ್ಟು ಅಶುದ್ಧವಾಗಿದ್ದಂತೆ ತೋರುತ್ತಿದ್ದರೂ ಅವರ ಸೂಕ್ಷ್ಮ ದೇಹವು ಭಗವದ್ದೃಷ್ಟಿಯಲ್ಲಿ ಪರಮಪರಿಶುದ್ಧವಾದುದಾಗಿರಲೇ ಬೇಕು. ಅವರ ವೃತ್ತಿಯೂ, ಗುಣಸ್ವಭಾವಗಳೂ ಪವಿತ್ರವಾದುವಾಗಿರಲೇ ಬೇಕು. ಇಲ್ಲದಿದ್ದರೆ ಅವರಲ್ಲಿ ಅಂತಹ ಸಾತ್ವಿಕತೆಯುಂಟಾಗದು. ಗುಣ ಮತ್ತು ಕರ್ಮಗಳ ಸಂಬಂಧವು ಅಷ್ಟು ಬಲವತ್ತರವಾದುದಾಗಿದೆ.

ಪ್ರಪಂಚದಲ್ಲಿ ಈಗ ಪ್ರಾಪ್ತವಾಗಿರುವ ಜೀವನ ಸಂಗ್ರಾಮದ ಪ್ರಕೃತ ಪರಿಸ್ಥಿತಿಯಲ್ಲಿ ಹಿಂದೆ ಏರ್ಪಟ್ಟ ಜಾತಿಕುಲಗಳ ಸಿದ್ಧಾಂತವು ತಲೆಕೆಳಗಾಗಿದೆ. ಜಾತಿಕುಲಗಳಿಗೆ ತಕ್ಕ ವೃತ್ತಿ-ವ್ಯವಹಾರಗಳಾವುವೆಂಬ ವಿಚಾರಕ್ಕೇ ಆಸ್ಪದವಿಲ್ಲದೆ, ಈಗ ಸಕಲ ವರ್ಣಗಳವರೂ ಸಕಲ ವೃತ್ತಿಗಳಿಗೂ ನುಗ್ಗುವ

ಸಂಭವವಾಗಿದೆ. ಶತಮಾನಗಳ ಹಿಂದಿನಿಂದ ನಡೆದು ಬಂದ ನಮ್ಮಲ್ಲಿಯ ರೂಢಿ ಆಚಾರ-ವಿಚಾರಗಳು ಆಚರಣೆಯಲ್ಲಿ ಮುರಿದು ಬೀಳುತ್ತಿವೆ. ಕಾಲದೇಶ ವರ್ತಮಾನಗಳನ್ನನುಸರಿಸಿ ನಡೆಯದಿದ್ದರೆ ಜೀವಿತವೇ ಸಾಗುವಂತಿಲ್ಲದ ಈ ಕಾಲದಲ್ಲಿ, ಆಸ್ತಿಕರು ತಮ್ಮ ಆಚಾರ-ವಿಚಾರಗಳನ್ನೂ, ಜಾತಿ ಮತ ತತ್ವಗಳನ್ನೂ ತಮ್ಮ ತಮ್ಮ ಮನೆಯ ಹೊಸ್ತಿಲೊಳಗಡೆ ಇಟ್ಟುಕೊಂಡು, ಬೇಕಾದ ಹಾಗೆ ಶ್ರದ್ಧಾಭಕ್ತಿಗಳಿಂದ ಆಚರಿಸುತ್ತಾ, ಹೊರಕ್ಕೆ ಹೊರಟು ಎಲ್ಲರೊಂದಿಗೆ ಮಿಳಿತರಾಗಿ ಸಾರ್ವಜನಿಕ ಕಾರ್ಯಗಳಲ್ಲಿ ತೊಡಗುವಾಗ ಪರಸ್ಪರ ಸ್ನೇಹ ಭ್ರಾತೃಭಾವ, ಸರ್ವಸಮದೃಷ್ಟಿ, ನಿಷ್ಕಾಪಟ್ಯ, ನಿಷ್ಕಲ್ಮಷಮನೋಭಾವ ಮುಂತಾದುವುಗಳಿಂದ ವರ್ತಿಸಬೇಕಾಗಿದೆ.

ಇದಂತಿರಲಿ. ಮೇಲ್ಕಂಡಂತೆ ಲೌಕಿಕಕ್ಕೆ ಕೀಳೆನಿಸುವ ಹೀನ ಕುಲದಲ್ಲಿ ಜನಿಸಿದರೂ, ಜನ್ಮಾಂತರೀಯ ಪುಣ್ಯಪರಿಪಾಕದಿಂದ, ಪರಿಶುದ್ಧವಾದ ಅಂತಃಕರಣ, ಪವಿತ್ರವಾದ ದೇಹಮನೋಬುದ್ಧಿಗಳನ್ನು ಗಳಿಸಿ, ಅವುಗಳನ್ನೇ ನಿರಂತರ ಭಗವದ್ಭಜನೆ, ಸಾಧುಸಜ್ಜನಸೇವೆ, ಸನ್ಮಾರ್ಗಾನುವರ್ತನೆಗಳಿಂದ ಅತ್ಯುತ್ತಮಗೊಳಿಸಿ, ಸರ್ವೇಶ್ವರನನ್ನು ಪ್ರತ್ಯಕ್ಷ ಚರ್ಮಚಕ್ಷುಗಳಿಂದ ದರ್ಶನ ಮಾಡಿದ ಧನ್ಯಜೀವಿಯ—ದಾಸಶಿರೋಮಣಿಯ ಈ ಚರಿತ್ರವನ್ನೂ ಆಸ್ತಿಕರಾದ ಕರ್ಣಾಟಕ ಮಹಾಜನರು ಆದರದಿಂದ ಸ್ವೀಕರಿಸಲೆಂದು ಪ್ರಾರ್ಥಿಸುತ್ತೇವೆ

ಬೆಂಗಳೂರು ಸಿಟಿ.
೩೦—೧೧—೧೯೩೬

ಇತಿ ಸುಜನ ವಿಧೇಯ,
ಯಂ. ರಾಮರಾವ್.

ಸುಬೋಧ ಮುದ್ರಣಾಲಯ, ಬೆಂಗಳೂರು ಸಿಟಿ—೩,೦೦೦.—೧೯೩೬.

ಸುಬೋಧ ಕುಸುಮಾಂಜಲಿ ಗ್ರಂಥಮಾಲಾ



ದಾಸವರ್ಯ
# ಶ್ರೀ ಕನಕದಾಸರು

ಶ್ರೀರಾಮಸಹಾಯಂ

ದಾಸವರ್ಯ

ಶ್ರೀ

# ಕನಕದಾಸರು

## ಅಧ್ಯಾಯ ೧ — "ಬೀರೇಗೌಡ"

ಅನಾದಿ ಕಾಲದಿಂದಲೂ, ಸಾಧುಸಂತರ-ಭಕ್ತಭಾಗವತರ ತೌರು ಮನೆಯು, ನಮ್ಮ ಮಾತೃಭೂಮಿಯಾದ ಭಾರತದೇಶವೆಂಬ ವಿಚಾರವು ನಿರ್ವಿವಾದವಾದುದಷ್ಟೆ! ಸಾಧುಗಳೂ ಭಾಗವತರೂ ಇತರ ಮಾನವರಂತೆ ಮಾತೃಗರ್ಭದಿಂದಲೇ ಜನ್ಮವೆತ್ತಿದ್ದರೂ, ರಕ್ತಮಾಂಸಮಯವಾದ ದೇಹಧಾರಿಗಳೇ ಆಗಿದ್ದರೂ, ಧನಕನಕವೃತ್ತಿ ಕ್ಷೇತ್ರಗಳನ್ನು ಉಂಟಾಗಿದ್ದರೂ, ಹೆಂಡಿರು ಮಕ್ಕಳು ಬಂಧು ಬಾಂಧವರೊಂದಿಗೆ ಬೆರೆದಿದ್ದರೂ, ಅವರ ಇಹ ಜೀವಿತವು ಸಾಮಾನ್ಯ ಪ್ರಾಪಂಚಿಕನ ಜೀವಿತಕ್ಕಿಂತಲೂ ಅತ್ಯಂತ ಭಿನ್ನವಾಗಿರುವುದು ಮೇಲ್ಕಂಡ ಎಲ್ಲಾ ಬಗೆಯ ಲೌಕಿಕ ಭೋಗಸಾಮಗ್ರಿಗಳನ್ನು ಗಳಿಸಿದ್ದರೂ ಅವರು ಅವುಗಳ ಬಂಧಕ್ಕೆ ಸಿಲುಕದೆ, ಅವುಗಳ ಮೋಹಪಾಶದಿಂದ ಸುತ್ತಲ್ಪಡದೆ, ಕೇವಲ ನಾಕಿ ರೂಪರೋ ಎಂಬಂತೆ ಸಂಸಾರದಲ್ಲಿ ನಿಸ್ಪೃಹರಾಗಿರುವರು. ನೀರಿನಲ್ಲಿದ್ದರೂ, ತಾವರೆಯ ಎಲೆಯು ಹೇಗೆ ನೀರನ್ನು ಅಂಟಿಸಿಕೊಳ್ಳದಿರುವುದೋ, ಹಾಗೆಯೇ ಅವರೂ ಸಂಸಾರದಲ್ಲಿದ್ದರೂ ಅದರಿಂದ ಅಂಟದೆ ಬೇರೆಯಾಗಿರುವರು ಸಂಸಾರದಲ್ಲಿ ಪ್ರಾಪ್ತವಾಗುವ ಸುಖ ಸಂತೋಷಗಳಿಗೆ ಅವರು ಹಿಗ್ಗಿ ಮೈಮರೆಯರು, ಕಷ್ಟಸಂಕಟಗಳಿಗೂ-ದುಃಖದ ಸ್ಥಿತಿಗಳಿಗೂ ತಗ್ಗಿ-ನೆಲಕ್ಕಿಳಿದು ಹತಾಶರಾಗರು. ಐಶ್ವರ್ಯ ಪದವಿಗಳಿಗೆ ಮರುಳಾಗರು. ದಾರಿದ್ರ್ಯಕ್ಕೆ ಮನಗುಂದರು. ಈ ಎರಡು ಸ್ಥಿತಿಗಳಲ್ಲೂ ಸಮಾಧಾನದಿಂದ ಹೆಚ್ಚು ಕುಂದುಗಳಿಲ್ಲದ-ಉಪ್ಪಿ ತಗ್ಗದ ಮಹಾ ಸಾಗರ

ದಂತೆ ಶಾಂತರಾಗಿರುವರು. ಪಾಮರರಾದ ನಾವೂ ಅವರೂ ಒಂದೇ ಭೂಮಿಯ ಮೇಲೆಯೇ ವಾಸಿಸುತ್ತಿದ್ದರೂ, ಒಂದೇ ಜಲ ವಾಯುಗಳನ್ನು ಸೇವಿಸುತ್ತಿದ್ದರೂ ನಮ್ಮಿಬ್ಬರ ಜೀವಿತದಲ್ಲಿರುವ ವ್ಯತ್ಯಾಸವು, ಜೀವಿತದ ಧ್ಯೇಯ-ಅನುಭವ ಮುಂತಾದುವುಗಳಿಂದ ವ್ಯಕ್ತವಾಗುವುದು

ಸಾಮಾನ್ಯಸ್ಥಿತಿಯ ಮಾನವನು ಆ ಸ್ಥಿತಿಗೆ ಏರಲು ಹಿರಿಯರಿಂದ ಮೂರು ಮಾರ್ಗಗಳು ತೋರಿಸಲ್ಪಟ್ಟಿವೆ ಭಕ್ತಿಮಾರ್ಗ-ಕರ್ಮಮಾರ್ಗ-ಜ್ಞಾನಮಾರ್ಗ ಈ ಮೂರು ಮಾರ್ಗಗಳಲ್ಲಿ ಯಾವುದಾದರೊಂದು, ಉತ್ತಮ ರೀತಿಯಿಂದ ಅನುಸರಿಸಲ್ಪಟ್ಟರೂ, ಮನಸ್ಸು ಪರಿಪಕ್ವವಾಗಿ ಮನುಷ್ಯನು ಮೇಲ್ಕಂಡ ಮುಕ್ತಾವಸ್ಥೆಯನ್ನು ಹೊಂದಲು ಯೋಗ್ಯನಾಗುವನು ಮನಸ್ಸು ಶುದ್ಧವಾಗತಕ್ಕುದೇ ಮುಖ್ಯ ಕರ್ತವ್ಯವು ಮನಸ್ಸು ಮಾತ್ರ ಶುದ್ಧವಾಗಿರದಿದ್ದರೆ ಬಾಹ್ಯ ದೇಹವು ಎಷ್ಟು ಶುದ್ಧವಾಗಿದ್ದರೂ—ಎಷ್ಟು ಸಾರಿ ತೊಳೆಯಲ್ಪಟ್ಟರೂ ಏನೂ ಪ್ರಯೋಜನವಿಲ್ಲ. ಅಶುದ್ಧವಾದ ಮನಸ್ಸಿನಿಂದಲೇ ಬಂಧನವುಂಟಾಗುವುದು. ಕಿಲುಬಿದ ಪಾತ್ರೆಯಲ್ಲಿ ಹಾಕಲ್ಪಟ್ಟರೆ, ಪದಾರ್ಥವು ಎಷ್ಟು ಶುದ್ಧವಾಗಿದ್ದುದಾದರೂ ಹೇಗೆ ಕೆಟ್ಟುಹೋಗುವುದೋ ಹಾಗೆಯೇ, ನಮ್ಮ ಮನಸ್ಸು ಅಶುದ್ಧವಾಗಿದ್ದರೆ ಎಂತಹ [illegible] ವಸ್ತುವೂ ದುಷ್ಟ ರೀತಿಯಿಂದಲೇ ಗೋಚರಿಸುವುದು ಬಾಹ್ಯ ದೇಹಕ್ಕಂಟಿದ ಕೊಳೆಯು ಹೇಗೆ ಜಲ ಸ್ನಾನದಿಂದ ನೀಗಿ ಶುದ್ಧವಾಗುವುದೋ ಮನಸ್ಸಕ್ಕಂಟಿದ ಕೊಳೆಯೂ ಹಾಗೆಯೇ ಭಗವದ್ಭಜನ, ಭಗವತ್ಸೇವೆ, ಭಗವದ್ವಿಷಯ ಚಿಂತನೆ ಮುಂತಾದುವುಗಳಿಂದ ನೀಗಿ ಶುದ್ಧವಾಗುವುದು

ಭಗವದ್ಭಜನೆಯನ್ನಾಗಲೀ, ಭಗವತ್ಸೇವೆಯನ್ನಾಗಲೀ, ಭಗವದ್ವಿಷಯ ಚಿಂತನೆಯನ್ನಾಗಲೀ ಮಾಡಲು, ಮನುಷ್ಯನಿಗೆ ಮೊದಲು ಆ ವಿಷಯದಲ್ಲಿ ಆಸಕ್ತಿಯಿರಬೇಕು. ಆಸಕ್ತಿಯಿಂದ ಪ್ರಾರಂಭಿಸಿದ್ದನ್ನು ಉತ್ಸಾಹದಿಂದ ಮುಂದುವರಿಸುವ ಶ್ರದ್ಧೆಯಿರಬೇಕು. ಹಾಗ ಮುಂದುವರಿಸಲು, ಶ್ರದ್ಧೆಯುಂಟಾಗುವುದಕ್ಕೆ, ತನ್ನ ಭಜನೆ-ಸೇವೆ-ಚಿಂತನೆಗಳಿಗೆ ಕಾರಣವಾದ ವಸ್ತುವಿನಲ್ಲಿ ಪ್ರೀತಿಯಿಲ್ಲದಿದ್ದರೆ ಸಾಧ್ಯವಿಲ್ಲ ಆದುದರಿಂದ ಭಜನೆಗಾಗಲೀ, ಸೇವೆಗಾಗಲೀ, ಚಿಂತನಗಾಗಲೀ, ಆಸಕ್ತಿ ಉತ್ಸಾಹ ಶ್ರದ್ಧೆಗಳೂ ಪ್ರೀತಿಯೂ ಮುಖ್ಯಾವಶ್ಯಕವಾದ ಸಾಧನಗಳು

ಈ ಭಕ್ತಿ ಜ್ಞಾನ ಪ್ರವೃತ್ತಿಗಳು ಮನಸ್ಸಿನ ಮೂರು ಸ್ಥಿತಿಗಳು. ಮನಸ್ಸನ್ನು ಇಷ್ಟು ಮಾತ್ರ ಸಿದ್ಧಗೊಳಿಸಿಕೊಂಡರೆ ಸಾಕು. ತರುವಾಯ ತಾನು ಅನುಸರಿಸುವ ಮಾರ್ಗವು ಭಕ್ತಿಮಾರ್ಗವೋ, ಕರ್ಮಮಾರ್ಗವೋ ಜ್ಞಾನಮಾರ್ಗವೋ ಎಂಬ ವಿಚಾರಕ್ಕಾಗಿ ತೊಂದರೆ ಪಡಬೇಕಾದ್ದಿಲ್ಲ. ಒಂದು ವಸ್ತುವಿನಲ್ಲಿ ಅತಿಶಯ ಪ್ರೀತಿಯಿಲ್ಲದಿದ್ದರೆ, ಅದರ ವಿಷಯದಲ್ಲಿ ಕಾರ್ಯಪ್ರಯತ್ನವು ನಡೆಯದು, ಅದರ ವಸ್ತುಜ್ಞಾನವೂ ಉಂಟಾಗದು. ಆ ವಸ್ತುವಿನ ವಿಷಯವಲ್ಲಿ ಕಾರ್ಯಪ್ರವೃತ್ತಿ ನಡೆಯಿಸಬೇಕೆಂದರೆ, ಅದರ ವಿಷಯ ಜ್ಞಾನವಿದ್ದರಲ್ಲದೆ-ಕೆಲಸ ಮಾಡುವ ವಿಷಯವಲ್ಲಿ ಪ್ರೀತಿಯಿದ್ದರಲ್ಲದೆ ಸಾಧ್ಯವಾಗದು. ಅದರ ವಿಷಯ ಜ್ಞಾನವನ್ನು ಸಂಪಾದಿಸಲು ಆ ವಿಚಾರದಲ್ಲಿ ಪ್ರೇಮವಿದ್ದರಲ್ಲದ, ಅದಕ್ಕಾಗಿ ಕಾರ್ಯಪ್ರಯತ್ನ ಮಾಡಿದರಲ್ಲದೆ ಆಗಲಾರದು. ಹೀಗೆ ಭಕ್ತಿಯೂ-ಕರ್ಮವೂ ಜ್ಞಾನವೂ ಒಂದರೊಡನೊಂದು ಹೊಂದಿಕೊಂಡಿವೆಯಲ್ಲದೆ ಬೇರೆಯಿಲ್ಲ. ಬೀದಿಯಲ್ಲಿ ಹೋಗುತ್ತಿರುವ ಬಾಲಕನೊಬ್ಬನಿಗೆ ಮರದ ಮೇಲಿನ ಮಾವಿನಹಣ್ಣು ದೃಷ್ಟಿಗೋಚರವಾಗುತ್ತದೆಂದು ಭಾವಿಸೋಣ! ಆ ಹಣ್ಣು ರುಚಿಯಾಗಿಯೂ, ಮಧುರವಾಗಿಯೂ ಇರುವುದೆಂಬ ವಿಷಯ ಜ್ಞಾನವಿಲ್ಲದಿದ್ದರೆ ಅದರ ಪ್ರಾಪ್ತಿಯ ವಿಷಯದಲ್ಲಿ ಅವನಿಗೆ ಪ್ರೀತಿಯುಂಟಾಗದು. ಪ್ರೀತಿಯಿಂದ ಅದನ್ನು ಕಣ್ಣಿಟ್ಟು ನೋಡಿ, ಅದಕ್ಕಾಗಿ ಅಪೇಕ್ಷಿಸುವಷ್ಟು ಕರ್ಮಮಾಡದಿದ್ದರೆ ಅದರ ಪ್ರಾಪ್ತಿಗಾಗಿ ಮರವನ್ನು ಹತ್ತಿ ಅಥವ ಅದನ್ನು ಕಲ್ಲಿನಿಂದ ಹೊಡೆದು ಕೆಳಕ್ಕೆ ಕೆಡಹಲು ಸಾಧ್ಯವಾಗದು. ಅಷ್ಟು ಕಾರ್ಯ ಮಾಡಲಾರದ ಉದಾಸೀನ ವೃತ್ತಿಯವನಿಗೆ ಫಲವೇ ಲಭ್ಯವಾಗದು. ಹೀಗೆ ಪ್ರೀತಿಯಾಗಲೀ-ವಿಷಯಜ್ಞಾನವಾಗಲೀ-ಕಾರ್ಯಪ್ರವೃತ್ತಿಯಾಗಲೀ ಒಂದನ್ನು ಬಿಟ್ಟು ಒಂದು ಇರಲು ಸಾಧ್ಯವಿಲ್ಲ. ಆದುದರಿಂದಲೇ ಈ ಮೂರರಲ್ಲಿ ಯಾವುದೊಂದನ್ನು ವ್ಯಕ್ತವಾಗಿ ಅನುಸರಿಸಬೇಕಾದರೂ, ಅದರಲ್ಲಿ ಮಿಕ್ಕ ಎರಡರ ಅವ್ಯಕ್ತವಾದ ಸಂಬಂಧವು ಇದ್ದೇ ಇರುವುದು.

ಇನ್ನು ಮಾನವನು ಭವಬಂಧವನ್ನು ನೀಗಿಕೊಂಡು ಮುಕ್ತನಾಗುವುದಕ್ಕೆ ಮೇಲ್ಕಂಡ ಮೂರರಲ್ಲಿ ಯಾವುದು ಉತ್ತಮ ಸಾಧನವೆಂಬುದೇ ಮುಖ್ಯ ಪ್ರಶ್ನೆಯು. ಮಾನವನು ಹಾಗೆ ಮುಕ್ತನಾಗಲು ಆರಿಸಿಕೊಳ್ಳುವ

ಭಕ್ತಿ-ಜ್ಞಾನ-ಕರ್ಮಮಾರ್ಗಗಳಲ್ಲಿ ಯಾವುದಾದರೊಂದಕ್ಕೆ ಮೇಲೆ ಹೇಳಿದಂತೆ ಮಿಕ್ಕ ಎರಡರ ಸಂಬಂಧವಿದ್ದರೂ ಆ ಮೂರರಲ್ಲಿ ಯಾವುದರ ವಿಷಯದಲ್ಲಿ ಸಾಧಕನ ಹೆಚ್ಚಾದ ಮನಃಪ್ರವೃತ್ತಿಯಿರುವುದೋ ಆ ಮಾರ್ಗದ ಹೆಸರೇ ಅದಕ್ಕೆ ಕೊಡಲ್ಪಟ್ಟು ಮಿಕ್ಕ ಎರಡೂ ಅದಕ್ಕೆ ಅಂಗಭೂತಗಳಾಗಿರುವುವು. ದೈವಪ್ರಾಪ್ತಿಗಾಗಿ ಹೆಣಗಾಡುವಲ್ಲಿ ಕೇವಲ ಭಜನೆ ಪ್ರಾರ್ಥನೆ ಸ್ತೋತ್ರಪಠನೆ ಮುಂತಾದುವುಗಳಲ್ಲೇ ಮಗ್ನನಾಗಿದ್ದು ಹಂಬಲಿಸುವವನು ಭಕ್ತಿಮಾರ್ಗಗಾಮಿಯಾಗುವನು. ಭಜನೆ ಪ್ರಾರ್ಥನೆಗಳನ್ನು ಗಮನಿಸದೆ ಒಂದೇ ಸಾರಿಗೆ ಕರ್ಮರಂಗಕ್ಕೆ ನುಗ್ಗಿ ಭಗವಂತನಿಗೆ ಪ್ರಿಯಕರವಾದ ಧ್ಯಾನ ಸಂಧ್ಯಾದ್ಯನುಷ್ಠಾನಗಳು-ಯಜ್ಞಯಾಗಾದಿಗಳು ಅಥವ ನಿಷ್ಕಾಮ ಭಾವದಿಂದ ಭೂತದಯೆ ಪರೋಪಕಾರಕಾರ್ಯ ಮುಂತಾದುವುಗಳಲ್ಲಿ ತೊಡಗುವವನು ಕರ್ಮಮಾರ್ಗಗಾಮಿಯಾಗುವನು ಅದನ್ನೂ ಬಿಟ್ಟು. ಭಗವಂತನ ಅನಂತ ಗುಣಗಳು ಅನಂತ ಮಹಿಮೆಗಳು ಸೃಷ್ಟಿ ಚಮತ್ಕೃತಿ, ಆತನ ಅದ್ಭುತ ಸಾಮರ್ಥ್ಯ ಮುಂತಾದುವುಗಳನ್ನು ಕುರಿತು ಚಿಂತನೆ ಮಾಡತೊಡಗಿ ಅವುಗಳಿಗೆ ಮೂಲಕಾರಣವಾದ ಚೈತನ್ಯವಾವುದೆಂಬು ಹುಡುಕಲಪೇಕ್ಷಿಸುವವನು ಜ್ಞಾನಮಾರ್ಗಗಾಮಿಯಾಗುವನು. ಆದರೆ ಮುಖ್ಯವಾಗಿ ಒಂದು ಮಾರ್ಗವನ್ನು ಅನುಸರಿಸಿದವನು ಮಿಕ್ಕ ಎರಡರ ಸಂಬಂಧವನ್ನು ಬಿಡಲು ಸಾಧ್ಯವಿಲ್ಲವೆಂಬುದನ್ನು ಮಾತ್ರ ಮರೆಯಬಾರದು.

ಹೀಗೆ ಮೇಲ್ಕಂಡ ಮೂರು ಮಾರ್ಗಗಳೂ ಒಂದರೊಡನೊಂದು ಸಂಬಂಧಿಸಿದ್ದರೂ ಅವುಗಳಲ್ಲಿ ಯಾವುದೊಂದನ್ನು ಮುಖ್ಯವಾಗಿ ಕೈಕೊಳ್ಳುವಲ್ಲಿ ಸಾಧಕನ ಮನಶ್ಶಕ್ತಿಯ ಪರೀಕ್ಷೆಯಾಗುತ್ತದೆ. ಹೆಚ್ಚು ವಿಚಾರ ಮನಸ್ಥಿತಿಯುಳ್ಳವನಿಗೆ ಪ್ರಾರ್ಥನೆ ಸ್ತೋತ್ರಗಳೆಂದರಾಗಲೀ-ಸೇವೆಯೆಂದರಾಗಲೀ ಅಷ್ಟುಮಟ್ಟಿಗೆ ಒಪ್ಪದು. ಅತಿಶಯ ಉತ್ಸಾಹ-ಸಾಹಸಾದಿಗಳುಳ್ಳವನು, ಯಾವ ಕಾರ್ಯವನ್ನೂ ಮಾಡದೆ ಸುಮ್ಮನೆ ಕುಳಿತು ಆಕಾಶವನ್ನು ನೋಡುತ್ತಾ ವಿಚಾರ ಮಾಡುತ್ತಿರುವುದನ್ನಾಗಲೀ-ಅಥವ ಬಾಯಿ ನೋಸೆತ್ತುವಂತೆ ಮಾಡುವ ಸ್ತೋತ್ರಪಾಠವನ್ನಾಗಲೀ-ಸುಮ್ಮನೆ ತಾಳವನ್ನು ಹೊಡೆದುಕೊಂಡು ಮಾಡುವ ಭಜನೆಯನ್ನಾಗಲೀ ಒಪ್ಪನು. ಹಾಗಲ್ಲದೆ, ವಿಚಾರ ಶಕ್ತಿಯಲ್ಲಾಗಲೀ-ಉತ್ಸಾಹ ಸಾಹಸಾದಿಗಳಲ್ಲಿಯಾಗಲೀ ಹೆಚ್ಚು ಚಲನವಲನಗಳನ್ನು

ಹೊಂದದೆ ಕೇವಲ ಹಸುಮಗುವಿನಂತಿರುವ ಮನಸ್ಸಿನವರಿಗೆ ಮಿಕ್ಕ ಎರಡೂ
ಒಪ್ಪದೆ ತಮಗೆ ಇಷ್ಟವಾದ ವಸ್ತುವನ್ನು ಕಂಡೊಡನೆ ಅಥವ ಆ ವಸ್ತುವು
ಸ್ಮರಣೆಗೆ ಬಂದೊಡನೆ ಕಣ್ಣುಗಳಿಂದ ಜಲವು ಸುರಿಯುತ್ತೊಡಗಿ-ಹೃದಯವು
ಕರಗಿ ರೋಮಾಂಚವುಂಟಾಗಿ ಮೈಮರೆವ ಸ್ಥಿತಿಯು ಪ್ರಾಪ್ತಿಸುವದು ಹೀಗೆ
ಭಕ್ತಿ ಕರ್ಮ ಜ್ಞಾನ ಮಾರ್ಗಗಳು, ಕ್ರಮವಾಗಿ, ತಾಯಿಯು ಕಂಕುಳನ್ನು
ಬಿಟ್ಟು ಕೆಳಗಿಳಿದು ಅಂಬೆಗಾಲಿಡಲೂ ಬಾರದ ಹಸುಳೆಯಂತೆ-ಅಂಬೆಗಾಲಿಟ್ಟು
ತಪ್ಪು ಹೆಜ್ಜೆಗಳಿಂದ ಎದ್ದು ಬಿದ್ದು ನಡೆದಾಡಲು ತೊಡಗುವ ಮಗುವಿನಂತೆ,
ಮತ್ತು ಹೊರಗೆ ತಿರುಗಾಡಿ ತನಗೆ ಇಷ್ಟ ಬಂದ ಕೆಲಸಗಳನ್ನು ಮತ್ತೊಬ್ಬರ
ಸಹಾಯವಿಲ್ಲದೆ ಮಾಡಿಕೊಳ್ಳಲಾಶಿಸುವ ಬಾಲಕನಂತೆ ಇರುವುವೆಂದರೆ ಅದು
ತಪ್ಪಾಗದು!—

ಈಗ ಮೇಲ್ಕಂಡ ಮೂರು ಮಾರ್ಗಗಳಲ್ಲಿ ಯಾವುದು ಕಷ್ಟಸಾಧ್ಯವಾದುದು ಮತ್ತಾವುದು ನಿರಪಾಯಕಾರಿಯಾದುದು ಎಂಬುದನ್ನು ವಿಚಾರಿಸಬೇಕಾಗಿದೆ. ಯಾರ ಸಹಾಯದ ಅಪೇಕ್ಷೆಯೂ ಇಲ್ಲದ ತನ್ನ ಮನ ಬಂದ ಕೆಲಸಗಳಲ್ಲಿ ತೊಡಗಲು ಇಷ್ಟಪಡುವ ಬಾಲಕನಿಗೆ ಒಂದೊಂದು ವೇಳೆ ಅಪಾಯ ಉಂಟಾಗತಕ್ಕದ್ದೂ, ಹಾಗೆ ಅಪಾಯವುಂಟಾದರೂ ಅವನು ಅದನ್ನು ಅಳದೆ-ಮೊರೆಯಿಡದೆ ಎದ್ದು ಬಿದ್ದು ನೋವಾದರೂ ಹಂಬಲಿಸದೆ ಅನುಭವಿಸಬೇಕಾದುದೂ ತಪ್ಪದು. ಜ್ಞಾನ ಮಾರ್ಗವನ್ನು ಅನುಸರಿಸುವವನ ಸ್ಥಿತಿಯು ಇಂಥದು ಅದಕ್ಕೆ [illegible] ಶರೀರಬುದ್ಧಿಗಳು ಉತ್ಕೃಷ್ಟ ಸ್ಥಿತಿಯಲ್ಲಿರಬೇಕು. ಅವನು ಆಹಾರವಿಹಾರಾದಿಗಳಲ್ಲಿ ನಿಯಮನಿಷ್ಠೆಗಳನ್ನುಳ್ಳವನಾಗಿರಬೇಕು. ಇಂದ್ರಿಯಗಳ ಚಾಪಲ್ಯಕ್ಕೆ ಒಳಪಡದಂತೆ ಜಾಗರೂಕನಾಗಿರಬೇಕು. ಹಾಗಿದ್ದರೂ ಸ್ವಲ್ಪ ಹೆಚ್ಚು ಕಡಮೆಯಾದರೂ ಅದಕ್ಕಾಗಿ ಬಹು ತೊಂದರೆ ಪಡಬೇಕಾದುದು ತಪ್ಪದು. ಅಂಬೆಗಾಲಿಟ್ಟು ಎದ್ದು ಬಿದ್ದು ನಡೆದಾಡಲು ಯತ್ನಿಸುವ ಮಗುವು ಸಾಧ್ಯವಿದ್ದಷ್ಟು ಹೊತ್ತು ಆಡುತ್ತಿರುವುದು. ಬೇಸರವಾದಾಗಲಾಗಲಿ ಅಥವಾ ತನಗೆ ಬೇಕಾದ ವಸ್ತುವು ಸಿಕ್ಕದಿದ್ದರಾಗಲೀ-ಹೊಸ್ತಿಲು ಮುಂತಾದುವುಗಳನ್ನು ದಾಟಲು ಬಾರದಿದ್ದರಾಗಲೀ ಅಳುವುದು. ಒಡನೆ ತಾಯಿಯು ಬಂದು ಅದರ ಇಷ್ಟವನ್ನು ನೆರವೇರಿಸಿ, ಭುಜವನ್ನು ತಟ್ಟಿ ಆದರಿಸಿ, ಪುನಃ ಆಡಲು ಬಿಟ್ಟು ಹೊರಟುಹೋಗುವಳು

ಮಗುವೂ ನಗುಮುಖದಿಂದ ಪುನಃ ಆಡತೊಡಗುವುದು ಕರ್ಮಮಾರ್ಗ ಗಾಮಿಯ ಸ್ಥಿತಿಯು ಹೀಗಿರುವುದು ಅವನು ತನ್ನ ಕೈಯಲ್ಲಿನ ಕರ್ಮದಲ್ಲಿ, ಅಂಟದೆ-ಅಳುಕದೆ ಕೇವಲ ಲೀಲೆಗಾಗಿ ಆಟದಲ್ಲಿ ತೊಡಗುವ ಮಗುವಿನಂತೆ ಉದ್ಯುಕ್ತನಾಗಿ ಮಾಡತೊಡಗುವನು. ಮಾಡುವನುತಾನು ಎಂಬ ಅಭಿಮ್ನಾನ ಅಹಂಕಾರಗಳಾಗಲೀ ಆ ಕಾರ್ಯದಿಂದ ಇಂತಹ ಫಲಪ್ರಯೋಜನಗಳು ಉಂಟಾಗಬೇಕೆಂಬ ಅಪೇಕ್ಷೆಯಾಗಲೀ ಅವನಿಗಿರದು. ಅದರಲ್ಲಿ ಕಷ್ಟ ಸಂಕಟಗಳು ಪ್ರಾಪ್ತವಾದಾಗ ತನ್ನ ಇಷ್ಟ ದೈವದ ಕಡೆ ತಿರುಗಿ, ತನ್ನ ಕುಂದು ಕೊರತೆಗಳನ್ನು ನೀಗಿಸಿ, ಹೆಚ್ಚು ಶಕ್ತಿ ಸಾಮರ್ಥ್ಯಗಳನ್ನು ಕರುಣಿಸಬೇಕೆಂದು ಮೊರೆಯಿಡುವನು, ಇಷ್ಟ ದೈವದ ಅನುಗ್ರಹದಿಂದಲೋ ಎಂಬಂತೆ ಒಡನೆ ಅವನ ಮನಸ್ಸು ತಿಳಿವಾಗುವುದು ನೂತನ ಮಾರ್ಗಗಳು ಗೋಚರಿಸುವುವು ನೂತನೋತ್ಸಾಹ ವುಂಟಾಗುವುದು. ನಿರಾಶೆಯು ದೂರವಾಗುವುದು ಹಾಗೆ ಒಂದೊಂದು ಸಾರಿಯೂ ತನ್ನ ಇಷ್ಟ ದೈವದಲ್ಲಿ ನಂಬಿಕೆಯು ಸ್ಥಿರಗೊಳ್ಳುತ್ತಿರಲು ಪುನಃ ತನ್ನ ಮಾರ್ಗದಲ್ಲಿ ಮುಂದರಿಸುವನು.—

ಆದರೆ ಪಸುಕಂದನ ವಿಷಯವು ಸ್ವತಂತ್ರನಾದ ಬಾಲಕನಂತಲ್ಲ ಅಲ್ಲ; ಅಧವ ಆಗಾಗ ತನ್ನ ತಾಯಿಯ ಆಶ್ರಯಗೊಳ್ಳುವ ಮಗುವಿನಂತೂ ಅಲ್ಲ, ಅದು ಮೊದಲಿನಿಂದ ಕೊನೆಯವರೆಗೆ ತಾಯಿಯನ್ನೇ ಆಶ್ರಯಿಸಬೇಕು ಅದು ತಾಯಿಯ ಮಡಲಲ್ಲಿರುವುದು, ತೊಡೆಯಮೇಲೆ ಮಲಗುವುದು, ತನ್ನ ತಾಯಿಯ ಮುಖವನ್ನೇ ಯಾವಾಗಲೂ ನಿಟ್ಟಿಸುತ್ತಿರುವುದು, ಸ್ವಲ್ಪ ಹೊತ್ತು ಕಣ್ಮರೆಯಾದರೂ ಅಳುವುದು, ಬಂದು ಎತ್ತಿ ಮುತ್ತಿಟ್ಟು ಮೊಲೆಯೂಡಿ ಆದರಿಸುವವರೆಗೂ ಸುಮ್ಮನಾಗದು ತಾಯಿಯೂ, ನಿಷ್ಕಲ್ಮಷ ಹೃದಯದ ತನ್ನಾ ಕಂದನ ಅಳುವನ್ನು ಕೇಳಿದೊಡನೆಯೋ ಎಷ್ಟು ಕೆಲಸವಿದ್ದರೂ ಬಿಟ್ಟು ಓಡಿಬರುವಳು, ಎತ್ತಿಕೊಳ್ಳುವಳು, ಎದೆಗಪ್ಪಿಕೊಳ್ಳುವಳು, ಮುದ್ದಿಸುವಳು, ಸ್ತನ್ಯಪಾನ ಮಾಡಿಸುವಳು. ಭಕ್ತನ ಸ್ಥಿತಿಯು ಹೀಗಿರುವುದು ಅವನು ಯಾವುದರ ವಿಷಯದಲ್ಲೂ ಸ್ವಾತಂತ್ರ್ಯವನ್ನು ವಹಿಸನು. ತನಗೆ ಇಂಥದು ಬೇಕೆಂದು ಕೋರಿಕೊಳ್ಳನು ಅವನಿಗೆ ಬೇಕಾದುದು ತನ್ನ ಇಷ್ಟದೈವವೊಂದು, ಅದರ ಪ್ರಾಪ್ತಿಗಾಗಿ ಹಂಬಲಿಸುವನು. ಕಣ್ಣೀರಿಟ್ಟು ಅಳುವನು. ಕಾಣದಿದ್ದರೆ ಕಾತರನಾಗುವನು. ಕಂಡರೆ ಮಹದಾ

ನಂದದಿಂದ ಆನಂದಬಾಷ್ಪಗಳನ್ನು ಸುರಿಸಿ ಪಾದಗಳನ್ನಪ್ಪಿ ಆಲಂಗಿಸುವನು. ಬಾಯ್ದಣಿಯುವಂತೆ ಹೊಗಳುವನು ಕುಣಿಯುವನು. ಪಾರವಿಲ್ಲದ ಆನಂದ ದಿಂದ ಮೈಮರೆದು, ಮಾನಾವಮಾನಗಳೆನ್ನದ, ಸುಖದುಃಖಗಳೆನ್ನದೆ ತನ್ಮ ಯನಾಗಿ, ಆ ಆನಂದದಲ್ಲಿ ಮಗ್ನನಾಗಿ, ತಾಯಿಯೂ ತಂದೆಯೂ ಸರ್ವ ಸ್ವವೂ ಆದ ತನ್ನಾ ಇಷ್ಟದೈವದ ಸಾನ್ನಿಧ್ಯದಲ್ಲಿ ಪ್ರಾಣಗಳನ್ನರ್ಪಿಸಲೂ ಸಿದ್ಧನಾಗಿರುವನು.

ಹೀಗ ಒಂದೇ ಆದ ಈ ಮೂರು ಮಾರ್ಗಗಳೂ ಬೇರೆ ಬೇರೆಯೋ ಎಂಬಂತೆ ಅಷ್ಟು ಸ್ಪಷ್ಟ ರೀತಿಯಿಂದ ಆಚರಿಸಿ ಮಹಾನುಭಾವರನೇಕರು ನಮ್ಮ ದೇಶಮಾತೆಯ ಗರ್ಭದಲ್ಲಿ ಜನನವನ್ನು ಹೊಂದಿದರು. ಅಂಥವರಲ್ಲಿ ಹದಿನಾರನೆಯ ಶತಮಾನದ ಪೂರ್ವಾರ್ಧದಲ್ಲಿ ಜನ್ಮವೆತ್ತಿ ಭಕ್ತಿಮಾರ್ಗವನ್ನು ಅನುಸರಿಸಿ, ಶ್ರೀಮದಾದಿ ಕೇಶವಸ್ವಾಮಿಯ ದಾಸಾನುದಾಸರಾಗಿದ್ದು ಭಕ್ತ ಶ್ರೇಷ್ಠರೆಂದು ಸುಪ್ರಸಿದ್ಧರಾದವರೇ ನಮ್ಮ ಕಥಾನಾಯಕರಾದ ಶ್ರೀ ಕನಕದಾಸರು

ಧಾರವಾಡ ಮಂಡಲ (ಜಿಲ್ಲಾ-ಡಿಸ್ಟ್ರಿಕ್ಟು) ಕ್ಕೆ ಸೇರಿದ ಬಂಕಾಪುರ ವೆಂಬ ತಾಲ್ಲೂಕಿನಲ್ಲಿ ಬಾಡವೆಂಬ ಗ್ರಾಮವೊಂದುಂಟು. ಆ ಹಳ್ಳಿಯಲ್ಲಿ ಅಂಡೆಕುರುಬರ ಕುಲಕ್ಕೆ ಸೇರಿದ ಬೀರೇಗೌಡನೆಂಬ ಒಬ್ಬ ರೈತನಿದ್ದನು. ಆ ಗ್ರಾಮದ ರೈತರಲ್ಲೆಲ್ಲ ಆತನೇ ಮುಖ್ಯಸ್ಥನೂ ನಾತುಬರ ಮನುಷ್ಯನೂ ಆಗಿದ್ದುದರಿಂದ ಆಗಿನ ರಾಜ್ಯ ಪದ್ಧತಿಯಂತೆ 'ನಾಡು' ಎಂಬ ಗ್ರಾಮಸಂಘದ ಅಧ್ಯಕ್ಷ ಪದವಿಯು ನಮ್ಮ ಬೀರೇಗೌಡನಿಗೆ ಲಭ್ಯವಾಯಿತು. ಗೌರವಸ್ಥ ನಾದ ಒಬ್ಬ ಮನುಷ್ಯನನ್ನು ಹಸರು ಹಿಡಿದು ಕರೆಯದೆ 'ಯಜಮಾನರು-ರಾಯರು-'ಸಾಹೇಬರು' ಎಂದು ಕರೆಯುವುದು ಪದ್ಧತಿಯಲ್ಲವೆ! ಹಾಗೆಯೇ ನಾಡಿನ ಸಂಘಾಧ್ಯಕ್ಷನಾದ ಬೀರಪ್ಪನನ್ನು ಆ ಹೆಸರಿನಿಂದಲೇ ಕರೆಯದೆ, 'ನಾಡಗೌಡರು' ಎಂಬ ಗೌರವನಾಮದಿಂದಲೇ ಸಂಬೋಧಿಸುತ್ತಿದ್ದರು. ಬೀರೇಗೌಡನ ಸಹಧರ್ಮಿಣಿಯಾದ ಬಚ್ಚಮ್ಮನೆಂಬಾಕೆಯು ಆ ಮನೆಗೆ ಮಂಗಳಸ್ವರೂಪಳಾಗಿ ಶೋಭಿಸುತ್ತಿದ್ದಳು ಆತನಿಗೆ ದಿನದಿನಕ್ಕೆ ಗ್ರಾಮ ಭೂಮಿಗಳು ಹೆಚ್ಚಾದುವು. ಪಶುಗಳೂ ಆಡುಕುರಿಗಳೂ ಒಂದಕ್ಕೆ ಹತ್ತಾ ದುವು. ವರ್ಷಪ್ರತಿವರ್ಷದಲ್ಲಿ ದವಸಧಾನ್ಯಗಳು ಮನೆಯ ಮೂಲೆ ಮೂಲೆ ಗಳಲ್ಲಿ ರಾಸಿರಾಸಿಯಾಗಿ ಬಂದು ಬೀಳತೊಡಗಿದ್ದುವು.—

ರೈತರಿಗೆ ಧನಸಂಪತ್ತು-ಧಾನ್ಯಸಂಪತ್ತುಗಳಿಗಿಂತಲೂ ಹೆಚ್ಚಾದುದಾವುದು! ಅಂತಹ ಸಂಪತ್ತು ದಿನದಿನಕ್ಕೆ ಹೆಚ್ಚುತ್ತಿದ್ದರೂ ಬೀರೇಗೌಡ-ಬಚ್ಚಿಯರು ಆ ಐಶ್ವರ್ಯಕ್ಕೆ ಮರುಳಾಗಿ ಅಹಂಕಾರಗೊಳ್ಳಲಿಲ್ಲ. ಆ ದಂಪತಿಗಳು ಮಹಾ ಸಾತ್ವಿಕರು, ಧರ್ಮಬುದ್ಧಿಯುಳ್ಳವರು ಪರೋಪಕಾರ ನಿರತರು. ದೇವರಲ್ಲಿ ಭಕ್ತಿಯೂ-ಬ್ರಾಹ್ಮಣರಲ್ಲೂ ಭಕ್ತರಲ್ಲೂ ಗೌರವಾದರಗಳೂ ಅವರಲ್ಲಿ ಎಂದಿಗೂ ಕುಂದದೆ ದಿನದಿನಕ್ಕೆ ಹೆಚ್ಚುತ್ತಲೇ ಇದ್ದುವು ಅವರಿಂದ ಎಂದೂ ಯಾರಿಗೂ ಯಾವ ವಿಧದಿಂದಲೂ ತೊಂದರೆಯಾದುದಿಲ್ಲ ಯಾರೂ ಅವರಿಂದ ಒಂದು ನಿಷ್ಠುರದೋಕ್ತಿಯನ್ನು ಕೇಳಿದೆವೆಂದು ಖೇದಗೊಂಡುದಿಲ್ಲ ಪರಹಿತವೇ ಪರಗತಿಗೆ ಸಾಧನವು ಪರರ ಮನಸ್ಸಿಗೆ ಸಂತೋಷವನ್ನುಂಟುಮಾಡುವಿಕೆಯೇ ನಿಜವಾದ ದೇವರ ಸೇವೆಯು ಎಂದು ನಂಬಿದವರಲ್ಲಿ ಆ ದಂಪತಿಗಳೂ ಒಬ್ಬರು ಹೀಗೆ ಸಂಪತ್ತು ಸೌಭಾಗ್ಯಸಂಪನ್ನನಾಗಿದ್ದರೂ ಸಜ್ಜನನೆನ್ನಿಸಿಕೊಳ್ಳುವ ಸೌಜನ್ಯವೂ ಒದಗಿದ್ದು ಬೀರೇಗೌಡನು ತಮ್ಮ ಕುರುಬರ ಕುಲಕ್ಕೇ ಶಿರೋಭೂಷಣಪ್ರಾಯನಾಗಿದ್ದನು.

ಸಜ್ಜನರಿಗೆ ಪ್ರಭಾನುಗ್ರಹವುಂಟಾಗುವುದು ಸಾವಕಾಶವಾದರೂ ಪ್ರಾಪ್ತವಾದ ಅನುಗ್ರಹವು ಅವರ ಸತ್ವದಿಂದ ಅವಿಚ್ಛಿನ್ನವಾಗಿ ನಡೆಯುವುದು. ಕುಲದಿಂದ ಕುರುಬನಾಗಿದ್ದರೂ ಬೀರೇಗೌಡನು ಅನಾಗರಿಕನಂತಿರಲಿಲ್ಲ ಮಾನಮರ್ಯಾದೆಗಳಿಂದ ಕೂಡಿದ ಮಾತುಕಥೆಗಳೂ, ನಡುನಡತೆಗಳೂ ಸ್ವಲ್ಪ ಕಾಲದಲ್ಲೇ ಆತನನ್ನು ರಾಜಾನುಗ್ರಹಕ್ಕೆ ಪಾತ್ರನನ್ನಾಗಿ ಮಾಡಿದುವು ಕೆಲವು ದಿನಗಳಲ್ಲೇ ಆತನಿಗೆ ಆನೆಗೊಂದಿ ರಾಜರ ಅರಮನೆಯಲ್ಲಿ ಒಂದು ಗಣ್ಯವಾದ ಅಧಿಕಾರ ದೊರೆಯಿತು ಸಿರಿಸಂಪತ್ತುಗಳು ಮೇಲೆ ಮೇಲೆ ಹೆಚ್ಚಿದುವು. ಆತನ ಸದ್ಗುಣಸದಾಚರಣೆಗಳಿಗಾಗಿ ಅತ್ಯಂತ ತೃಪ್ತರಾದ ಬ್ರಹ್ಮತಂತ್ರ ಶ್ರೀನಿವಾಸಾಚಾರ್ಯರೆಂಬ ಬ್ರಾಹ್ಮಣೋತ್ತಮರೊಬ್ಬರು ಆತನಿಗೆ ಶಂಖಚಕ್ರಾದಿ ವೈಷ್ಣವ ಚಿಹ್ನೆಗಳನ್ನು ಧಾರಣ ಮಾಡಿಸಿದರು. ಮುಂದೆ ಬೀರೇಗೌಡನು ವೈಷ್ಣವ ಮತ ಕಟ್ಟಳೆಗಳಂತೆ ನಡವಳಿಕೆಯನ್ನಿಟ್ಟುಕೊಂಡು ತಿರುಪತಿಯ ಶ್ರೀ ವೆಂಕಟರಮಣಸ್ವಾಮಿಯನ್ನೇ ತನ್ನ ಇಷ್ಟದೈವವನ್ನಾಗಿಯೂ ಮನೆದೇವರನ್ನಾಗಿಯೂ ಕೈಕೊಂಡು ಶ್ರದ್ಧಾಭಕ್ತಿಗಳಿಂದ ನಡೆದುಕೊಳ್ಳುತ್ತಿದ್ದನು.



**ಅಧ್ಯಾಯ ೨** **"ಭಗವತ್ಪ್ರಸಾದ"**

ಬೀರೇಗೌಡನಿಗೆ ಈಗ ದನವಿದೆ, ಧಾನ್ಯವಿದೆ, ಹೊಲ ಗದ್ದೆ ಮನೆಗಳಿವೆ, ಐಶ್ವರ್ಯವಿದೆ, ರಾಜಾಶ್ರಯವಿದೆ, ನೆರೆಹೊರೆಯವರಿಂದ-ಊರವರಿಂದ ಮಾನಮರ್ಯಾದೆಗಳು ದೊರೆಯುತ್ತಿವೆ, ಹತ್ತು ಮಂದಿಯಲ್ಲಿ ಸಜ್ಜನನೆಂದು ಹೆಸರುವಾಸಿಯಾಗಿದ್ದಾನೆ, ಅನುಕೂಲಳಾದ ಹೆಂಡತಿ. ಇಷ್ಟಿದ್ದರೂ ಆತನ ಮನಸ್ಸಿಗೆ ಶಾಂತಿಯಿರಲಿಲ್ಲ! ಆತನಿಗೆ ವಯಸ್ಸಾಗುತ್ತಾ ಬಂತು ಬಚ್ಚಮ್ಮನಿಗೂ ತಲೆನರೆಯತೊಡಗಿತು ಅಷ್ಟು ಸಂಪತ್ತಿದ್ದರೂ ವಂಶಕ್ಕೊಬ್ಬ ಮಗನಿಲ್ಲದ ಚಿಂತೆಯೇ ಚಿತೆಯಾಗಿ ಆತನ ದೇಹವನ್ನು ದಹಿಸತೊಡಗಿತು — "ಛೆ, ನನ್ನ ಬಾಳ್ವೆಗ—ಇಷ್ಟಿದ್ದೂ ವಂಶಕ್ಕೊಬ್ಬ ಪುತ್ರನಿಲ್ಲವಲ್ಲ! ಮಕ್ಕಳಿಂದಲೇ ಸಮಸ್ತ ಸೌಭಾಗ್ಯಗಳೂ! ಮನೆಯಲ್ಲಿ ನಡೆವ ಹಬ್ಬಹುಣ್ಣಿಮೆಗಳೂ-ಮದುವೆ ಮುಂಜಿಗಳೂ ಮಕ್ಕಳಿಗಾಗಿಯೇ, ಮತ್ತು ಮಕ್ಕಳಿಂದಲೇ ಶೋಭಿಸುವುವು ಸಂಸಾರಿಗಳಿಗೆ ಎಷ್ಟು ಸಂಪತ್ತಿದ್ದರೂ ಸಂತಾನಸಂಪತ್ತೊಂದು ಇಲ್ಲದಿದ್ದರೆ ಎಲ್ಲವೂ ವ್ಯರ್ಥವೇ ಸರಿ'' ಎಂದುಕೊಂಡನು ದಿನಗಳು ಸಾಗಿದಂತೆಲ್ಲಾ ಅವನ ಯೋಚನೆಯೂ ಅಧಿಕವಾಗತೊಡಗಿತು. ನಿಂತರೆ ಸಮಾಧಾನವಿಲ್ಲ. ಕುಳಿತರೆ ಮನಕ್ಕೆ ಶಾಂತಿಯಿಲ್ಲ. ಯಾವ ಕೆಲಸ ಮಾಡಲೂ ಇಷ್ಟವಿಲ್ಲ. ಯಾರೊಡನೆ ಸೇರಲೂ ಬೇಸರಗೊಳ್ಳುವನು ಹೀಗಾಗಿ ಕೆಲ ದಿನಗಳು ಕಳೆದುವು ಮಧ್ಯೆ ಒಂದು ದಿನ ತನ್ನ ಪತ್ನಿಯಾದ ಬಚ್ಚಿಯನ್ನು ಕುರಿತು —"ಶಾಂತೆ, ನಮಗೆ ವಯಸ್ಸಾಗುತ್ತ ಬಂತು. ಈವರೆಗೆ ಮಕ್ಕಳಾಗಲಿಲ್ಲ ಮಕ್ಕಳಿಲ್ಲದ ಮೇಲೆ ಈ ನಮ್ಮ ಸಿರಿತಾನೆ ಶವಕ್ಕಿಟ್ಟ ಸಕಲಾಭರಣಗಳ ಶೃಂಗಾರದಂತೆ ಏನು ಶೋಭಿಸೀತು? ಜನ್ಮಾಂತರೀಯ ದುಷ್ಕರ್ಮದಿಂದಲೋ ಎಂಬಂತೆ ಮಕ್ಕಳ ಮುದ್ದುಮುಖವನ್ನು ನೋಡುವ ಭಾಗ್ಯವನ್ನು ನನ್ನ ಕಣ್ಣುಗಳು ಪಡೆಯಲಿಲ್ಲ! ಹಸುಕಂದನು ಜೊಲ್ಲು ಸುರಿಸುತ್ತಾ, ಅಂಬೆಗಾಲಿಟ್ಟು ಮುದ್ದು ಮಾತನಾಡುತ್ತಾ ನನ್ನ ಈ ಮನೆಯನ್ನು ಅಂದಗೊಳಿಸುವ ಭಾಗ್ಯವನ್ನು ಪಾಮರರಾದ ನಾವು ಗಳಿಸಲಿಲ್ಲ. ಎಷ್ಟು ಹಲುಬಿ ಪ್ರಯೋಜನವೇನು! ದೇವರದೇವನಾದ ಶ್ರೀ ವೆಂಕಟರಮಣನಲ್ಲದೆ, ನಮ್ಮ ಈ ಕೊರತೆಯನ್ನು ನೀಗಿಸಬಲ್ಲ ಪ್ರಭುವನ್ನು ಅನ್ಯಥಾ ಕಾಣೆನು ಆದುದರಿಂದ ನಡೆ. ಭೂವೈಕುಂಠವೆನಿಸಿದ ತಿರುಪತಿಗೆ ಹೋಗಿ ಸ್ವಾಮಿಯನ್ನು

ಆರಾಧಿಸೋಣ! ಭಕ್ತವತ್ಸಲನಾದ ಆ ದಯಾನಿಧಿಯೇ ಕೃಪೆಯುಂಟಾಗು ವುದೋ ನೋಡೋಣ!'' ಎಂದು ನುಡಿದನು. ತನ್ನ ಗಂಡನ ಯೋಚನೆಯು ಬಚ್ಚಿಗೂ ಸಯುಕ್ತಿಕವೆನಿಸಿತು. ಒಡನೆ ಆ ಸಲಹೆಗೆ ಸಮ್ಮತಿಸಿದಳು. ಯಾತ್ರೆಗೆ ಆವಶ್ಯಕವಾದ ಸಕಲ ಅನುಕೂಲಗಳನ್ನೂ ಸಿದ್ಧಗೊಳಿಸಿಕೊಂಡರು. ತಮ್ಮ ಆಪ್ತೇಷ್ಟರಿಗೆ ತಿಳಿಸಿ ಅನುಮತಿ ಪಡೆದರು. ಮನೆ ಹೊಲಗಳ ವಿಷಯ ದಲ್ಲಿ ಸರಿಯಾದ ವ್ಯವಸ್ಥೆ ಮಾಡಿಟ್ಟರು. ಒಂದಾನೊಂದು ಶುಭದಿನದಲ್ಲಿ ಸ್ನಾನಾದಿಗಳಿಂದ ಶುದ್ಧರಾಗಿ ಗಂಡಹೆಂಡಿರಿಬ್ಬರೂ ಆರಿತಿನ ವಸ್ತ್ರಗಳನ್ನುಟ್ಟು, ದೇವಬ್ರಾಹ್ಮಣರನ್ನು ಪೂಜಿಸಿ, ನಿಷ್ಠೆಯಿಂದ ಯಾತ್ರೆಗೆಂದು ಪ್ರಯಾಣ ಹೊರಟರು. ದಾರಿಯುದ್ದಕ್ಕೂ, ಬೀರೇಗೌಡನು ಶ್ರೀ ವೆಂಕಟರಮಣನ ದಿವ್ಯ ನಾಮವನ್ನೇ, 'ಗೋವಿಂದಾ-ಗೋವಿಂದಾ' ಎಂದು ಸ್ಮರಿಸಿಕೊಳ್ಳುತ್ತಾ, ಆ ಮಹಾಸ್ವಾಮಿಯ ದಿವ್ಯ ಚರಿತ್ರೆಯನ್ನೇ ಹೆಂಡತಿಗೆ ಹೇಳುತ್ತಾ, ಭಕ್ತಿರಸ ವಾರಿಧಿಯಲ್ಲಿ ಮುಳುಗಾಡುತ್ತಾ, ಪ್ರಯಾಣಮಾಡಿ, ತಿರುಪತಿ ಬೆಟ್ಟದ ಬುಡದಲ್ಲಿರುವ ಶ್ರೀ ಗೋವಿಂದರಾಜ ಪಟ್ಟಣವನ್ನು ಸೇರಿದರು. ಅಲ್ಲಿಂದ ಒಂದು ಪ್ರಾತಃಕಾಲ ಸ್ನಾನಮಾಡಿ ಬೆಟ್ಟವನ್ನು ಹತ್ತತೊಡಗಿದರು. ವೆಂಕಟನಾಥನ ಸಾನ್ನಿಧ್ಯದಿಂದ ಪವಿತ್ರವಾದ ಆ ವೆಂಕಟಾಚಲವನ್ನು ಹತ್ತುತ್ತಿದ್ದಂತೆಲ್ಲಾ ಆತನ ಮನೋಭಾವನೆಗಳು ಭಗವನ್ಮಯವಾಗತೊಡಗಿದುವು. ಮೇಲೆ ಮೇಲೆ ಏರುತ್ತಿದ್ದಂತೆ ಹೆಚ್ಚು ಹೆಚ್ಚು ಸ್ಪಷ್ಟವಾಗಿಯೂ ವಿಶೇಷವಾಗಿಯೂ ಕಾಣಿಸುತ್ತಿದ್ದ ಸೃಷ್ಟಿ ಸೌಂದರ್ಯವನ್ನು ದೃಷ್ಟಿಸಿ, ಆತನಿಗೆ ಆನಂದವು ಹೆಚ್ಚತೊಡಗಿತು. ದೇವಾಲಯದ ಹೊರಸುತ್ತಿನ ಪ್ರಾಕಾರವನ್ನೂ-ಮಹಾದ್ವಾರವನ್ನೂ ಕಂಡಾಗ ಆತನಿಗುಂಟಾದ ಆನಂದೋತ್ಸಾಹಗಳನ್ನು ವರ್ಣಿಸಲಳವಲ್ಲ! ಬೀರೇಗೌಡನೂ ಬಚ್ಚಿಯೂ, ಪವಿತ್ರವಾದ ಸ್ವಾಮಿ ಪುಷ್ಕರಣೀ ಜಲದಲ್ಲಿ ಸ್ನಾನ ಮಾಡಿ ಶುದ್ಧರಾಗಿ, ದೇವಸ್ಥಾನವನ್ನು ಪ್ರವೇಶಿಸಿ, ಕಾಲುಬಾಡಿಗೆಯನ್ನೂ ಮುಡುಪನ್ನೂ ಸಮರ್ಪಿಸಿ, ಸ್ವಾಮಿಯ ದರ್ಶನವನ್ನು ತೆಗೆದುಕೊಂಡರು; ಭೂವೈಕುಂಠಾಧಿಪತಿಯಾದ ಶ್ರೀ ವೆಂಕಟನಾಥನ ಭವ್ಯ ಮೂರುತಿಯನ್ನು ದರ್ಶನಮಾಡಿಮಾಡಿದಂತೆ ಆ ದಂಪತಿಗಳಿಗೆ ಮೈಯಲ್ಲಿ ಪುಳಕಗಳುಂಟಾಗಿ ಆನಂದಬಾಷ್ಪಗಳು ಸುರಿಯತೊಡಗಿದುವು. ಆನಂದವು ಉಕ್ಕೇರಿಬಂದು ಗಂಟಲು ಕಟ್ಟಿದಂತಾಗಲು, ಆ ದೇವದೇವನ ದಿವ್ಯನಾಮ

ಗಳೂ ಪ್ರಾರ್ಥನೆಗಳೂ ಬಾಯಿಂದ ಹೊರಡದಂತಾದುವು ಆ ದೀಪಮಾಲೆಗಳ ವೈಭವದಲ್ಲಿ ಕಿರೀಟ ಕುಂಡಲಗಳೂ-ಹೃದಯದಲ್ಲಿ ಶೋಭಿಸುತ್ತಿದ್ದ ದಿವ್ಯ ಹಾರ ಪದಕಗಳೂ ಥಳಥಳನೆಂದು ಹೊಳೆಯುತ್ತಿರಲು, ಹಣೆಯಲ್ಲಿ ಶೋಭಿಸುತ್ತಿದ್ದ ಪಚ್ಚಕರ್ಪೂರ ಕೇಸರಿಗಳ ದಿವ್ಯ ಊರ್ಧ್ವಪುಂಡ್ರವು ಸ್ವಾಮಿಯ ದಿವ್ಯ ವದನವು ಭಕ್ತವೃಂದಕ್ಕೆ ಎತ್ತಿ ಕಾಣುವಂತೆ ಮನೋಹಾರಕವಾಗಿರಲು, ಶ್ರೀ ಭೂದೇವಿಯರಿಂದ ಕೂಡಿದ್ದ ಭಕ್ತವತ್ಸಲನಾದ ಶ್ರೀನಿವಾಸನನ್ನು ದರ್ಶನ ಮಾಡಿ, ಬೀರೇಗೌಡನು ಧನ್ಯನಾದನು ಬಚ್ಚಿಯೂ ಪರಮಾನಂದಭರಿತಳಾದಳು. ತರುವಾಯ ಬೀರೇಗೌಡನು, ಪಂಚಾಮೃತಾಭಿಷೇಕ, ಸಹಸ್ರ ತುಲಸಾರ್ಚನೆ ಮುಂತಾದುವುಗಳಿಂದ ಸ್ವಾಮಿಯನ್ನು ಆರಾಧಿಸಿ, ದಿವ್ಯ ನವರತ್ನ ಕವಚದಿಂದ ಅಲಂಕೃತನಾದ ದೇವದೇವನಿಗೆ ಮಂಗಳಾರತಿಯನ್ನು ಮಾಡಿಸಿ, ಕಣ್ಣುತುಂಬ ನೋಡಿ ಆನಂದಪಟ್ಟು ತೀರ್ಥಪ್ರಸಾದಗಳನ್ನು ಗ್ರಹಿಸಿ ದೇವಸಾನ್ನಿಧ್ಯದಿಂದ ಹೊರಹೊರಟನು.

ಆ ಮೇಲೆ ಕೆಲ ದಿನಗಳು ಅಲ್ಲೇ ವಾಸಿಸಿ, ಪಾಪನಾಶಿನಿ ಮುಂತಾದ ಪುಣ್ಯತೀರ್ಥಗಳಲ್ಲಿ ಪತ್ನಿಯೊಡನೆ ಮಿಂದು ದಾನದಕ್ಷಿಣೆಗಳಿಂದ ಭೂಸುರ ವರ್ಗವನ್ನು ಸಂತೋಷಪಡಿಸಿದನು. ಅಲ್ಲದೆ ನಿತ್ಯವೂ ಸ್ನಾನಾದಿಗಳಿಂದ ಶುದ್ಧನಾಗಿ ಪತ್ನಿಯೊಂದಿಗೆ ಸ್ವಾಮಿಯನ್ನು ಪ್ರದಕ್ಷಿಣೆ ನಮಸ್ಕಾರ ಸೇವಾದಿಗಳಿಂದ ಆರಾಧಿಸತೊಡಗಿದನು ದಿನದಿನಕ್ಕೆ ಮನಸ್ಸು ಶುದ್ಧವಾಗತೊಡಗಿತು. ಮನೆಮಾರು-ಹೊಲ ಗದ್ದೆ ತೋಟಗಳ-ಆಸ್ತಿಪಾಸ್ತಿಗಳ ಯೋಚನೆಯು ಸಂಪೂರ್ಣವಾಗಿ ಅಳಿಸಿಹೋಯಿತೋ ಎಂಬಂತಾಯಿತು ಸ್ವಾಮಿಯ ದರ್ಶನವಲ್ಲದೆ ಬೇರೊಂದನ್ನು ಕಣ್ಣುಗಳು ನೋಡಲಪೇಕ್ಷಿಸದಾದುವು ಬಾಯಿಯು ಗೋವಿಂದನ ದಿವ್ಯ ನಾಮಾವಳಿಗಳನ್ನಲ್ಲದೆ ಬೇರೊಂದನ್ನು ಭಜಿಸಲಪೇಕ್ಷೆಪಡದಾಯಿತು. ನಿಷ್ಕಳಂಕವಾದ ಅಂತಹ ಭಕ್ತಿಗೆ ಸ್ವಾಮಿಯು ಒಲಿಯದಿರುವನೇ! ಅಲ್ಲದೆ ಆ ಸರ್ವಜ್ಞಮೂರ್ತಿಗೆ ಭಕ್ತನ ಕೋರಿಕೆಯಾದರೂ ಅರಿಕೆಯಾಗದಿರುವುದೇ! ಹೀಗೆ ಬೀರೇಗೌಡನ ಸೇವೆ-ಸ್ತೋತ್ರಗಳು ನಡೆದಿರಲು ಒಂದು ದಿನ ಬೆಳಗಿನ ಜಾವದಲ್ಲಿ ನಿದ್ರೆಯಿಂದ ಮಲಗಿದ್ದ ಬೀರೇಗೌಡನಿಗೊಂದು ಕನಸಾಯಿತು. ಅದರಲ್ಲಿ ದಿವ್ಯ ಊರ್ಧ್ವಪುಂಡ್ರಗಳನ್ನು ಧರಿಸಿದ ಕಪ್ಪನೆಯ ವಿಪ್ರೋತ್ತಮನೊಬ್ಬನು ಗೌಡನಿಗೆ ದರ್ಶನ ಕೊಟ್ಟಂತಾಗಿ, ಗೌಡನ ಕೈಗೆ ಭಗವತ್ಪ್ರಸಾದದ

ಪೂರ್ಣಫಲಪ್ರದವಾದ ಒಂದು ಪ್ರಸಾದದ ಉಂಡೆಯನ್ನು ನೀಡಿ, "ಇದರಲ್ಲಿ ಅರ್ಧವನ್ನು ನಿನ್ನ ಪತ್ನಿಗೆ ಕೊಟ್ಟು, ಮಿಕ್ಕರ್ಧವನ್ನು ನೀನು ಸೇವಿಸು. ನಿನಗೆ ಸಾಧುವೂ ಹರಿಭಕ್ತನೂ ಆದ ಒಬ್ಬ ಪುತ್ರನು ಜನಿಸುವನು" ಎಂದು ಹೇಳಿದಂತಾಯಿತು.

ಬೀರೇಗೌಡನಿಗೆ ಒಡನೆ, ತಟ್ಟನೆ ಹೊಡೆದೆಬ್ಬಿಸಿದಂತೆ ಎಚ್ಚರವಾಯಿತು. ಎದ್ದು ನೋಡಿದರೆ ಕೈಯ್ಯಲ್ಲಿ ಭಗವತ್ಪ್ರಸಾದ ಆಗ ಆತನಿಗುಂಟಾದ ಆನಂದಾಶ್ಚರ್ಯಗಳನ್ನು ವರ್ಣಿಸಲಳವಲ್ಲ! ಭಕ್ತವತ್ಸಲನಾದ ದಯಾನಿಧಿಯಾದ ಶ್ರೀನಿವಾಸನು, ಇಷ್ಟು ಪ್ರತ್ಯಕ್ಷ ರೀತಿಯಿಂದ ಭಕ್ತರ ಕೋರಿಕೆಗಳನ್ನು ಸಫಲಗೊಳಿಸುವ ಮಹಾ ಪ್ರಭುವೆಂಬುದು ಅವನಿಗೆ ತಿಳಿದಿರಲಿಲ್ಲ ಒಡನೆ ಪಕ್ಕದ ಚಾಪೆಯ ಮೇಲೆ ಮಲಗಿದ್ದ ತನ್ನ ಹೆಂಡತಿಯನ್ನೂ ಎಬ್ಬಿಸಿ ಆ ಸಂಗತಿಯನ್ನು ತಿಳಿಸಿದನು. ಇಬ್ಬರೂ ಮೇಲೆ ಮೇಲೆ ಪರಮಾಶ್ಚರ್ಯ ಪಡುತ್ತಾ, ಸ್ವಪ್ನ ವೃತ್ತಾಂತವನ್ನು ಗಮನಿಸಿ, ಅದನ್ನೇ ಹಲುಬಿಕೊಂಡು, ಮಹದಾನಂದದಿಂದ ಆ ಮಹಾ ಪ್ರಸಾದವನ್ನು ಭಯಭರಿತ ಭಕ್ತಿಯುಕ್ತನಾಗಿ, ಶುದ್ಧವಾದೊಂದು ಸ್ಥಳದಲ್ಲಿಟ್ಟು, ಇಬ್ಬರೂ ಸ್ವಾಮಿ ಪುಷ್ಕರಣಿಗೆ ನಡೆದು ಸ್ನಾನಾದಿಗಳನ್ನು ತೀರಿಸಿಕೊಂಡು, ದೇವಾಲಯದಲ್ಲಿ ಭಕ್ತಭಯ ನಿವಾರಕನಾದ ಶ್ರೀ ವೇಂಕಟಾಚಲಾಧಿಪನನ್ನು ಕಂಡು ಭಗವನ್ಮಹಿಮೆಯನ್ನು ಬಾಯಾರೆಹೊಗಳಿ-ದಿವ್ಯಮೂರ್ತಿಯನ್ನು ಕಣ್ಣಾರೆನೋಡಿ, ಆನಂದಬಾಷ್ಪವು ಪ್ರವಾಹವಾಗಿ ಸುರಿಯುತ್ತಿರಲು, ಬಿಡಾರಕ್ಕೆ ಬಂದು ಆ ಭಗವತ್ಪ್ರಸಾದವಲ್ಲಿ ಅರ್ಧವನ್ನು ಪತ್ನಿಗೆ ಕೊಟ್ಟು ಮಿಕ್ಕರ್ಧವನ್ನು ತಾನು ಸೇವಿಸಿದನು.



## ಅಧ್ಯಾಯ ೩ "ತಿಮ್ಮ-ಕನಕ"

ಸ್ವಪ್ನದತ್ತವಾದ ಭಗವದನುಗ್ರಹವು ಪುತ್ರಸಂಪತ್ತನ್ನು ಕೊಡಲುಳ್ಳುದೆಂಬ ನಂಬಿಕೆಯು ದೃಢಪಡುತ್ತಿರಲು ಗೌಡನಿಗೆ ಇನ್ನು ಊರಿಗೆ ಹೊರಡೋಣವೆಂಬ ಯೋಚನೆಯುಂಟಾಯಿತು. ದೇವಾಲಯದಲ್ಲಿ ಪುನಃ ಸ್ವಾಮಿಯನ್ನು ಸಂದರ್ಶಿಸಿ ಭಗವಂತನ ಪಾದಮೂಲದಲ್ಲಿ ತನುವನ್ನೀಡಾಡಿ ವೈಕುಂಠಾಧಿಪತಿಯ ದಿವ್ಯಮಂಗಳ ವಿಗ್ರಹವನ್ನು ಎಷ್ಟು ನೋಡಿದರೂ ತಣಿಯದಿರಲು,

ಭಗವಂತನಿಗೆ ಫಲಾದಿಗಳನ್ನು ಸಮರ್ಪಿಸಿ, ಅರ್ಚನೆ ಮಂಗಳಾರತಿಗಳನ್ನು ತೀರಿಸಿಕೊಂಡು, ದೇವಾಲಯವನ್ನು ಬಿಟ್ಟು ಹೋಗುವುದಕ್ಕೂ ಇಷ್ಟವುಂಟಾಗದಿರಲು ಕೊನೆಗೆ ಹೇಗೋ ಹೊರಹೊರಟು, ಪುನಃ ಪುನಃ ದೇವಸ್ಥಾನದ ಗೋಪುರ ಶಿಖರಗಳು ಕಾಣುತ್ತಿರುವವರೆಗೂ ತಿರುಗಿ ತಿರುಗಿ ನೋಡುತ್ತಾ, ತಾಯನ್ನು ಬಿಟ್ಟು ಅಗಲುವ ಎಳೆಗರುವಿನಂತೆ ಬಹು ಕಷ್ಟದಿಂದ ಒಂದೊಂದಾಗಿ ಬೆಟ್ಟದ ಮೆಟ್ಟಿಲುಗಳನ್ನಿಳಿದು-ಬೆಟ್ಟದಡಿಯ ಪಟ್ಟಣದಲ್ಲಿ ಗೋವಿಂದರಾಜಸ್ವಾಮಿಯನ್ನೂ ಮತ್ತು ಲೋಕಮಾತೆಯಾದ ಪದ್ಮಾವತೀದೇವಿಯನ್ನೂ ದರ್ಶನಮಾಡಿಕೊಂಡು, ತನ್ನ ಗ್ರಾಮಾಭಿಮುಖವಾಗಿ ಪ್ರಯಾಣ ಬೆಳೆಸಿದನು

ಕೆಲ ದಿನಗಳಲ್ಲೇ ಸುರಕ್ಷಿತವಾಗಿ ಬಾಡಗ್ರಾಮವನ್ನೂ ಸೇರಿದ್ದಾಯಿತು. ಸಾಧ್ವೀಮಣಿಯಾದ ಬಚ್ಚಮ್ಮನು ಭಗವತ್ಪ್ರಸಾದ ಪ್ರಭಾವದಿಂದ ಗರ್ಭಧಾರಣ ಮಾಡಿದಳು ಭಗವದನುಗ್ರಹದಿಂದ ನಿಂತ ಗರ್ಭವು ಯಾವ ಉಪಹತಿಗೂ ಒಳಗಾಗದೆ, ಒಂಬತ್ತು ತಿಂಗಳ ಕಾಲ ಸುಖವಾಗಿ ಬೆಳೆಯಿತು ಅಷ್ಟು ವಯಸ್ಸಾಗಿ ತಲೆನರೆತ ಬಚ್ಚಿಯು ಬಸುರಾದಳೆಂಬ ವಾರ್ತೆಯನ್ನು ಕೇಳಿ ಅನೇಕರು ಅದ್ಭುತಪಟ್ಟು ಭಗವನ್ಮಹಿಮೆಯನ್ನು ಹೊಗಳುತ್ತಿದ್ದರು. ನವಮಾಸ ಕಾಲಾವಧಿಯು ಕಳೆದ ತರುವಾಯ ಸುಮಾರು ಕ್ರಿ. ಶ. ೧೫೦೯-೧೦ ಕ್ಕೆ ಸರಿಯಾದ ಒಂದಾನೊಂದು ಆನಂದನಾಮ ಸಂವತ್ಸರದ ಕಾರ್ತೀಕ ಬಹುಳ ತದಿಗೆ ಗುರುವಾರದ ಶುಭದಿನದಲ್ಲಿ ಶ್ರೀನಿವಾಸನ ಪರಮಾನುಗ್ರಹದಿಂದ ಆ ಸಾಧ್ವಿಯು ಒಂದು ಪುರುಷಶಿಶುವನ್ನೇ ಪ್ರಸವಿಸಿದಳು. ಆ ವರ್ತಮಾನವನ್ನು ಕೇಳಿ ಬೀರೇಗೌಡನು ಪರಮಸಂಭ್ರಮದಿಂದ ಬ್ರಾಹ್ಮಣೋತ್ತಮರನ್ನು ಕರೆಯಿಸಿ, ಜಾತಕರ್ಮವನ್ನು ಮಾಡಿಸಿ, ಅನೇಕ ದಾನಧರ್ಮಗಳಿಂದ ಅವರನ್ನು ಸಂತೋಷಪಡಿಸಿದನು ಸಕ್ಕರೆಯನ್ನು ಒಂಟೆಯಮೇಲೆ ಹೇರಿಸಿ ಆ ಗ್ರಾಮದಲ್ಲೆಲ್ಲಾ ಹಂಚಿಸಿದನು ಆಪ್ತೇಷ್ಟರಿಗೆಲ್ಲಾ ದಿವ್ಯ ಔತಣಮಾಡಿಸಿದನು. ಪ್ರಸವಗೃಹದಲ್ಲಿ ಹತ್ತು ದಿನಗಳೂ ಸುಖವಾಗಿ ಕಳೆಯಲು ಮಂಗಳಸ್ನಾನಾನಂತರ, ನಾಮಕರಣ ಮಹೋತ್ಸವವನ್ನೂ ಅತ್ಯಂತ ವಿಜೃಂಭಣೆಯಿಂದ ನಡೆಯಿಸಿ, ಶ್ರೀ ವೆಂಕಟರಮಣನ ವರಪ್ರಸಾದ ಲಬ್ಧವಾದ ಆ ಮಗುವಿಗೆ ಶ್ರೀ ಸ್ವಾಮಿಯ ನಾಮ (ತಿಮ್ಮಪ್ಪ) ವನ್ನೇ ಅನುಸರಿಸಿ ತಿಮ್ಮನೆಂದು ಹೆಸರಿಟ್ಟು ಕರೆದನು.

ತಾಯಿತಂದೆಗಳಿಗೆ ಆನಂದವನ್ನುಂಟುಮಾಡುವಲ್ಲಿ ಮಕ್ಕಳ ಬಾಲಲೀಲೆಗಿಂತಲೂ ಅಧಿಕವಾದುದಾವುದು! ಅದರಲ್ಲೂ ಮಕ್ಕಳು ಮಕ್ಕಳೆಂದು ಹಲುಬಿ, ಎಷ್ಟೋ ಕಾಲಕ್ಕೆ ದೇವರ ದಯೆಯಿಂದ ವೃದ್ಧಾಪ್ಯದಲ್ಲಿ ಮಗುವನ್ನು ಪಡೆದವರ ವಿಷಯದಲ್ಲಿ ಹೇಳಬೇಕಾದ್ದೇನು! ಬೀರೇಗೌಡ ಬಚ್ಚಿಯರು ಆ ಕಂದನ ಒಗೆಬಗೆಯ ಆಟಪಾಟಗಳನ್ನು ಕಣ್ಣುತುಂಬ ನೋಡಿ, ಆನಂದಸಾಗರದಲ್ಲಿ ಓಲಾಡುವರು ಎತ್ತಿ ಮುದ್ದಾಡುವರು. ಹೀಗೇ ಕೆಲವು ದಿನಗಳು ಕಳೆದುವು!—

ತಿಮ್ಮನ ಆಟಪಾಟಗಳಾದರೂ ಸಾಮಾನ್ಯವಾದುವಲ್ಲ ಮಗುವಾಗಿದ್ದಾಗಿನಿಂದ ಯಾರೊಂದಿಗೂ ಸೇರದೆ ಏಕಾಂತವಾಗಿದ್ದು ಎಲ್ಲಿ ಕುಳಿತರೂ ಮೌನವಾಗಿ ದೇವರನ್ನು ಧ್ಯಾನಿಸುತ್ತಿರುವನು. ಎದ್ದರೆ ಮಲಗಿದರೆ-ನಿಂತರೆ ಕುಳಿತರೆ ದೈವಭಜನೆಯಲ್ಲದ ಬೇರಿಲ್ಲ. ತಾಳವನ್ನು ಹೊಡೆದುಕೊಂಡು ದೇವರ ನಾಮಗಳನ್ನು ಉಚ್ಚಧ್ವನಿಯಿಂದ ಹೇಳಿಕೊಳ್ಳುವನು. ಯಾವ ತಿಂಡಿತೀರ್ಥಗಳನ್ನು ಕೊಟ್ಟರೂ ದೇವರಿಗರ್ಪಿಸದ ತಿನ್ನನು. ಬಾಲಕರೊಂದಿಗೆ ಆಡಿದರೂ ದೇವರ ಪೂಜೆಯ ಆಟವೇ! ದೇವರ ಉತ್ಸವವೇ, ಭಜನೆಯೇ! ಜೊತೆಯ ಬಾಲಕರನ್ನೆಲ್ಲ ಕೂಡಿಸಿ, ತಾನು ಪ್ರಸಂಗ ಮಾಡುವವನಂತೆ ನಿಂತು, ದೇವರ ನಾಮಗಳನ್ನು ಹೇಳುವನು. ಎಲ್ಲರೊಂದಿಗೆ ತಾಳವನ್ನು ಹೊಡೆಯುತ್ತಾ ಕುಣಿದಾಡುವನು ತನ್ನ ಮಗನ ಈ ಬಾಲಲೀಲೆಗಳನ್ನು ಕಂಡು ಬೀರೇಗೌಡನು ಹಿಡಿಸಲಾರದಷ್ಟು ಆನಂದದಿಂದ ದಿನಗಳನ್ನು ಕ್ಷಣಗಳಂತೆ ಕಳೆದನು.

ಮನುಷ್ಯನು ತನ್ನ ಜೀವಿತ ಕಾಲದಲ್ಲಿ-ಪ್ರಪಂಚದಲ್ಲಿ ಮಾಡುವ ಕಾರ್ಯ ಎಂಥದೆಂಬುದರ ಸೂಚನೆಯು ಬಾಲ್ಯದಲ್ಲಿನ ಆಟಪಾಟಗಳಲ್ಲಿಯೇ ತೋರಿಬರುವುದು. ಮುಂದೆ ಭಗವದ್ಭಕ್ತರಾಗಿ-ಮಹಾಸಾಧುಗಳಾಗಿ, ಜಗತ್ತಿನಲ್ಲಿ ಭಕ್ತಿತತ್ವದ ಬೀಜಗಳನ್ನು ಬಿತ್ತಿದವರು, ಬಾಲ್ಯದಲ್ಲಿಯೇ ಭಜನೆ ಪೂಜೆಗಳಿಂದಲೂ-ಧ್ಯಾನನಿಷ್ಠೆಗಳಿಂದಲೂ ತಮ್ಮ ಆಟಪಾಟಗಳನ್ನು ಸಾಗಿಸುತ್ತಿದ್ದ ಉದಾಹರಣೆಗಳಿವೆ. ಹಾಗೆ ಕೆಲವು ಚೇತನರು ಮಾತ್ರ ಯಾರಿಂದಲೂ ಬೋಧಿಸಲ್ಪಡದೆ, ಆ ರೀತಿ ಭಗವತ್ಸಂಬಂಧವಾದ ಆಟಪಾಟಗಳಲ್ಲಿ ತೊಡಗುವುದೇಕೆಂದು ಯೋಚಿಸುವುದಾದರೆ, ಅದಕ್ಕೆ ಅವರ ಪೂರ್ವಜನ್ಮ ಸಂಸ್ಕಾರವು ಕಾರಣವೆಂಬ ವಿಷಯವು ಹೊರಪಡುತ್ತದೆ. ಈ ವಿಷಯದಲ್ಲಿ ನಮ್ಮ

ಕಥಾನಾಯಕರ ಪೂರ್ವವೃತ್ತಾಂತವನ್ನು ಈ ಸಂದರ್ಭದಲ್ಲಿ ಉದಹರಿಸು ವುದು ಅಪ್ರಕೃತವಾಗಲಿಕ್ಕಿಲ್ಲ. ಅದು ಹೀಗೆ ಹೇಳಲ್ಪಟ್ಟಿದೆ.

ಪೂರ್ವಯುಗದಲ್ಲಿ ಅಣಿಮಾಂಡವ್ಯನೆಂಬ ಮಹಾಮುನಿಯೊಬ್ಬನು, ಪರಮನಿಷ್ಠನಾಗಿ ತಪಸ್ಸು ಮಾಡುತ್ತಿದ್ದನು ಕಾಲಾಂತರದಲ್ಲಿ ಆತನನ್ನು ರಾಜಭಟರು ಕಳ್ಳರ ಗುರುವೆಂದು ಭ್ರಮಿಸಿ, ತೆಗೆದುಕೊಂಡು ಹೋಗಿ ರಾಜನಲ್ಲಿಗೆ ಒಪ್ಪಿಸಿದರು. ರಾಜನು ವಿಚಾರಿಸಲಾಗಿ ಮುನಿಯು ಧ್ಯಾನಸ್ಥ ನಾಗಿದ್ದುದರಿಂದ ಏನೂ ಪ್ರತ್ಯುತ್ತರ ಕೊಡಲಿಲ್ಲ. ಒಡನೆ ರಾಜನು ಕೋಪ ದಿಂದ 'ಇವನನ್ನು ಶೂಲಕ್ಕೇರಿಸಿರಂ'ದು ಆಜ್ಞಾಪಿಸಿದನು ಶೂಲಕ್ಕೇರಿಸಿ ದಾಗ ಮುನಿಯ ತಪಸ್ಸಮಾಧಿಯು ಭಂಗವಾಗಿ ಕಣ್ದೆರೆದು ನೋಡಿ, ಆಕಸ್ಮಿಕ ವಾಗಿ ಪ್ರಾಪ್ತವಾದ ಆ ಪರಿಸ್ಥಿತಿಗೆ ಕಾರಣವನ್ನು ತನ್ನ ಜ್ಞಾನ ಸಾಮರ್ಥ್ಯ ದಿಂದ ತಿಳಿದು, ಪುನಃ ಸಮಾಧಿಮಗ್ನನಾಗಿ, ಸೂಕ್ಷ್ಮಶರೀರದಿಂದ ಹೊರಹೊ ರಟು ನಡೆದು ತನಗೆ ಅಂತಹ ಶಿಕ್ಷೆಯು ಪ್ರಾಪ್ತವಾಗಲು ಕಾರಣವೇನೆಂದು ಲೋಕದ ಸಕಲ ಶಿಕ್ಷೆರಕ್ಷೆಗಳಿಗೂ ಅಧಿಕಾರಿಯಾದ ಯಮಧರ್ಮರಾಯ ನನ್ನೇ ಪ್ರಶ್ನಿಸಿದನು. ಯಮನು—'ನೀನು ಚಿಕ್ಕಂದಿನಲ್ಲಿ ಒಂದು ನೊಣ ವನ್ನು ಹಿಡಿದು ಅದರ ಮರ್ಮಸ್ಥಾನಕ್ಕೆ ಕಡ್ಡಿಯನ್ನು ಚುಚ್ಚಿ ಹಿಂಸೆ ಪಡಿಸಿದ್ದೆ ಯಾದುದರಿಂದ ಆ ಪಾಪದ ಫಲಾನುಭವಕ್ಕಾಗಿ ಈ ಶಿಕ್ಷೆಯು ಪ್ರಾಪ್ತವಾ ಯಿತೆಂದನು. ಆಗಲಾ ಮುನಿಯು—'ಮಕ್ಕಳು ಅಜ್ಞಾನಿಗಳು, ಅವರು ತಿಳಿಯದೆ ಮಾಡಿದ ಕೃತ್ಯಗಳಿಗಾಗಿ ಶಿಕ್ಷೆ ಮಾಡತಕ್ಕದ್ದು ನ್ಯಾಯವಲ್ಲ. ಇದನ್ನು ಪರಿಶೀಲನೆ ಮಾಡದೆ ನಾನು ಅಜ್ಞಾನಿ ಮಗುವಾಗಿದ್ದಾಗ ಮಾಡಿದ ಕೃತ್ಯಕ್ಕಾಗಿ ಇಂತಹ ಘೋರ ಶಿಕ್ಷೆಯನ್ನು ವಿಧಿಸಿದ ನೀನು ಎರಡು ಜನ್ಮ ಗಳಲ್ಲಿ ಶೂದ್ರನಾಗಿ ಹುಟ್ಟು!'' ಎಂದು ಶಾಪಕೊಟ್ಟು,—ಅಲ್ಲದೆ ತಾನು ಅದುವರೆಗೆ ಮಾಡಿದ್ದ ಮಹಾ ತಪಸ್ಸಿನ ಫಲವನ್ನೂ ಲೋಕದ ಮಕ್ಕಳು ಅಜ್ಞಾನಾವಸ್ಥೆಯಲ್ಲಿ ಮಾಡುವ ತಪ್ಪುಗಳ ಪ್ರಾಯಶ್ಚಿತ್ತ ರೂಪವಾಗಿ ಉಪಯೋಗವಾಗಲೆಂದು ದಾನಮಾಡಿ, ಪುನಃ ತಪಸ್ಸಿಗೆ ಹೊರಟುಹೋದ ನಂತೆ! ಹಾಗೆ ಶಾಪಗ್ರಸ್ತನಾದ ಯಮಧರ್ಮನೇ ಮೊದಲನೆಯ ಜನ್ಮದಲ್ಲಿ ವಿದುರನಾಗಿ ಜನ್ಮವೆತ್ತಿದನೆಂದು ಶ್ರೀಮನ್ಮಧ್ವಾಚಾರ್ಯರವರು ಶ್ರೀ ಮಹಾ ಭಾರತ ತಾತ್ಪರ್ಯನಿರ್ಣಯ ಗ್ರಂಥದಲ್ಲಿ ಅಪ್ಪಣೆ ಕೊಡಿಸುತ್ತಾರೆ. ಮತ್ತು

ವಿದುರನ ಮರುಜನ್ಮವೇ ನಮ್ಮ ಕಥಾನಾಯಕರದೆಂದೂ, ಆ ಜನ್ಮದಲ್ಲೇ ತನಗೆ ಮುಕ್ತಿಯೆಂದೂ, ಕನಕದಾಸರೇ ರಚಿಸಿದ ಒಂದು ಉಗಾಭೋಗದಲ್ಲಿ ಹೇಳುತ್ತಾರೆ ಮಹಾ ಭಗವದ್ಭಕ್ತನಾಗಿದ್ದ ವಿದುರನ ಪುನರ್ಜನ್ಮವಾದ ಮೇಲೆ ಬಾಲ್ಯದಲ್ಲೇ ಅಂತಹ ಅಲೌಕಿಕ ಭಕ್ತಿಭಾಗ್ಯವು ಆ ಬಾಲಕನಲ್ಲಿ ತೋರ್ಪಟ್ಟುದರಲ್ಲಿ ಆಶ್ಚರ್ಯವೇನು?

ಹೀಗೆ ಬಾಲಲೀಲೆಗಳಿಂದ ತಾಯಿತಂದೆಗಳಿಗೆ ಮಹದಾನಂದವನ್ನುಂಟುಮಾಡುತ್ತಾ ಬೆಳೆದು ತಿಮ್ಮನು ನಾಲ್ಕೈದು ವರ್ಷಗಳ ಬಾಲಕನಾದನು. ಬೀರೇಗೌಡನಿಗೆ ಆಗ ಇತರ ಎಲ್ಲಾ ಸೌಭಾಗ್ಯಗಳೊಂದಿಗೆ ಸಂತಾನ ಸೌಭಾಗ್ಯವೂ ಸೇರಿ ಸಂಸಾರವು ಸುಖಮಯವೆಂದು ತೋರಿತು ಸಂಸಾರದಲ್ಲಿ ಸುಖದುಃಖಗಳೆಂಬುವು ಸಮುದ್ರದಲ್ಲಿನ ಅಲೆಗಳಂತೆ! ಏಳ್ಗೆಯು ಸಂಪೂರ್ಣತೆಯನ್ನು ಹೊಂದಿತೆಂಬ ಸ್ಥಿತಿಯು ಪ್ರಾಪ್ತವಾದಾಗಲೇ ಇಳಿತವೂ ಆರಂಭಿಸಲುಳ್ಳುದೆಂಬುದನ್ನು ಮರೆಯಬಾರದು! ಏಳ್ಗೆಯ ಪರಮಾವಧಿ ಸ್ಥಿತಿಯಾದರೂ ರೇಖಾಮಾತ್ರವೆಂಬುದನ್ನು ಗ್ರಹಿಸಿ ಪ್ರಾಜ್ಞರು ಕೇವಲ ಕ್ಷಣಕಾಲದ ಆ ವೈಭವಕ್ಕಾಗಿ ಭ್ರಮೆಗೊಳ್ಳರು ಸಕಲ ವಿಧಗಳಿಂದಲೂ ಸುಂದರಮಯವೆಂದು ತೋರಿದ್ದ ಬೀರೇಗೌಡನ ಸಂಸಾರ ವಿಗ್ರಹವು ಒಂದು ವಜ್ರಘಾತದಿಂದ ಭಿನ್ನವಾಯಿತು ಗೌಡನು ಅಕಸ್ಮಾತ್ತಾಗಿ ಮೃತ್ಯುವಶನಾದನು ಪಕ್ಷಿಯ ಗೂಡಿಗೆ ಕಿಚ್ಚಿಟ್ಟಂತಾಯಿತು ಬಚ್ಚಿಯು ಪಾರವಿಲ್ಲದ ದುಃಖಕ್ಕೆ ಗುರಿಯಾಗಿ ಹಲುಬಿದಳು, ಹಂಬಲಿಸಿದಳು, ಅತ್ತಳು ಮನೆಯಲ್ಲಿ ಆರು ವರ್ಷದ ಆ ಹಸುಮಗುವಲ್ಲದೆ ಮತ್ತಿಬ್ಬರಿಲ್ಲ. ಆಕೆಯನ್ನು ಸಮಾಧಾನಗೊಳಿಸಲೂ ಯಾರೂ ಇಲ್ಲದಂತಾಯಿತು

ಗೌಡನು ಹೋದನು ಮುಂದೆ ಆ ಸಂಸಾರಕ್ಕೆ ದಿಕ್ಕೇನು? ತಿಮ್ಮನ ತಾಯಿಯು ದುಃಖಶರಧಿಯಲ್ಲಿ ಮುಳುಗಿರುವಳು. ದಿನಗಳು ನಾಗಿದಂತೆಲ್ಲಾ ತಿಮ್ಮನಿಗೆ ಶಿಶುತನದ ಪೂಜೆ-ಭಜನಾದಿಗಳು ದೂರವಾದುವು. ಮುಂದೆ ಅವನ ಬೆಳವಿಕೆಯು, 'ಮೂಗುದಾರವಿಲ್ಲದ ಎತ್ತಿನಂತಾಯಿತು' ರಟ್ಟೆ ಬಲಿತಂತೆಲ್ಲಾ ಅವನು ತೋಳತೀಟೆಯನ್ನು ತೀರಿಸಿಕೊಳ್ಳಲು, ಸರಿಯ ಹುಡುಗರೊಂದಿಗೆ ಕಾಳಗಕ್ಕೆ ತೊಡಗುವನು! ಯಾರೊಂದಿಗೆಂದರೆ ಅವರೊಂದಿಗೆ ಮಲ್ಲಯುದ್ಧಕ್ಕೆ ತೊಡಗುವನು. ಮುದುಕಿಯಾದ ತಾಯಿಯ ಮಾತು ಲಕ್ಷ್ಯಕ್ಕೆ ಬಾರದಂತಾ

ಯಿತು. ಪರರಿಗೆ ಹಿಂಸೆ ಮಾಡಬೇಕೆಂಬ ಇಚ್ಛೆಯಿಂದಲ್ಲದಿದ್ದರೂ, ಬಾಲ್ಯ ಚಾಪಲ್ಯದಿಂದ ಮಾಡುತ್ತಿದ್ದ ಈ ತುಂಟತನಗಳು ಪತಿಯ ಮರಣದಿಂದ ಮೊದಲೇ ನೊಂದಿದ್ದ ಆ ಮುದುಕಿಯನ್ನು ಮೇಲೆ ಮೇಲೆ ಹಣ್ಣು ಮಾಡ ತೊಡಗಿದುವು ಹೀಗಾಗಿ ಕಾಲವು ಕೂಡಿಬಂದು ಒಂದು ದಿನ ಆಕೆಯೂ ದೇಹವನ್ನು ನೀಗಿದಳು.—

ಮುಂದೆ ಮನೆಗೆ ತಿಮ್ಮನೇ ಸರ್ವಾಧಿಕಾರಿಯಾದನು ತಾಯಿತಂದೆ ಗಳಿಬ್ಬರೂ ಹೋಗಿ ಏಕಾಂಗಿಯಾಗಿ ನಿಂತ ಹತ್ತು ಹನ್ನೆರಡು ವಯಸ್ಸಿನ ಆ ಬಾಲಕನ ಮೇಲೆ ಊರವರ ಪ್ರೇಮವು ಅಪಾರವಾಗಿದ್ದಿತು ತಾಯಿಯೂ ಹೋದ ಮೇಲೆ ತಿಮ್ಮನಿಗೆ ಸ್ವಲ್ಪ ತಿಳಿವುಂಟಾದಂತ ತೋರಿತು ಅಲ್ಲದೆ ಆ ಕಾಲಕ್ಕೆ ಸರಿಯಾಗಿ ಯಾವ ಜನ್ಮದ ಸುಕೃತವೋ ಎಂಬಂತೆ ಅವನಿಗೆ ನಿಧಿ ಯಿಂದ ತುಂಬಿದ್ದ ಕೊಪ್ಪರಿಗೆಗಳು ಕಾಣತೊಡಗಿದುವು. ಬೇರೆಯವರಿಗೆ ಇಟ್ಟಿಗೆಯ-ಹೆಂಚಿನ ಚೂರುಗಳಂತೆಯೂ-ಇದ್ದಲು ಬೂದಿಗಳಂತೆಯೂ ಕಾಣುತ್ತಿದ್ದ ಪದಾರ್ಥಗಳು ಅವನ ಕಣ್ಣಿಗೇನೋ ಚಿನ್ನ ಬೆಳ್ಳಿಯ ನಾಣ್ಯ ಗಳಂತೆ ತೋರುತ್ತಿದ್ದು, ಅವನು ಕೈಯಿಂದೆತ್ತಿ ಕೊಟ್ಟನಾದರೆ, ಅವು ನಿಶ್ಚಯ ವಾದ ನಾಣ್ಯಗಳಾಗಿಯೇ ಇರುತ್ತಿದ್ದುವು ಇದನ್ನು ಕಂಡ ಜನರು ಅವ ನು ದೈವಗಂಡದವನೆಂದೂ, ಅವನಲ್ಲಿ ಮಹಿಮೆಯಿದೆಯೆಂದೂ ನಂಬಿ, ಆತ ನನ್ನು ಅತಿಶಯಗೌರವದಿಂದ ಕಾಣಲಾಗಿದರು ತಿಮ್ಮನೂ ಹಾಗೆ ತನಗೆ ಒಂದಾದಮೇಲೊಂದರಂತೆ ದೊರೆತ ಏಳು ಕೊಪ್ಪರಿಗೆಗಳ ನಿಕ್ಷೇಪವನ್ನೂ ಲೋ ಭಪಡದೆ, ದೀನರಾದ ಜನಗಳಿಗೆ ಮುಕ್ತಹಸ್ತನಾಗಿ ದಾನವಾಗಿ ಕೊಟ್ಟು ಬಿಟ್ಟನು ಅದರಿಂದ ಹತ್ತಿರದ ದೂರದ ಊರು ಕೇರಿಗಳಲ್ಲೆಲ್ಲಾ ಅವನ ಕೀರ್ತಿಯು ಹಬ್ಬಿತು. ಕನಕದ ಕೊಪ್ಪರಿಗೆಗಳನ್ನು ಕಂಡ ತಿಮ್ಮನಿಗೆ ಕನಕ ನೆಂಬ ಹೆಸರೇ ಅಂಕಿತನಾಮವೋ ಎಂಬಂತಾಗಿಹೋಯಿತು.



## ಅಧ್ಯಾಯ ೪ "ನಾಯಕನು–ದಾಸನಾದನು"

ಕನಕ ಕೊಪ್ಪರಿಗೆಗಳ ಲಭ್ಯವೂ—ಹಗ ನಾಣ್ಯಗಳ ದಾನವೂ ತಿಮ್ಮ ನನ್ನು ಕನಕನೆನ್ನಿಸಿದುವು ಮಾತ್ರವಲ್ಲ! ಅವನ ಗುಣ ನಡತೆಗಳನ್ನೂ ಎಷ್ಟೋ ಮಟ್ಟಿಗೆ ವ್ಯತ್ಯಾಸಗೊಳಿಸಿಬಿಟ್ಟುವು. ಹುಡುಗಾಟಕೆಯ ಆಟ ಪಾಟ

ಗಳೂ ಜೊತೆಯುವರೊಂದಿಗೆ ಜಗಳ ಕಡಿದಾಟಗಳೂ ದೂರವಾದುವು. ಅವನು ಗಾಂಭೀರ್ಯಶಾಲಿಯಾದ ಯುವಕನಾದನು. ಹದಿನಾರು ವರ್ಷದ ಯೌವನಶಾಲಿಯಾದ ಕನಕನಲ್ಲಿ, ಪ್ರಕೃತಿಯೊಂದಿಗೆ ನಿಕಟಸಂಬಂಧವಿರುವ ಹಳ್ಳಿಗಾಡಿನ ಸರ್ವಸ್ವತಂತ್ರ ಜೀವಿತದಲ್ಲಿ ಮನುಷ್ಯನ ಧೈರ್ಯ ಔದಾರ್ಯ ದೇಹಪುಷ್ಟಿ ಆರೋಗ್ಯಾದಿಗಳು ಎಷ್ಟು ಪ್ರಮಾಣದಲ್ಲಿ ಅಭಿವೃದ್ಧಿಯಾಗಬಹುದೋ ಶತಾಂಶ ಅಷ್ಟುಮಟ್ಟಿಗೆ ಅಭಿವೃದ್ಧಿಯಾಗಿದ್ದುವು. ನೀಳವಾದ ಬಲಗೊಂಡ ತೋಳು ತೊಡೆಗಳು, ಉಬ್ಬಿದ ಮಾಂಸಪುಷ್ಟವಾದ ಎದೆ, ಬಲಿತ ಎಲುಬುಗಳು, ಉಕ್ಕಿನ ತಂತಿಗಳಂತೆ ಮೇಲೆದ್ದು ಕಾಣುವ ನರ-ರಕ್ತ ನಾಳಗಳು, ತೇಜಸ್ವಿಯಾದ ಮುಖ, ಆಗತಾನೇ ಮೊಳೆಯುತ್ತಿದ್ದ ಕುಡಿ ಮೀಸೆಗಳು, ತೇಜಃಪುಂಜವಾದ ದೃಷ್ಟಿ, ದೃಢವಾದ ಮೈಕಟ್ಟು! ಸಿಷ್ಯರೂ ಉತ್ತಮರೀತಿಯಿಂದ ಬ್ರಹ್ಮಚರ್ಯ ರಕ್ಷಣೆ ಮಾಡಿದವರೂ ಆಗಿದ್ದ ತಾಯಿ ತಂದೆಗಳ ಉದರದಲ್ಲಿ, ಪಕ್ವವೀರ್ಯದ ಫಲವಾಗಿ ಜನಿಸಿದ ಕನಕನ ದೇಹವು ವಜ್ರಾಂಗದಂತೆ-ಧೃಷ್ಟಪುಷ್ಟವಾಗಿದ್ದು, ರಕ್ತನಾಳಗಳಲ್ಲಿ ಶುದ್ಧ ರಕ್ತವು ತುಂಬಿ ಪ್ರವಹಿಸುತ್ತಿರಲು: ಅಕ್ಷಯ ಧೈರ್ಯೋತ್ಸಾಹಗಳನ್ನುಂಟಾಗಿ ಕನಕನು ಯೋಗ್ಯವೀರನಲ್ಲಿರಬೇಕಾದ ಸಕಲ ಸಲ್ಲಕ್ಷಣಗಳಿಂದಲೂ ಒಪ್ಪುತ್ತಿದ್ದನು. ಭೂತದಯೆ, ಪರೋಪಕಾರ, ವಿಶ್ವಪ್ರೇಮ, ವಿಧೇಯತೆ, ಸತ್ಯ ಮುಂತಾದುವುಗಳ ಆಚರಣೆಯಲ್ಲಿ ವಿನಯ ಶಾಂತತೆಗಳೂ, ದುಷ್ಟದಮನ, ಅನ್ಯಾಯ, ಅಸತ್ಯ, ಮೋಸ, ಕ್ಷುದ್ರಭಾವಗಳ ಖಂಡನೆಯಲ್ಲಿ ರೋಷ ದೃಢನಿಶ್ಚಯಗಳೂ ಪರಸ್ಪರ ವಿರೋಧ ಗುಣಗಳೆಂಬಂತಿದ್ದು ಏಕತ್ರ ಅವುಗಳ ಸಮ್ಮೇಳನವಿರುವುದು ಅಸಂಭವವೆಂಬಂತೆ ತೋರಿದರೂ ವೀರನಲ್ಲಿ ಅವು ಸ್ವಾಭಾವಿಕವಾಗಿರುವುವು. ಕನಕನು ಹಾಗೆ ವೀರಜನೋಚಿತವಾದ ಸದ್ಗುಣ ವಿಶಿಷ್ಟನಾಗಿದ್ದನು. ದೀನರಿಗೂ ಅನಾಥರಿಗೂ ನೆರವಾಗುವುದರಲ್ಲಿ ಕನಕನು ಎತ್ತಿದಕೈ ಎಂಬಂತಿದ್ದನು. ಈಗಿನ ಅವನ ಮುಖ್ಯವಾದ ಅಭಿಲಾಷೆಯ ಉದ್ಯೋಗವು ಬೇಟೆ! ವನದ ಸಾಧು ಪ್ರಾಣಿಗಳಾದ ಮೊಲ ಹುಲ್ಲೆಗಳ ತಂಟೆಗೆ ಹೋಗದೆ, ಗ್ರಾಮಸ್ಥರ ದನಕರುಗಳಿಗೂ ಪೈರುಪಚ್ಚೆಗಳಿಗೂ ತೊಂದರೆ ಕೊಡುತ್ತಿದ್ದ ತೋಳ ಚಿರತೆ ಕಾಡುಹಂದಿ ಮುಂತಾದ ದುಷ್ಟಮೃಗಗಳನ್ನು ಬೇಟೆಯಾಡಿ ಆದಕ್ಕಾಗಿಯೂ ಎಲ್ಲರಿಂದಲೂ ಗೌರವಿಸಲ್ಪಡುತ್ತಿದ್ದನು.

ಹೀಗಿರುವಲ್ಲಿ ಒಂದು ದಿನ ರಾತ್ರಿ ಮಲಗಿರಲು ಆವನಿಗೊಂದು ಕನಸಾಯಿತು. ಅದರಲ್ಲಿ, ಆದಿಕೇಶವ ಸ್ವಾಮಿಯು ಬ್ರಾಹ್ಮಣರೂಪಿನಿಂದ ಬಂದು ಆ ಊರಿನಲ್ಲಿನ ಒಂದು ಸ್ಥಳದ ಗುರುತನ್ನು ತೋರಿಸಿ —' ಕನಕಾ, ಇಲ್ಲಿ ಆದಿಕೇಶವನ ವಿಗ್ರಹವಿದೆ, ಅದನ್ನು ಕಾಗಿನೆಲ್ಲಿಗೆ ತೆಗೆದುಕೊಂಡು ಹೋಗಿ ಪ್ರತಿಷ್ಠಿಸು" ಎಂದು ಹೇಳಿದಂತಾಯಿತು ಕನಕನು ಒಡನೆ ಎದ್ದು ಆ ಸಂಗತಿಯನ್ನು ಆಪ್ತರೊಂದಿಗೆ ಹೇಳಿ, ಮಾರನೆಯ ಪ್ರಾತಃಕಾಲವೇ ಆ ವಿಗ್ರಹವನ್ನು ಅಲ್ಲಿಂದ ತೆಗೆದುಕೊಂಡು, ಕಾಗಿನೆಲ್ಲಿ ಗ್ರಾಮಕ್ಕೆ ಹೊರಟನು. ನಾಲ್ಕಾರು ಜನಗಳು ಎತ್ತಿದರೂ ಏಳದಂತಹ ಬಹು ಭಾರವಾದ ಆ ವಿಗ್ರಹವು ಕನಕನ ಕೈಗಳಲ್ಲಿ ಬೆಂಡಿನಬೊಂಬೆಯೋ ಎಂಬಂತೆ ಸುಖವಾಗಿ ಸಾಗಿ ಬಂದಿತು. ಕನಕನು ಅದನ್ನು ಕಾಗಿನೆಲ್ಲಿಗೆ ಒಯ್ದು ಅಲ್ಲಿಯ ಕೆಲವಂದಿ ಸಜ್ಜನರ ಸಹಾಯದಿಂದ ಉತ್ತಮರೀತಿಯಿಂದ ಪ್ರತಿಷ್ಠಿಸಿ, ಸ್ವಾಮಿಯ ಪೂಜೆ ಪುರಸ್ಕಾರಗಳಿಗೆ ತಕ್ಕ ವ್ಯವಸ್ಥೆ ಮಾಡಿದನು

ಬೀರೇಗೌಡನ ಜೀವಿತಕಾಲದಲ್ಲಿದ್ದು ಆತನ ಗುಣ ನಡತೆಗಳನ್ನು ಬಲ್ಲವರಾಗಿದ್ದ ವಯೋವೃದ್ಧರು ಆತನ ಮಗನಾದ ಕನಕನನ್ನು ತಂದೆಗೆ ತಕ್ಕ ಸದ್ಗುಣಶಾಲಿಯಾದ ಮಗನೆಂದು, ಅಭಿಮಾನದಿಂದ ಕಾಣುತ್ತಿದ್ದರು. ಸಮಾನವಯಸ್ಕರು-ಚಿಕ್ಕವರಿಗಂತೂ ಆತನು ಆದರ್ಶಮೂರ್ತಿಯೇ ಆಗಿದ್ದನು. ಅವರು ಆತನನ್ನು ಬಹುಮಟ್ಟಿನ ಗೌರವಾದರಗಳಿಂದ ಕಾಣುತ್ತಿದ್ದರು ಹೀಗಾಗಿ ಕನಕನು ಸರ್ವಮಾನ್ಯನಾಗಿದ್ದನು. ಧನಧಾನ್ಯ, ಯೌವನ, ತೇಜಸ್ವಿತೆ, ಸ್ವಜನಾನುರಾಗ, ಸುರೂಪಸಂಪತ್ತು ನಿಷ್ಕಳಂಕವಾದ ದೇಹಾರೋಗ್ಯ ಮುಂತಾದವುಗಳಿರುವಾಗ ವಿವಾಹಕ್ಕೆ ಕನ್ಯೆಯರು ಸಿಕ್ಕುವುದು ದುರ್ಲಭವೆ? ಯುಕ್ತಕಾಲದಲ್ಲಿ ಬಂಧುಗಳು ಕಲೆತು, ಕನಕನಿಗೆ ಸುಂದರಳಾದ ಒಬ್ಬ ಕನ್ಯಾಮಣಿಯೊಂದಿಗೆ ವಿವಾಹಮಂಗಳಕಾರ್ಯವನ್ನೂ ನಡೆಯಿಸಿದರು.

ಕನಕನು ಈಗ ಗೃಹಸ್ಥನಾಗಿ ಪಿತ್ರಾರ್ಜಿತದ ಹೊಲಗದ್ದೆ ಮನೆಗಳ-ದನಕರುಗಳ-ಸಮಸ್ತ ಆಸ್ತಿಗೂ ಏಕಮಾತ್ರ ಅಧಿಕಾರಿಯಾಗಿ ದರ್ಪದಿಂದ ಎಲ್ಲವನ್ನೂ ರೂಢಿಸಿಕೊಂಡು, ಗೌರವಸ್ಥನಾಗಿ ನಾಲ್ಕುಮಂದಿಯಲ್ಲಿ ಗಣ್ಯನಾದ ಮನುಷ್ಯನಾಗಿರುವನು. ಚಿಕ್ಕ ವಯಸ್ಸಾದರೂ, ಮಾನಮರ್ಯಾದೆಗಳ

ನ್ನೂ ಗುಣನಡತೆಗಳನ್ನೂ ಬಲ್ಲ ಆತನನ್ನು ಈಗ ಎಲ್ಲರೂ 'ಕನಕನಾಯಕ' ನೆಂದು ಗೌರವಿಸುತ್ತಿರುವರು. ವಂಶದಿಂದಲೂ ಉತ್ತಮಗುಣಗಳಿಂದಲೂ ತೇಜಸ್ವಿತೆಯಿಂದಲೂ ಪ್ರೌಢನೆಂದು ತೋರ್ಪಟ್ಟ ಆತನಿಗೆ ಭಗವದನುಗ್ರಹವೂ ಉಂಟಾಗಲು, ಆನೇಗೊಂದಿ ಸಂಸ್ಥಾನದ ಮಹಾರಾಜನು, ಬಂಕಾಪುರ ಪ್ರಾಂತವನ್ನು ಆತನ ಸ್ವಾಧೀನಕ್ಕೆ ಕೊಟ್ಟು, ಅದರ ಸರ್ವಾಧಿಕಾರವನ್ನೂ ನೋಡಿಕೊಂಡು ಆಳಿಕೊಂಡು ಬರುವಂತೆ ಅನುಮತಿಕೊಟ್ಟನು. ಕನಕನಾಯಕನ ಕೀರ್ತಿಯು ಮೇಲೆಮೇಲೆ ಹೆಚ್ಚುತ್ತಾ ಹೋಯಿತು ಐಶ್ವರ್ಯವೂ ಅಧಿಕಾರವೂ ಕೀರ್ತಿ ಪ್ರತಿಷ್ಠೆಗಳೂ ಹೆಚ್ಚುತ್ತಾ ನಡೆದಂತೆಲ್ಲಾ, ಯೌವನ ಪ್ರಾಯದ ನಾಯಕನ ಮನಸ್ಸು ತಾನು ತಂದು ಪ್ರತಿಷ್ಠಿಸಿದ್ದ ಆದಿಕೇಶವ ಸ್ವಾಮಿಯ ಆಲಯವನ್ನು ಉತ್ತಮಗೊಳಿಸುವುದರಲ್ಲೂ ದೇವಬ್ರಾಹ್ಮಣರ ಸೇವೆ, ದೀನಾನಾಥರಿಗೆ ಅನ್ನವಸ್ತ್ರದಾನ ಮುಂತಾದ ಪರೋಪಕಾರದ ಸತ್ಕಾರ್ಯಗಳಲ್ಲೂ ಪ್ರವೇಶಗೊಂಡುದು ಸುಯೋಗವು. ಬಂಕಾಪುರದ ಅಧಿಕಾರವು ಪ್ರಾಪ್ತವಾದೊಡನೆಯೇ ಕನಕನಾಯಕನು ಕಾಗಿನೆಲೆಯ ಶ್ರೀ ಆದಿಕೇಶವ ಸ್ವಾಮಿಯ ದೇವಾಲಯವನ್ನು ದೊಡ್ಡದಾಗಿ ಕಟ್ಟಿಸಿದನು ಸುತ್ತಲೂ ಪ್ರಾಕಾರಮಂಟಪಾದಿಗಳು ರಚಿಸಲ್ಪಟ್ಟುವು ನಿತ್ಯೋತ್ಸವ, ವರ್ಷೋತ್ಸವ, ಮಾಸೋತ್ಸವ, ಸಂವತ್ಸರ-ರಥೋತ್ಸವಾದಿಗಳು ವಿಜೃಂಭಣೆಯಿಂದಲೂ ಶಾಸ್ತ್ರೋಕ್ತವಾಗಿಯೂ ನಡೆಯಲು ಬೇಕಾದ ವ್ಯವಸ್ಥೆಗಳು ಮಾಡಲ್ಪಟ್ಟುವು. ಬ್ರಾಹ್ಮಣ ಸಂತರ್ಪಣೆ ದಕ್ಷಿಣೆದಾನಗಳು ಯಥೇಷ್ಟವಾಗಿ ನಡೆದುವು ದಿವ್ಯ ಮೃಷ್ಟಾನ್ನ ಭೋಜನ-ಭೂರಿದಕ್ಷಿಣೆಗಳಿಂದ ತಣಿದ ಭೂಸುರ ಸುವಾಸಿನೀ ವರ್ಗವು ಕನಕನಾಯಕನ ಮೇಲೆ ಆಶೀರ್ವಾದಗಳ ಕುಂಭವೃಷ್ಟಿಯನ್ನೇ ಸುರಿಸಿಬಿಟ್ಟುವೆಂದರೆ ಅದರಲ್ಲಿ ಆಶ್ಚರ್ಯವೇನಿದೆ?

ಈ ಮಧ್ಯೆ ಕೌತುಕವೆನಿಸುವ ಒಂದು ಸಂಗತಿ ನಡೆಯಿತು. ಆ ಪ್ರಾಂತವಲ್ಲಿ ಕೆಲವರಿಗೆ ಏಕಕಾಲದಲ್ಲಿ ಒಂದು ವಿಚಿತ್ರಸ್ವಪ್ನವಾಯಿತಂತೆ! ಇನ್ನು ಮುಂದೆ ತಿರುಪತಿಯ ವೆಂಕಟರಮಣಸ್ವಾಮಿಗೆ ಸಲ್ಲಬೇಕಾದ ಮುಡುಪುಹರಕೆಗಳು ಕನಕನಾಯಕನಿಗೇ ಸಲ್ಲಬಹುದೆಂದು ಆ ಕನಸಿನಲ್ಲಿ ಸ್ವಾಮಿಯ ಆಜ್ಞೆಯಾಯಿತೆಂಬ ಪ್ರತೀತಿಯು ಹೊರಟಿತು. ಅನೇಕರು ಅಷ್ಟು ದೂರದ ತಿರುಪತಿಗೆ ಹೋಗಲಾರದೆ, ಕನಕಪ್ಪನಿಗೇ ಹರಸಿಕೊಂಡು, ಆತನಿಗೇ ಮುಡು

ಕಾಣಿಕೆಗಳನ್ನು ಒಪ್ಪಿಸಸಾಗಿದರು ಕನಕನು ಶ್ರೀ ವೆಂಕಟರಮಣನ ಉತ್ಸವ ಮೂರ್ತಿಯೋ ಎಂಬಂತೆ ಜನರ ಭಾವನೆಯಿದ್ದು ಆತನಲ್ಲಿ ಅತಿಶಯ ಪೂಜ್ಯಬುದ್ಧಿಯುಂಟಾಗತೊಡಗಿತು ಕೆಲದಿನಗಳು ಜನರು ತನ್ನನ್ನು ಹೀಗೇಕೆ ತಿಳಿವರೆಂಬುದೇ ಆತನಿಗೆ ಬೋಧವಾಗಲಿಲ್ಲ. ದಿನಗಳು ಸಾಗಿದಂತೆಲ್ಲಾ ಆತನು ಅದನ್ನು ಕುರಿತು ಲಕ್ಷಿಸುವುದನ್ನೇ ಬಿಟ್ಟು, ಸಮಸ್ತಕ್ಕೂ ಪ್ರೇರಕನಾದ ಸ್ವಾಮಿಗೆ ಇಷ್ಟಬಂದಂತೆ ನಡೆಯಲೆಂದು, ತನಗೆಂದು ಜನರು ಸಲ್ಲಿಸುತ್ತಿದ್ದ ಹರಕೆ ಕಾಣಿಕೆ ಪೂಜೆ ಗೌರವಗಳೆಲ್ಲಾ ಶ್ರೀ ಆದಿಕೇಶವ ಮೂರ್ತಿಗೇ ಪ್ರೀತಿಯಾಗಲೆಂದು ಸ್ವಾಮಿಯ ಪಾದಕಮಲಗಳಿಗೇ ಸಮರ್ಪಿಸುತ್ತಾ ನಿರ್ಲಿಪ್ತನಂತೆ ಇದ್ದುಬಿಟ್ಟನು.

ಪರೋಪಕಾರ, ಸನ್ಮಾರ್ಗಾನುವರ್ತನೆ, ಆತ್ಮನಿಷ್ಠೆ, ನಿಸ್ಪೃಹತೆ, ಭಗವದ್ಭಕ್ತಿ, ಸಾರಸ್ವತಸೇವೆ ಮುಂತಾದ ಆತ್ಮಾಭಿವೃದ್ಧಿ ಕಾರ್ಯಗಳಿಗೆ ರಾಜಸೇವೆ (ಸರಕಾರಿಯ ನೌಕರಿ) ರಾಜ್ಯಾಧಿಕಾರಗಳು ವಿಘ್ನಕಾರಿಗಳೆಂದು ಹೇಳಿಕೊಳ್ಳುವವರು ಬಹುಮಂದಿ ಇರುವರು. ಆದರೆ ಸಾಮಾನ್ಯ ಸ್ಥಿತಿಯಲ್ಲಿನ ಇತರರಿಗಿಂತಲೂ, ರಾಜಸೇವೆಯಲ್ಲಿ-ಅಧಿಕಾರದಲ್ಲಿ ಇದ್ದವರಿಗೆ ಆ ಕೆಲಸಗಳನ್ನು ಮಾಡಲು, ಎಷ್ಟು ಬಗೆಯ ಸಹಾಯ ಸಂಪತ್ತುಗಳಿರುವುವೆಂಬುದನ್ನು ಅವರು ಯೋಚಿಸುವುದಿಲ್ಲ. ಸಾಮಾನ್ಯ ಸ್ಥಿತಿಯವನು ಕೋಟೆಯಿಂದ ಹೊರಗೆ ಏಕಾಂಗಿಯಾಗಿ ನಿಂತು ಶತ್ರುಗಳೊಂದಿಗೆ ಹೂಡೆದಾಡಬೇಕಾದ ಯುದ್ಧವೀರನಂತೆ ಇರುವನೆನ್ನಬಹುದು ಅವನು ಲೋಕಸೇವೆಗ ತೊಡಗಬೇಕೆಂದು ಅಪೇಕ್ಷಿಸುವುದಾದರೆ, ಅದಕ್ಕೆ ಮುಂಚೆ ತನ್ನ ಜೀವನಕ್ಕೆ ಸಂಪಾದಿಸಿಕೊಂಡು, ಹೆಂಡಿರು ಮಕ್ಕಳನ್ನು ಪೋಷಿಸಿ, ಅವರ ಭವಿಷ್ಯತ್ಕಾಲದ ಸಂರಕ್ಷಣೆಗೆ ಒದಗಿಸಲೂ ಸಂಪಾದಿಸಿಟ್ಟು, ಅದರೊಂದಿಗೆ ಪರೋಪಕಾರ ಕಾರ್ಯಕ್ಕೆ ಆವಶ್ಯಕವಿರುವ ಮತ್ತು ಲೋಕಸೇವಾ ಕಾರ್ಯಕ್ಕೆ ಬೇಕಾದ ಅನುಕೂಲತೆಗಳನ್ನೂ ಹವಣಿಸಿಕೊಂಡು ಹೀಗೆ ಬಹು ಶ್ರಮಪಡಬೇಕಾಗಿರುವುದು. ಆದರೆ ರಾಜಸೇವೆಯಲ್ಲಿದ್ದವನಿಗೆ ಹಾಗಲ್ಲ! ಅವನು ಕೋಟೆಯೊಳಗಡೆ-ಬಲವಾದ ಆಶ್ರಯದಲ್ಲಿದ್ದು ಶತ್ರುವಿನೊಂದಿಗ ಯುದ್ಧ ಮಾಡುವ ಶಿಪಾಯಿಯಂತೆ! ಅವನ ಸಂಸಾರ-ಭವಿಷ್ಯತ್ಕಾಲದ ವ್ಯವಸ್ಥೆ ಮುಂತಾದುವುಗಳ ಖರ್ಚಿಗೆ ಹೆಚ್ಚು ಕಡಮೆ ಸಾಕಾಗುವಷ್ಟನ್ನು, ಅವನವನ ವಿದ್ಯ

ಯೋಗ್ಯತೆ ಹೆಚ್ಚಿಂದರೆ ಪ್ರಾಪ್ತಿ ಇವುಗಳಿಗೆ ತಕ್ಕಂತೆ, ರಾಜನು ಅರ್ಥಾತ್ ಸರಕಾರವು ಒದಗಿಸುವುದು. ಆವನು ಹಣ ಮತ್ತು ಕಾಲಗಳ ವಿಷಯದಲ್ಲಿ ಮಿತಜೀವಿಯಾಗಿಮಾತ್ರವಿದ್ದರೆ ಮೇಲ್ಕಂಡ ಯೋಚನೆಯನ್ನು ಬಿಟ್ಟು ಅವಕಾಶವನ್ನು ಕಲ್ಪಿಸಿಕೊಂಡು ನಿರ್ಮಲ ಮನಸ್ಸಿನಿಂದ ಲೋಕಸೇವಾ ಕಾರ್ಯದಲ್ಲೂ, ಪರೋಪಕಾರದ ಕೆಲಸಗಳಲ್ಲೂ, ಆತ್ಮಾಭಿವೃದ್ಧಿ ವಿಚಾರಗಳಲ್ಲೂ ತೊಡಗಲು ಅವಕಾಶವುಂಟು. ಆದರ ಆಕಟೂ, ಪ್ರಕೃತ ಕಾಲದಲ್ಲಿ ಸರಕಾರಿಯ ಉದ್ಯೋಗದಲ್ಲಿರುವವರಲ್ಲಿ ಅನೇಕರ ಸ್ಥಿತಿಯು ಅತ್ಯಂತ ವಿಷಾದಕರವಾಗಿರುವುದೇಕೆ? ಅವರೇಕೆ ತಮ್ಮನ್ನೂ ನಿಂದಿಸಿಕೊಳ್ಳುತ್ತ ತಮ್ಮ ಉದ್ಯೋಗವನ್ನೂ ಶಪಿಸುತ್ತ, ಗಾಣಕ್ಕೆ ಕಟ್ಟಲ್ಪಟ್ಟ ಎತ್ತುಗಳೋ ಎಂಬಂತೆ-ಬಲವಂತಕ್ಕೆ ಸಿಕ್ಕಿದವರಂತೆ-ನಿರ್ಬಂಧಕ್ಕೆ ಒಳಪಟ್ಟವರಂತೆ ತಮ್ಮ ಕೆಲಸವನ್ನು, ಉತ್ಸಾಹವಿಲ್ಲದೆ ಕಾಲವನ್ನು ನೂಕುತ್ತಾ, ಗಂಟೆಗಳನ್ನೆಣಿಸುತ್ತಾ, ದಿನಗಳನ್ನು ಲೆಕ್ಕಿಸುತ್ತ ಹೋಗುತ್ತಿರುವರು? ಏಕೆಂದರೆ ಅವರಲ್ಲನೇಕರಿಗೆ ತಾವು ಕಾಗದ ಪತ್ರಗಳೊಂದಿಗೆ ನಡೆಸುತ್ತಿರುವ ವ್ಯವಹಾರವೂ ಲೋಕಸೇವೆಯೋ-ಪ್ರಜಾಸೇವೆಯೋ ಎಂಬುದೂ, ಅದಲ್ಲದೆ ಬೇರಲ್ಲವೆಂಬ ಸಂಗತಿಯೂ ತಿಳಿಯದು. ಅದನ್ನು, ನಿಸ್ಪೃಹತೆಯಿಂದ-ಕಾಮಿನೀಕಾಂಚನಗಳಿಗೆ ಆಸೆಪಡದೆ, ಶಕ್ತಿವಂಚನೆಯಿಲ್ಲದೆ, ಕಾಲವನ್ನು ಕೊಲ್ಲದೆ, ಪುನಃ ಪೂರ್ಣವಾಗಿ ಮಾಡಿದರೆ ಅದು ಪ್ರಜಾಸೇವೆಯೋ ಪ್ರಭುಸೇವೆಯೂ ಪರಮಾತ್ಮನ ಸೇವೆಯೂ ಆಗುವುದು ಎಂಬ ಶ್ರೇಷ್ಠಭಾವನೆಯಿಲ್ಲ! ತಮಗೆ ಅನ್ನವನ್ನು ಕೊಟ್ಟು ಪೋಷಿಸುತ್ತಿರುವ ಆ ಕೆಲಸದಲ್ಲಿ ಅವರಿಗೆ ಪೂಜ್ಯಭಾವವಿಲ್ಲ! ಅವರಲ್ಲಿ ಕೆಲವರು ಅಧಿಕಾರದಲ್ಲಿರುವ-ಉದ್ಯೋಗವು ದೊರೆತಿರುವ ಎರಡು ದಿನಗಳಲ್ಲೇ ಸಾಧ್ಯವಿರುವಷ್ಟನ್ನು ಗಳಿಸಿಕೊಂಡು ಬಿಡಬೇಕೆಂಬ ಸ್ವಾರ್ಥತೆಗೆ ಉಬ್ಬರಾಗಿ ಅಧಿಕಾರ-ಉದ್ಯೋಗಗಳನ್ನು ವಹಿಸಿರುವರಲ್ಲದೆ, ತಾವು ಆ ಸ್ಥಾನದಲ್ಲಿದ್ದು ತನ್ಮೂಲಕ ಸಹವಾಸಿಗಳಾದ ಪ್ರಜೆಗಳಿಗೆ ತಮ್ಮಿಂದಾದಷ್ಟು ಪ್ರಯೋಜನಗಳನ್ನು ಕಲ್ಪಿಸಿಕೊಡಬೇಕೆಂದಲ್ಲ! ಮತ್ತೆ ಕೆಲವರು ತಾವು ಪಡೆವ ಸಂಬಳದ ಮೊತ್ತಕ್ಕೆ ತಕ್ಕಷ್ಟು ಕೆಲಸವನ್ನು ನ್ಯಾಯರೀತಿಯಿಂದ ಮಾಡತಕ್ಕದು ತಮ್ಮ ಕರ್ತವ್ಯವೆಂಬ ನಿಷ್ಠೆಯಿಂದ ಮಾಡುವುದಿಲ್ಲ! ಬೇರೆ ಕೆಲವರನ್ನು ಉದರಭೂತವು ಸ್ವಾಭಿಮಾನ-ಮರ್ಯಾದೆಗಳನ್ನೂ ಲೆಕ್ಕಿಸದಂತೆ ಹಲ್ಗಿರಿಸುವುದು

ಹೊಟ್ಟೆಯನ್ನು ಕೊಟ್ಟ ದೇವರು ಹೊಟ್ಟೆಗೆ ಕೊಡಲಾರನೇ ಎಂಬ ನಂಬಿಕೆಯಿಂದ ಕರ್ತವ್ಯ ತತ್ಪರರಾಗುವಂತಹ ಶ್ರದ್ಧಾ ಭಕ್ತಿಗಳೂ-ದಾರ್ಢ್ಯವೂ ಅವರಲ್ಲಿರುವುದಿಲ್ಲ! ಆದುದರಿಂದಲೇ ರಾಜಸೇವೆಯಲ್ಲಿ ದುಃಖಸಂಕಟಗಳು ತಲೆದೋರುವುವು. ಪ್ರಭುಭಕ್ತನೂ ಪ್ರಜಾಭಕ್ತನೂ ಆಗಿರುವ ನೌಕರನಿಗೆ ಭಗವದ್ಭಕ್ತನಾದ ಭಾಗವತನಿಗೆ ಯಾವ ಪದವಿ ದೊರೆಯುವುದೋ, ಸತಿನಿಷ್ಠಳಾದ ಮಹಾಪತಿವ್ರತೆಗೆ ಯಾವ ಸದ್ಗತಿ ದೊರೆಯುವುದೋ ಆ ಸದ್ಗತಿಯು ಲಭಿಸುವುದೆಂಬುದಕ್ಕೆ ಸಂದೇಹವೇನು? ಅಧಿಕಾರ ಉದ್ಯೋಗಗಳಲ್ಲಿರುವವರಲ್ಲಿ ಬಹು ಸ್ವಲ್ಪ ಮಂದಿ ಮಾತ್ರವೇ ತಮ್ಮ ಉದ್ಯೋಗದ ಮಹತ್ವ ತಮ್ಮ ಕರ್ತವ್ಯ ಮುಂತಾದುವುಗಳ ನಿಶ್ಚಯಸ್ವರೂಪವನ್ನು ಗ್ರಹಿಸುವರು. ಅವರು ಪ್ರಭುಸಮ್ಮತವಾದ-ಅಂತೆಯೇ ಪ್ರಜಾಸೇವಾರೂಪವಾದ ಕಾರ್ಯಗಳಿಗಾಗಿ ಪ್ರಯತ್ನಪಟ್ಟರೆ ರಾಜಬೊಕ್ಕಸದಿಂದ ದ್ರವ್ಯವು ದೊರೆಯುವುದು. ಸಾವಿರಾರು ಮಂದಿ ಕೆಲಸಗಾರರು ಸಿಕ್ಕುವರು. ಬೇಕಾದ ಅನುಕೂಲತೆಯುಂಟು, ಆ ಕೆಲಸಗಳನ್ನೇ ಶ್ರದ್ಧೆಯಿಂದ ಮಾಡಿದ್ದಾದರೆ ರಾಜಮರ್ಯಾದೆಯೂ ಪ್ರತಿಷ್ಠೆಯೂ ಸಿಕ್ಕುವುದು. ಹೀಗ ಇಷ್ಟು ಅನುಕೂಲತೆಗಳನ್ನುಂಟಾಗಿರುವ ಆಯಾ ಕೆಲಸಗಳನ್ನೇ ನಿಸ್ಪೃಹತೆಯಿಂದಲೂ ಲೋಕೋಪಕಾರ ಬುದ್ಧಿಯಿಂದಲೂ ಮಾಡಿದ್ದಾದರ ದಾಸರಾಯರು ಅಪ್ಪಣೆ ಕೊಡಿಸಿರುವಂತೆ, "ಕೆರೆಯ ನೀರನು ಕೆರಗೆ ಚೆಲ್ಲೀ! ವರವ ಪಡೆದವರಂತೆ!" ಸತ್ಕೀರ್ತಿ ಸದ್ಗತಿಗಳನ್ನು ಸಂಪಾದಿಸಿ ಕೊಳ್ಳಬಹುದಲ್ಲವೆ? ಹಾಗಲ್ಲದ ಧನಾಸೆಗೆ ಒಳಗಾಗಿ, ಅಧಿಕಾರಮತ್ತತೆ ಲೋಭ ಮೋಹಗಳಿಗೀಡಾಗಿ ಲಂಚಕ್ಕಾಸೆಪಟ್ಟು, ನೃಪದ್ರೋಹ, ಪ್ರಜಾದ್ರೋಹ ರಾಜದ್ರೋಹಗಳ ಹೊರೆಯನ್ನು ಹೊತ್ತುಕೊಂಡು, 'ಪಡೆವೆ ಪರರದಾದರೂ ಒಡಲು ತನ್ನದೆಂ'ಬ ಸೂಕ್ತಿಯನ್ನು ಮರೆತು, ಹೊಟ್ಟೆ ಹಿಡಿವಷ್ಟು ಮಿತಿಯಲ್ಲಿ ಮಾತ್ರ ತಿನ್ನಲಾಗುವುದೆಂಬುದನ್ನರಿಯದೆ, ಅತ್ಯಾಸೆಯಿಂದ, ಜೇನುತುಪ್ಪದ ಹರಿವಿಯಲ್ಲಿ ಬಿದ್ದು ಹೆಣಗಾಡಿ, ಪ್ರಾಣ ಬಿಡುವ ನೊಣದಂತೆ-ನರಕದಲ್ಲಿನ ಕ್ರಿಮಿಗಳಾಗಿ ಕಾಲಯಾಪನ ಮಾಡುವ ಪಾಮರರಿಗ ಏನು ಇಹದಲ್ಲಿ ಸುಖಶಾಂತಿಗಳುಂಟೆ-ಪರದಲ್ಲಿ ಸದ್ಗತಿಯುಂಟೆ?—

ನಮ್ಮ ಕಥಾನಾಯಕನೂ ರಾಜಸೇವೆಯಲ್ಲಿ ಅಧಿಕಾರಿಯಾಗಿಯೇ ಇದ್ದನಷ್ಟೆ! ಆತನ ಸ್ವಾಧೀನದಲ್ಲ ಆ ಪ್ರಾಂತದ ರಾಜಬೊಕ್ಕಸವಿದ್ದಿತು. ರಾಜಸೇವ

ಕರಿದ್ದರು ಆ ಪ್ರಾಂತದಲ್ಲಿ ಆತನ ಮಾತೆಂದರೆ ಬೆಲೆಯಿದ್ದಿತು ಆತನು ಯಾವ ಸತ್ಕಾರ್ಯ ಮಾಡಬೇಕೆಂದರೆ ತಡೆಯುಂಟು? ಅಧಿಕಾರ ಬಂತೆಂದು ಒಡನೆ ನಮ್ಮ ಕನಕನಾಯಕನು ಸ್ವದೇಶೀಯರಾದ ಸಹವಾಸಿ ಜನಗಳನ್ನು ಮರೆಯಲಿಲ್ಲ; ಅವ ರಿಂದ ತಾನು ಬೇರೆಯೆಂದು ತಿಳಿಯಲಿಲ್ಲ ತಾನು ಭೂಮಿಯನ್ನು ಬಿಟ್ಟು ಮೇಲಿ ದ್ದೇನೆಂಬ ಭಾವನೆಯು ಆತನ ಮನಸ್ಸಿಗೇರಲಿಲ್ಲ ಮುಂಚೆ ಹೇಗೆಯೋ, ಅಧಿ ಕಾರ ಬಂದಮೇಲೂ ಆತನಿಗೆ ಕಣ್ಣು ಕಿವಿಗಳು ಹಾಗೆಯೇ ಪಟುವಾಗಿಯೇ ಇದ್ದುವು ನಾಲಿಗೆಯೂ ಮೊದಲಿನಂತೆಯೇ ಮೃದುವಾಗಿದ್ದಿತಲ್ಲದೆ ಒರಟಾ ಗಲಿಲ್ಲ. ಹತ್ತು ಹಣಗಳ ಹೊಳಪು, ಹರಣವಿತ್ತ ಹೃದಯನಿವಾಸಿಯಾದ ಹರಿಯನ್ನು ಮರೆವಂತಹ ಸುಂಕುತನವನ್ನು ಆತನಿಗುಂಟುಮಾಡಲಿಲ್ಲ. ಆದಿಕೇಶವಸ್ವಾಮಿಯ ನಿಸ್ಸೀಮಭಕ್ತನಾದ ಆತನಲ್ಲಿ ಅಧಿಕಾರಮತ್ತತೆ, ವಿಷಯಲೋಲುಪತೆ ಕಾಮಿನೀಕಾಂಚನಾದಿಗಳಲ್ಲಿ ಲೋಭ ಮುಂತಾದುವುಗಳು ಹೇಗೆ ಇಣಿಕಿನೋಡುವುವು? ತನ್ನ ದ್ರವ್ಯವನ್ನು ದೇವರ ಸೇವೆಗೆಂದೂ ಉತ್ಸ ವಾದಿಗಳಿಗೆಂದೂ ಬ್ರಾಹ್ಮಣಾದಿ ಭಕ್ತಜನರ ಅನ್ನಪಾನಗಳಿಗೆಂದೂ ಮುಕ್ತ ಹಸ್ತನಾಗಿ ದಾನಮಾಡತೊಡಗಿದನು ಆದರೆ ಕೆಲವುಂದಿ ದುಷ್ಟರಿಗೆ ಕನಕನಾಯಕನ ಕೀರ್ತಿಯೂ ಸತ್ಸ್ವಭಾವವೂ ಸಹನೆಯಾಗಲಿಲ್ಲ ಉತ್ತಮರ ಸಮಾಪದಲ್ಲಿ ದುರ್ಜನರೂ ಪ್ರಚ್ಛನ್ನರಾಗಿದ್ದೇ ಇರುವರು, ಅವರು ಹಾಗೆ ಇರಬೇಕಾದುದೂ ದೃವನಿಯಾಮಕವೇ ಇರಬಹುದು! ಏಕೆಂದರೆ ದೀಪದ ಕೆಳಭಾಗದಲ್ಲಿ ಕತ್ತಲೆಯಿರತಕ್ಕುದು ಸ್ವಭಾವವಲ್ಲವೇ? ಕತ್ತಲೆಯಿಲ್ಲದಿದ್ದರೆ ದೀಪಕ್ಕೆ ಹೇಗೆ ಮಹತ್ವವುಂಟಾದೀತು! ದೀಪದ ಪ್ರಕಾಶವನ್ನು ಹೆಚ್ಚಿಸಲು ಬೆಳಕಿಲ್ಲದಿರಬೇಕಾದುದು ಹೇಗೆ ಅವಶ್ಯಕವೋ, ಸಜ್ಜನರ ಪ್ರತಿಭೆಯನ್ನು ಹೆಚ್ಚಿಸಲು ದುರ್ಜನರಿರಬೇಕಾದುದೂ ಹಾಗೆಯೇ ಆವಶ್ಯಕವು ಕೆಲವುಂದಿ ಅಸೂಯಾತ್ಮರು.—"ಕನಕನಾಯಕನು ದೇವಾಲಯದ ಉತ್ಸವಗಳಿಗಾ ಗಿಯೂ ಬ್ರಾಹ್ಮಣ ಸಮಾರಾಧನೆಗಳಿಗಾಗಿಯೂ ರಾಜಬೊಕ್ಕಸದ ದ್ರವ್ಯವ ನ್ನೆಲ್ಲ ಖರ್ಚುಮಾಡಿ ಭಂಡಾರವನ್ನು ಬರಿದು ಮಾಡುತ್ತಿದ್ದಾನೆಂ"ದು ಆನೇ ಗೊಂದಿಯ ರಾಜರಲ್ಲಿ ದೂರಿದರು. ಅದನ್ನು ಕೇಳಿದ ಅಲ್ಲಿದ್ದ ಆಗಿನ ಅಧಿ ಕಾರಿಗಳು, ಭಂಡಾರವು ಬರಿದಾಗಿರುವುದು ನಿಶ್ಚಯವೇ ಸುಳ್ಳೇ ಎಂಬುದನ್ನು ಕೂಡ ವಿಚಾರಿಸದೆ, "ಈ ಕೂಡಲೇ ರಾಜಬೊಕ್ಕಸವನ್ನೂ ಕಾಗದಪತ್ರಗ

ಳನ್ನೂ ವಹಿಸಿಕೊಟ್ಟು, ಹೊರಟುಹೋಗತಕ್ಕದೆಂದು'' ರಾಜಾಜ್ಞೆಯನ್ನು ಕಳುಹಿಸಿದರು. ಕನಕನಾಯಕನು ''ಈವರೆಗೆ ಸ್ವಾಮಿಯ ಸೇವೆಮಾಡುವ ಯೋಗವಿತ್ತಂ''ದುಕೊಂಡು, ಅಧಿಕಾರವನ್ನು ವಹಿಸಿಕೊಟ್ಟು, ಲೇಶಮಾತ್ರವೂ ಚಿಂತಿಸದೆ, ಪುನಃ ಕಾಗಿನೆಲ್ಲಿಗೇ ವಾಸಿಸಲು ಬಂದುಬಿಟ್ಟನು. ಆ ವೇಳೆಗೆ ಆತನ ಹೆಂಡತಿಯೂ ತೀರಿಹೋಗಿದ್ದಳು ಮುಂದೆ ಕನಕನಾಯಕನು ಯಾರ ನಿರ್ಬಂಧವೂ ಇಲ್ಲದಿರಲು ತನ್ನ ಪೂರ್ವದ ಬೇಟೆಕಾಳಗಾದಿಗಳಲ್ಲಿ ಆಸಕ್ತನಾಗಿ ಕಾಲಯಾಪನೆ ಮಾಡುತ್ತಾ ಸುಖವಾಗಿದ್ದುಬಿಟ್ಟನು.

ಸೂರ್ಯೋದಯಕ್ಕೆ ಮುಂಚೆ ಅರುಣೋದಯವಾಗುವಂತೆ, ಜ್ಞಾನೋದಯಕ್ಕೆ ಮುಂಚೆ ಮನುಷ್ಯನಲ್ಲಿ ಭಗವಂತನ ಪಾದಾರವಿಂದಗಳಲ್ಲಿ ಭಕ್ತಿಯ ಮುಂಬೆಳಕು ತೋರಿಬರಬೇಕು. ನಿಷ್ಕಾಮಕರ್ಮವೆಂಬ ತಂಗಾಳಿಯು ಚಲನೆ ಹುಟ್ಟಬೇಕು ಭಕ್ತಿಯುಂಟಾಗಲು ವೈರಾಗ್ಯವೂ ಭೂತದಯೆಯೂ ಪ್ರಥಮ ಸಾಧನಗಳು. ಐಹಿಕ ಭೋಗಭಾಗ್ಯಗಳಲ್ಲೂ, ವಿಷಯ ಸುಖಗಳಲ್ಲೂ ಆಶಾಮೋಹಗಳು ತೀರದಿರುವಾಗ ಮನಸ್ಸು ಧರ್ಮ-ದೇವರು ಎಂಬ ವಿಚಾರಗಳ ಕಡೆಗೆ ತಿರುಗುವುದಾದರೂ ಹೇಗೆ? ಒಂದನ್ನು ಬಿಟ್ಟಲ್ಲದೆ ಮತ್ತೊಂದು ಸಿಕ್ಕದು. ಎರಡು ದೋಣಿಗಳಲ್ಲೂ ಒಂದೊಂದು ಕಾಲನ್ನಿಟ್ಟುಕೊಂಡು ಪ್ರಯಾಣ ಮಾಡುವುದು ಹೇಗೆ ಸಾಧ್ಯ? ಕನಕನಾಯಕನಿಗೆ ಇನ್ನೂ ಪ್ರಾಯದ ಕೆಚ್ಚು ಕುಂದಿರಲಿಲ್ಲ ರೋಷಪ್ರತಾಪಗಳು ತಗ್ಗಿರಲಿಲ್ಲ ಬೆಳಗೆದ್ದರೆ ಸಂಜೆಯಾದರೆ ಮೃಗಬೇಟೆಯ ಹಂಬಲ' ಅದರ ಸಾಧನಗಳ ಸಂಗ್ರಹಣ, ಆ ಸಂಬಂಧ ಮಾತುಕಥೆಗಳು, ಅದಕ್ಕೆ ತಕ್ಕ ಆಹಾರ ಪಾನೀಯಗಳು ಆ ಕೆಲಸಕ್ಕೆ ತಕ್ಕವರ ಸಹವಾಸ, ಹತ್ತೆಂಟು ನಾಯಿಗಳು ಇವುಗಳಲ್ಲೇ ಕಾಲಹರಣವಾಗುತ್ತಿದ್ದಿತು. ಆದರೆ ಮನುಷ್ಯನು ತನ್ನ ಜೀವಿತ ಯಾತ್ರೆಯಲ್ಲಿ ಸೇರಬೇಕಾದ ಸ್ಥಳವಾವುದೆಂಬುದು ಅಜ್ಞಾನಿಯಾದ ಅವನಿಗೆ ಗೋಚರವಾಗದಿದ್ದರೂ ವಿಧಿಗೆ ತಿಳಿಯದೆ! ವಿಧಿದೇವತೆಯು ಪ್ರಪಂಚದಲ್ಲಿ ಮಾನವರ ಜೀವಿತಗಳನ್ನು ಅದಕ್ಕೆ ತಕ್ಕ ಹಾಗೆ ರೂಪಿಸಿ ಯುಕ್ತಮಾರ್ಗಗಳಲ್ಲಿ ಹಚ್ಚುತ್ತಿರುವಳಲ್ಲವೆ? ಮುಂದೆ ಕೆಲದಿನಗಳಲ್ಲೇ ಒಂದಾನೊಂದು ರಾತ್ರೆ ಮಲಗಿದ್ದ ಕನಕನಾಯಕನಿಗೊಂದು ಕೌತುಕದ ಕನಸಾಯಿತು ಅದರಲ್ಲಿ—''ಎಲೋ ಕನಕಾ, ಕೈಯಲ್ಲೇನು ಶುನಕ, ಮಾಡುವಿಯೇನು

ಮರುಕ, ನೀರುವಿಯುಲ್ಲೋ ನರಕಾ, ಎನಗಾಗಿದೆ ಮರುಕ, ದಾಸನಾಗೋ ತಿರುಕಾ'' ಎಂದು ಹೇಳಿದಂತಾಯಿತು. ಒಡನೆ ನಾಯಕನು ಎಚ್ಚತ್ತನು. ಎದ್ದು ಕುಳಿತನು. ಕನಸಿನ ಸಂಗತಿಯನ್ನು ಕುರಿತು ಯೋಚಿಸಿಕೊಂಡು, — ''ಇದೇನಾಶ್ಚರ್ಯವು! ಧನುರ್ಬಾಣಗಳನ್ನು ಹಿಡಿದು ದುಷ್ಟಮೃಗಗಳ ಕೊಬ್ಬನ್ನಿಳಿಸುವ ನನಗೆ, ತಂಬುರಿಯನ್ನು ಹಿಡಿದು ದಾಸನಾಗೆಂದು ಯಾವನೋ ಬೋಧಿಸುತ್ತಿರುವನಲ್ಲ! ಶೂರನಾದ ನಾನು ಬೇಟೆಯನ್ನೂ ನನ್ನ ಮುದ್ದು ನಾಯಿಗಳನ್ನೂ ಬಿಟ್ಟು, ಜೋಳಿಗೆಯನ್ನು ಹಿಡಿದು ದೇಶದೇಶ ತಿರುಗಲಾ? ಇಲ್ಲ. ನಾನಿದಕ್ಕೆ ಒಪ್ಪಲಾರೆನು'' ಎಂದುಕೊಂಡು ಮರುದಿನದಿಂದ ಮತ್ತೆ ತನ್ನ ಬೇಟೆ ಮುಂತಾದುವುಗಳಲ್ಲೇ ಆಸಕ್ತನಾಗಿದ್ದುಬಿಟ್ಟನು.

ಹೀಗಿರುವಲ್ಲಿ ಮುಂದೆ ಕೆಲವು ದಿನಗಳೊಳಗೆ ಒಂದು ಸಂಗತಿ ನಡೆಯಿತು. ಕಾಗಿನೆಲೆ ಗ್ರಾಮಸ್ಥರಿಗೆ ಪಕ್ಕದ ಹಳ್ಳಿಯವರೊಡನೆ ಗಡಿಯ ಸ್ಥಳ ನಿರ್ದೇಶ ವಿಚಾರದಲ್ಲಿ ಒಂದು ವ್ಯವಹಾರವು ಹುಟ್ಟಿತು. ಮೊದಲು ಮಾತು ಕಥೆಗಳಲ್ಲಿದ್ದ ವ್ಯವಹಾರವು ಬರುತ್ತಾ ಬರುತ್ತಾ ವಿವಾದಕ್ಕಿಟ್ಟಿತು. ಪ್ರಾರಂಭಕ್ಕೆ ಬಾಯಿಮಾತುಗಳಲ್ಲಿ ಸಾಗುತ್ತಿದ್ದ ವಿವಾದವು ಕೊನೆಕೊನೆಗೆ ಕೈಗ ಕೈದುಗಳನ್ನು ತೆಗೆದುಕೊಳ್ಳುವಂತಹ ಕದನಕ್ಕಿಟ್ಟಿತು. ಕಾಳಗವೆಂದರೆ ಒಂಟಿಗಾಲಿನಿಂದ ನಿಲ್ಲುವ ತುಂಟರ ಗುಂಪೆಲ್ಲಾ ಒಂದಾಗಿ ಸೇರಿ ಗ್ರಾಮಸ್ಥರ ಮೇಲೆ ಧಾಳಿ ಮಾಡಲು ಹೊರಟರು. ಕನಕನಾಯಕನು ಇಂತಹ ಸಂದರ್ಭದಲ್ಲಿ ಹಿಂದುಳಿಯುವನೇ! ಕಾಳಗವು ಶಕ್ತ ಹಾಗೆ ನಡೆಯಿತು. ಕಾಳಗದಲ್ಲಿ ಒಬ್ಬ ಕುದುರೆಯ ರಾಹುತನು ಕನಕನಿಗೆ ಎದುರಾಗಿ ಅವನನ್ನು ಚೆನ್ನಾಗಿ ಮರ್ದಿಸಿದನು. ಕೈಕಾಲು ಮುಖಗಳು ಗಾಯವಾಗಿ ರಕ್ತವು ಧಾರೆ ಧಾರೆಯಾಗಿ ಸುರಿಯತೊಡಗಿತು. ಬಾಯಿ ಮೂಗುಗಳಿಂದಲೂ ರಕ್ತವು ಹೊರಹೊರಟಿತು. ಆಯಾಸವು ಅಧಿಕವಾಗಿ ದೇಹದ ಮೇಲೆ ಸ್ಮೃತಿ ತಪ್ಪಿತು. ಆ ಸ್ಥಿತಿಯಲ್ಲಿ ಕನಕನಿರುವಾಗ ಒಂದು ಕನಸಾದಂತಾಯಿತು. ಅದರಲ್ಲಿ— ''ಎಲೋ ಕನಕಾ, ನಿನ್ನನ್ನು ಯುದ್ಧದಲ್ಲಿ ಸೋಲಿಸಿದವರು ಯಾರೆಂದು ತಿಳಿದೆ? ನಾನೇ ಕೃಷ್ಣನು. ಇನ್ನಾದರೂ ದಾಸನಾಗಿ ನನ್ನನ್ನು ಭಜಿಸಿಕೊಂಡಿರಲು ಸಮ್ಮತಿಸುವೆಯೇನೋ! ನೋಡು, ಹಾಗೆ ಮಾಡುವೆಯಾದರೆ ನಿನ್ನ ಗಾಯಗಳೆಲ್ಲಾ ವಾಸಿಯಾಗುವುವು! ನಿನ್ನ ಕಷ್ಟಗಳೆಲ್ಲಾ ಪರಿಹಾರವಾಗು

ಷ್ಟ್ರ್ಯ" ಎಂದು ಹೇಳಿದಂತಾಯಿತು. ಕನಕನಾಯಕನು, ಏನು ಉತ್ತರ ಕೊಡುವುದಕ್ಕೂ ತೋರದೆ, ಮಾತನಾಡುವುದಕ್ಕೂ ಶಕ್ತಿಯುಂಟಾಗದಿರಲು ಕೇವಲ ಅಸ್ವತಂತ್ರನಂತೆ, ಆ ವ್ಯಕ್ತಿಯು ಎದುರಿಗೆ ಬಾಯಿ ತೆರೆದನು ಒಡನೆ ಮಾತನಾಡಿದ ಆ ವ್ಯಕ್ತಿಯು ಅವನ ಮೈಮೇಲೆ ಕೈಯಾಡಿಸಿ, ನಾಲಿಗೆಯನ್ನು ಮುಂಚಕ್ಕೆ ಎಳೆದು ಅದರ ಮೇಲೆ ಎರಡು ಬೀಜಾಕ್ಷರಗಳನ್ನು ಬರೆದು ಅದೃಶ್ಯವಾಗಿ ಬಿಟ್ಟಿತು. ಕನಕನಿಗೆ ಒಡನೆ ಎಚ್ಚರಾಯಿತು ಕಣ್ಣು ಬಿಟ್ಟನು ಎದುರಿಗೆ ಯಾರೂ ಇಲ್ಲ ಅವರೆ ಮೈಮೇಲಿನ ಗಾಯಗಳೆಲ್ಲಾ ಮಾಯವಾಗಿ ಬಿಟ್ಟಿದ್ದುವು ಅವನಿಗೆ ಅತ್ಯಂತ ಆಶ್ಚರ್ಯವೆನಿಸಿತು ಆಗ ಅವನಿಗಿದ್ದ ದುರಭಿಮಾನ ಅಹಂಕಾರಗಳು ತಗ್ಗಿದುವು. ಜ್ಞಾನೋದಯವಾಯಿತು ತನ್ನ ಜನ್ಮವು ದಾಸನಾಗುವುದಕ್ಕಾಗಿಯೇ ಆದುದೆಂಬ ಪ್ರಜ್ಞೆ ಯುಂಟಾಯಿತು. ಇವರೆಗೆ ಎರಡು ಮೂರು ನಾರಿ ಎಚ್ಚರಿಸಲ್ಪಟ್ಟಿದ್ದರೂ ಮೂಢನಾಗಿ ತಿರಸ್ಕರಿಸಿದ್ದ ತನ್ನ ಅವಿವೇಕವನ್ನು ಮನಸ್ಸಿನಿಂದ ನಿಂದಿಸಿಕೊಂಡನು ಮುಂದೆ ಜನ್ಮಸಾರ್ಥಕ್ಯಕ್ಕಾಗಿ ದಾಸನಾಗುವುದೇ ನಿಶ್ಚಯವೆಂದು ಸಿದ್ಧಾಂತ ಮಾಡಿಕೊಂಡನು ಇಂತು ಕನಕನಾಯಕನು-ಕನಕದಾಸನಾದನು

## ಅಧ್ಯಾಯ ೫ "ದಾಸರ ಮಹಿಮೆ"

ಪ್ರತಿಯೊಂದು ಚೇತನಾಚೇತನ ವಸ್ತುವಿನಲ್ಲಿಯೂ ಭಗವಂತನ ಅಂಶವಿಲ್ಲವೆಂಬುದನ್ನು ಸಕಲ ಮತಸ್ಥರೂ ಒಪ್ಪುವರಷ್ಟೆ ಚೆನ್ನಾಗಿ ಉಜ್ಜಿ ನಯಗೊಳಿಸುವುದಾದರೆ, ಒಂದು ಸಾಮಾನ್ಯ ಕಲ್ಲಿನ ತುಂಡು-ಮರದ ತುಂಡಿನಿಂದಲೂ, ತಕ್ಕಷ್ಟು ಕೌಶಲ್ಯವನ್ನು ಪಯೋಗಿಸಿ ಮಾಡುವುದಾದರೆ ಮನುಷ್ಯಬುದ್ಧಿಯಿಂದಲೂ ಎಂತೆಂತಹ ಅಮೌಲ್ಯ ವಸ್ತುಗಳು ಸಿದ್ಧವಾಗಲು ಶಕ್ಯವೆಂಬುದು ಎಲ್ಲರಿಗೂ ತಿಳಿದಿರುವುದು ಹಾಗೆಯೇ ಸಕಲರಲ್ಲೂ ಅಡಗಿರುವ ಚೈತನ್ಯಾಂಶವು ಮೇಲೆ ಮುಚ್ಚಲ್ಪಟ್ಟಿರುವ ಭೌತಿಕ ಸ್ಥೂಲ-ಸೂಕ್ಷ್ಮ ತತ್ವಗಳಿಂದ ಬಿಡುಗಡೆಯಾಗುತ್ತಾ ಎಷ್ಟೆಷ್ಟುಮಟ್ಟಿಗೆ ಶುದ್ಧವಾಗುವುದೋ, ಒಳಗಿರುವ ಭಗವಚ್ಚೈತನ್ಯವೂ ಅಷ್ಟಷ್ಟು ಸ್ಪಷ್ಟವಾಗಿ ಪ್ರಕಾಶಿಸತೊಡಗುವುದು. ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳೆಂಬ ಆರುಮಂದಿ ಬದ್ಧಶತ್ರುಗಳು, ಜೀವನಿಗೆ

ದಂಭ ಅಹಂಕಾರ ಈಷಣತ್ರಯಗಳು ಮುಂತಾದ ಅನೇಕ ಬಗೆಯ ಹೊದಿಕೆ ಗಳನ್ನು ಹೊದಿಸಿ, ಒಳಗಿರುವ ನಿರ್ಮಲ ಚೈತನ್ಯವು ಹೊರಕ್ಕೆ ಕಾಣಿಸದಂತೆ, ಮುಚ್ಚಿರುವರು ದುರಭಿಮಾನ, ಸ್ವಾರ್ಥತೆ, ದಂಭ ಮೋಹಗಳು ಕಳೆ ದಂತೆಲ್ಲಾ, ಜೀವನ ಸೌಂದರ್ಯವು ಪ್ರಕಾಶಿತವಾಗುವುದು ನಮ್ಮ ಕಥಾ ನಾಯಕರೂ ಮಾಯಾಮೋಹಿತರಾಗಿದ್ದಷ್ಟು ದಿನವೂ, ಬೂದಿಯಿಂದ ಮುಚ್ಚ ಲ್ಪಟ್ಟ ಕೆಂಡದಂತೆ, ಅವರ ಚೈತನ್ಯ ಪ್ರಭಾವವು ಪ್ರಕಾಶಗೊಳ್ಳಲಿಲ್ಲ. ಹುಳಿ ಹಣ್ಣು-ಕಲ್ಲು ಮರಳುಗಳಿಂದ ಉಜ್ಜಲ್ಪಟ್ಟರಲ್ಲದೆ, ಪಾತ್ರೆಗಂಟಿದ ಕಪ್ಪು ಹೇಗೆ ಬಿಡಲಾರದೋ ಹಾಗೆಯೇ ವಿವಿಧ ಕಷ್ಟ ಸಂಕಟ ತಾಪತ್ರಯ ಮನೋವ್ಯಥೆ ಗಳಿಗೆ ಒಳಗಾಗದೆ, ಬಹುಬಲವಾಗಿ ಜೀವನನ್ನಂಟಿದ ಕರ್ಮಬಂಧವೂ, ಕಾಮ ಕ್ರೋಧಾದಿ ಬದ್ಧ ಶತ್ರುಗಳೂ-ಅಭಿಮಾನ ಅಹಂಕಾರಾದಿಗಳೂ ಬಿಟ್ಟು ತೊಲ ಗವು. ದೇಹಮಾತ್ರೆಯ ಈ ಕಲ್ಮಷಗಳನ್ನು ನೀಗಿಸುವುದಕ್ಕಾಗಿ ವೈಷ್ಣವ ಪಂಥದವರು ಉಪಯೋಗಿಸುತ್ತಿರುವ ಕಲ್ಲು ಮರಳು ಬೂದಿ ಹುಳಿಹಣ್ಣು ಗಳೇ-ವ್ರತನಿಯಮ ಉಪವಾಸ ಹಬ್ಬ ಹರಿದಿನಗಳೆಂಬುವು ಅವುಗಳನ್ನು ಶ್ರದ್ಧಾಭಕ್ತಿಗಳಿಂದ ಅಭಿಮಾನ ಅಹಂಕಾರಗಳಿಂದ ಬಂಧಿತನಾಗದೆ ಮಾಡು ವುದಾದರೆ ಮನುಷ್ಯನು ತನ್ನ ಜೀವನ ಯಾತ್ರೆಯನ್ನು ಉತ್ತಮರೀತಿಯಲ್ಲಿ ಮುಗಿಸಬಹುದೆಂಬುದು ಅವರ ನಿಷ್ಠೆ! ನಂಬಿಕೆ! ಆಶ್ಯೆ! ವ್ರತೋಪವಾಸಾದಿ ಗಳು ಬುದ್ಧಿಕಡಮೆಯಾಗಿ ನಿರ್ಮಿಸಲ್ಪಡಲಿಲ್ಲ.

ಕುರುಬನಾಗಿ ಜನಿಸಿದ ಕನಕನಾಯಕನು, ಕನಕದಾಸನಾದನಷ್ಟೆ. ಭಗ ವದ್ಭಕ್ತರೂ-ಜ್ಞಾನಿಗಳೂ ಪ್ರಪಂಚದ ಯಾವ ದೇಶದಲ್ಲಿರಲಿ, ಯಾವ ಕಾಲ ದಲ್ಲಿರಲಿ, ಎಲ್ಲಿರಲಿ, ಅವರು ಬಾಹ್ಯ ವ್ಯವಹಾರಕ್ಕೆ ಯಾವ ಮತಸ್ಥರಾಗಲಿ ಯಾವ ಜಾತಿ ಕುಲಗಳಿಗೆ ಸೇರಿರಲಿ, ಅವರಲ್ಲಿ ಮಾನುಷತ್ವಕ್ಕಿಂತಲೂ ದೈವತ್ವವೇ ಹೆಚ್ಚು ಪ್ರಮಾಣದಿಂದಿರುವುದು ಆದುದರಿಂದ ಅವರು ಹೇಗಿದ್ದರೂ ವಂದನಾರ್ಹರು ಆದುದರಿಂದ ಸಕಲ ಕಲ್ಮಷಗಳೂ ತೊಳೆದು, ನಿರ್ಮಲಜ್ಯೋತಿಯಂತೆ ಪರಮ ಪರಿಶುದ್ಧರಾಗಿ ಪ್ರಕಾಶಿಸುತ್ತಿರುವ ನಮ್ಮ ಕಥಾನಾಯಕರನ್ನು ಬಹುವಚನದಿಂದ ಸಂಬೋಧಿಸಿ ಗೌರವಿಸುವುದು ನಮ್ಮ ಕರ್ತವ್ಯವು. ಈ ಕಾರಣದಿಂದ ಇನ್ನು ಮುಂದೆ ಅವರನ್ನು ಕನಕದಾಸರೆಂದೇ ಕರೆಯುವೆವು.

ಕನಕದಾಸರು ತಮ್ಮ ಮೇಲೆ ಭಗವಂತನ ಕೃಪೆಯುಂಟಾಯಿತೆಂದು ಪರಮಾನಂದಗೊಂಡರು. ತಮ್ಮ ಇಷ್ಟದೈವವನ್ನು ಮನದಣಿಯೆ ಹೊಗಳಿದರು. "ಬದುಕಿದೆನು ಬದುಕಿದೆನು ಭವವೆನಗೆ ಹಿಂಗಿತು | ಪದುಮನಾಭನ ಪಾದದೊಲುಮೆ ಎನಗಾಯಿತು" ಎಂಬುದು ಅವರು ದಾಸರಾದೊಡನೆಯೇ-ಅವರಿಗೆ ವೈರಾಗ್ಯ ಪ್ರಾಪ್ತವಾದೊಡನೆಯೇ ಅವರು ಹಾಡಿದ ಪ್ರಥಮ ಪದವೆಂದು ಹೇಳುತ್ತಾರೆ ತರುವಾಯ ದಾಸರಿಗೆ ತಮ್ಮ ಆಸ್ತಿ ಪಾಸ್ತಿಗಳೊಂದು ಕೆಲಸಕ್ಕೆ ಬಾರದ ಹೊರೆಯೆಂದು ಬೋಧವಾಯಿತು. ಒಡನೆ ತಮಗಿದ್ದ ಹೊಲಗದ್ದೆ ಮನೆಗಳು, ದವಸ ಧಾನ್ಯಗಳು ದನಕರುಗಳು, ಧನ ಕನಕಗಳು ಮುಂತಾಗಿ ಎಲ್ಲವನ್ನೂ-ವಿಪ್ರರಿಗೂ ದೀನಾನಾಥರಿಗೂ ದಾನವಾಗಿ ಹಂಚಿಕೊಟ್ಟು ಲೇಶಮಾತ್ರವೂ ಸಾವಕಾಶಮಾಡದೆ ಹೊರಹೊರಟು ಸಮೀಪದಲ್ಲೇ ವಾಸಿಸುತ್ತಿದ್ದ ಪಂಡಿತರೂ ಶ್ರೀ ವೈಷ್ಣವ ಮತಸ್ಥರೂ ಆದ ಶ್ರೀ ತಾತಾಚಾರ್ಯರೆಂಬ ಸತ್ಪುರುಷರೊಬ್ಬರನ್ನು ಆಶ್ರಯಿಸಿ ಅವರಿಂದ ಅಂಕಿತವನ್ನು ಪಡೆದು ದೇವರ ನಾಮಗಳನ್ನೂ ಭಗವನ್ಮಹಿಮೆಗಳನ್ನೂ ಹಾಡಲು ಪ್ರಾರಂಭಿಸಿದರು.

ಮುಂದೆ ಕೆಲದಿನಗಳು ಕಳೆಯಲು, ತಮ್ಮ ಕುಲದೈವವಾದ ಶ್ರೀ ವೆಂಕಟರಮಣಸ್ವಾಮಿಯನ್ನು ದರ್ಶನಮಾಡಬೇಕೆಂಬ ಅಪೇಕ್ಷೆಯು ಬಹು ಬಲವತ್ತರವಾಗಿ ಅವರನ್ನು ಬಾಧಿಸತೊಡಗಲು ಕನಕದಾಸರು ಒಡನೆ ತಿರುಪತಿಗೆ ಯಾತ್ರೆ ಹೊರಟರು. ಅವರಿಗ ದೇಹದಮೇಲೆ ಮಮತೆ ಅಭಿಮಾನಗಳಿರಲಿಲ್ಲ ಸೌಖ್ಯ ಸೌಲಭ್ಯಗಳನ್ನು ಅವರು ಎಣಿಸಲಿಲ್ಲ ಅವರಿಗೆ ಸೌಂದರ್ಯ-ಕುರೂಪಗಳೆಂಬ ವ್ಯತ್ಯಾಸವೇ ತೋರುತ್ತಿರಲಿಲ್ಲ ಶುಚಿರುಚಿಗಳೆಂಬುವನ್ನು ಅವರು ಗಮನಿಸುತ್ತಿರಲಿಲ್ಲ. ಅವರ ಮನಸ್ಸಿನಲ್ಲಿ ದಿನದ ಇಪ್ಪತ್ತನಾಲ್ಕು ಗಂಟೆಗಳೂ ನೆಲೆಗೊಂಡಿದ್ದುದೊಂದು ಹರಿವಿಷಯಚಿಂತನೆ ತಲೆಯೂ ಗಡ್ಡಮೀಸೆಗಳೂ ಬೆಳೆದುಹೋದುವು ! ಉಟ್ಟುಹೊದೆದ ಬಟ್ಟೆಗಳು ಹೊಲಸಾಗಿ ಅಸಹ್ಯವಾದುವು ದೇಹವೂ ಮಲಿನವಾಗಿ ಬಹು ವಿಕಾರರೂಪಿನಿಂದ ಕಾಣತೊಡಗಿತು ಸಾವಿರಾರು ನೊಣಗಳು ಮುತ್ತುವುವು ಅವುಗಳೆಲ್ಲವೂ ಅವರ ಮನಸ್ಸಿಗೆ ತೋರಲೇ ಇಲ್ಲ ಹೀಗಿರುವಲ್ಲಿ, ದಾಸರು, ಕೈಯಲ್ಲೊಂದು ನೋರೆಯಬುರುಡೆಯ ಏಕನಾದವನ್ನು ಹಿಡಿದು ಮಹದಾ

ನಂದದಿಂದ ಭಗವನ್ನಾಮಗಳನ್ನು ಪಾಡಿಕೊಳ್ಳುತ್ತಾ, ಯಾತ್ರೆ ಹೊರಟರು. ಆಗಿನಕಾಲದ ಯಾತ್ರೆಯು ಈಗಿನಂತಲ್ಲ! ಉಂಡುತಿಂದು ಉಟ್ಟುಹೊದೆದು ವಿವಿಧವಾಹನಗಳಲ್ಲಿ ಕುಳಿತು, ಮೈಯಲುಗದಂತೆ ಪ್ರಯಾಣಮಾಡಿ ಕೇವಲ ವಿಹಾರ ಮಾಡಿದಂತೆ-ಕ್ಷೇತ್ರಗಳಿಗ ಮಾಡುವ ಪ್ರಯಾಣವು ಯಾತ್ರೆಯೆನಿಸಿ ಕೊಳ್ಳದು. ದೇಹಮನೋಬುದ್ಧಿಗಳು ಒಂದಾಗಿಲ್ಲದಿದ್ದರೆ ಶ್ರದ್ಧಾಭಕ್ತಿಗಳು ಉಂಟಾಗವು. ಶ್ರದ್ಧಾಭಕ್ತಿವೈರಾಗ್ಯಾದಿಗಳುಂಟಾಗಬೇಕೆಂಬುದೇ ಯಾತ್ರೆ ಮಾಡುತ್ತಿದ್ದುದರ ಮುಖ್ಯ ಉದ್ದೇಶವು ಅದರಿಂದ ಪ್ರಾಪ್ತವಾಗುತ್ತಿದ್ದ ದೇಶಸಂಚಾರದ ಲೌಕಿಕಾನುಭವಗಳು ಗೌಣಫಲಗಳು ಪೂರ್ವದಲ್ಲಿ ಈಗಿನಂತೆ ಮಾರ್ಗಸೌಕರ್ಯವಿಲ್ಲದಿದ್ದುದರಿಂದ ಗುಡ್ಡಗಾಡುಗಳ ಕಲ್ಲುಮುಳ್ಳುಗಳನ್ನು ತುಳಿದು, ಬಹು ದೀರ್ಘದ ದಾರಿಯನ್ನು ಕಾಲು ನಡೆಯಿಂದಲೇ, ಉಪವಾಸ ವನವಾಸಗಳನ್ನು ಲೆಕ್ಕಿಸದೆ ಪ್ರಯಾಣಮಾಡಿದರಲ್ಲದೆ ಯಾತ್ರೆಯು ಸಾಗುವಂತಿರಲಿಲ್ಲ ಕನಕದಾಸರು ನೇರವಾಗಿ ಹೊರಟರು ಅನ್ನ ನೀರು-ನಿದ್ರೆ ಆಯಾಸಗಳನ್ನು ಗಮನಿಸದೆ, ರಾತ್ರೆ ಹಗಲುಗಳೆನ್ನದ, ನಿಂತಲ್ಲ ನಿಲ್ಲದೆ ಪ್ರಯಾಣಮಾಡಿ, ತಿರುಪತಿಯನ್ನು ಸೇರಿ ಭೂವೈಕುಂಠಾಧಿಪತಿಯ ದರ್ಶನ ಮಾಡಿ ಭಗವಂತನನ್ನು ಮನಸಾರೆ ಸ್ತುತಿಸಿದರು. ಆನಂದದ ಭರದಲ್ಲಿ ಕುಣಿಯುತ್ತಿದ್ದರು ಕಣ್ಣುಗಳಿಂದ ಆನಂದರಸವು ಧಾರೆಧಾರೆಯಾಗಿ ಸುರಿಯತೊಡಗಿತು ಅವರ ಮನಸ್ಸಿನಲ್ಲಿ ತಾವು ಸಾಕ್ಷಾತ್ ವೈಕುಂಠದಲ್ಲೇ ಇದ್ದೇವೆಂಬ ಭಾವನೆಯುಂಟಾಯಿತು. ಹಾಗೆ ಅಲ್ಲಿ ಕೆಲ ದಿನಗಳಿದ್ದ ಮೇಲೆ, ವೆಂಕಟೇಶ್ವರಸ್ವಾಮಿಯು ಒಂದಾನೊಂದುದಿನ ಆತನ ಕನಸಿನಲ್ಲಿ ಬಂದು— 'ಮಗೂ ನೀನಿನ್ನು ವ್ಯಾಸರಾಯರ ಮಠಕ್ಕೆ ಹೋಗಿ ಸೇರು' ಎಂದು ಆಜ್ಞೆ ಮಾಡಿದನು. ದಾಸರು ಸ್ವಾಮಿ ಸಾನ್ನಿಧ್ಯವನ್ನು ಬಿಟ್ಟು ಹೊರಡಬೇಕಾಯಿತು ತಮ್ಮ ತಂದೆಯೂ ಬಂಧುವೂ ಸರ್ವಸ್ವವೂ ಎಂದು ತಿಳಿದು ಭಜಿಸುತ್ತಿದ್ದ ಶ್ರೀವರನ ಸನ್ನಿಧಿಯನ್ನು ಬಿಡಲಾರದೆ, ತಾಯನ್ನು ಬಿಟ್ಟು ಹೊರಡುವ ಕಂದನಂತೆ ಗೋಳಿಡುತ್ತಾ, ಕನಕದಾಸರು ಭಗವದಾಜ್ಞಾಬದ್ಧರಾಗಿ, ಅಲ್ಲಿಂದ ಹೊರಟು, ಕಾವೇರೀ ಕಪಿಲಾ ನದಿಗಳ ಸಂಗಮಸ್ಥಾನದಲ್ಲಿರುವ ಸೋಸಲೆ ಯೆಂಬ ಪುಣ್ಯಸ್ಥಳದಲ್ಲಿದ್ದ ಮಠದಲ್ಲಿ ಭಗವತ್ಪೂಜಾನಿರತರಾಗಿದ್ದ ಶ್ರೀ ವ್ಯಾಸರಾಯಸ್ವಾಮಿಗಳವರ ಸನ್ನಿಧಿಗೆ ಬಂದರು.

ಶ್ರೀ ವ್ಯಾಸರಾಯಸ್ವಾಮಿಗಳು ಹದಿನಾರನೆಯ ಶತಮಾನದ ಪ್ರಾರಂಭ ದಲ್ಲಿ ವಿಜಯನಗರದಲ್ಲಿ ರಾಜ್ಯಭಾರ ಮಾಡುತ್ತಿದ್ದ ಶ್ರೀಕೃಷ್ಣರಾಯ-ಅಚ್ಯುತ ರಾಯರ ಕಾಲದಲ್ಲಿ (೧೫೩೯) ಇದ್ದವರು ವಿಜಯನಗರದ ರಾಜರು, ಈ ಗುರುಗಳಲ್ಲಿ ಅತಿಶಯ ಗೌರವಾದರಗಳನ್ನಿಟ್ಟು ಸೇವಿಸುತ್ತಿದ್ದರು ಸ್ವಾಮಿಗಳವರು, ಅವರ ಪ್ರಾರ್ಥನೆಯಂತೆ, ಒಂದು ಸಾರಿ ರಾಜಸಿಂಹಾಸನದಮೇಲೆ ಕುಳಿತು, ರಾಜರಿಗೆ ಪ್ರಾಪ್ತವಾಗಿದ್ದ ಕುಯೋಗ ಮುಹೂರ್ತವು ಮುಗಿಯುವವರೆಗೂ ಆಳಿದರಂತೆ' ಆ ಪದ್ಧತಿಯು ಆ ಮಠದಲ್ಲಿ ಈಗಲೂ ನಡೆಯುತ್ತಿರುವುದು. ಸ್ವಾಮಿಯ ಪೂಜಾಕಾರ್ಯಗಳೆಲ್ಲವೂ, ಮುಗಿದ ತರುವಾಯ ನಿತ್ಯವೂ ಶ್ರೀಗಳವರು ಪದಾರೋಹಣ ಮಾಡಿ ರಾಜಮರ್ಯಾದೆಗಳನ್ನೂ ಸ್ವೀಕರಿಸುತ್ತಿರುವರು. ಶ್ರೀ ವ್ಯಾಸರಾಯರು ಹನ್ನೆರಡು ವರ್ಷಕಾಲ ತಿರುಪತಿಯಲ್ಲಿ ಶ್ರೀ ವೆಂಕಟರಮಣನ ಪೂಜೆಯಲ್ಲಿದ್ದವರು. ಅವರು ಮಹಾಮಹಿಮರಾದ ಶ್ರೀ ಬ್ರಹ್ಮಣ್ಯತೀರ್ಥ ಶ್ರೀಪಾದಂಗಳವರ ಕರಕಮಲ ಸಂಜಾತರು. ಅವರ ವಿದ್ಯಾ ಗುರುಗಳು ಮಹಾ ಪ್ರತಿಭಾನ್ವಿತರಾದ ಶ್ರೀಪಾದರಾಯಸ್ವಾಮಿಗಳು. ಈ ವ್ಯಾಸರಾಯರೇ ಪುರಂದರ ಗಡದ ಕೃಷ್ಣಪ್ಪನಾಯಕರಿಗೆ ಪುರಂದರವಿಠಲನೆಂಬ ಅಂಕಿತ ವನ್ನು ದಯಪಾಲಿಸಿ, ಕನ್ನಡನಾಡಿಗೊಂದು ಅಮೌಲ್ಯ ಸಂಗೀತ-ಸಾಹಿತ್ಯ ರತ್ನವನ್ನು ಅನುಗ್ರಹಿಸಿ ಕೊಟ್ಟ ದಾಸಕೂಟದ ಪ್ರಥಮಾಚಾರ್ಯರು. ಅವರು ಭಗವದ್ಭಕ್ತ ಶಿರೋಮಣಿಯಾದ ಪ್ರಹ್ಲಾದನ ಅಂಶಸಂಭೂತರೆಂದು ಪ್ರಸಿದ್ಧರಾಗಿದ್ದಾರೆ.

ಶ್ರೀ ಕನಕದಾಸರು ಸೋಸಲೆಗೆ ಬಂದು, ಮಠದ ಬಾಗಿಲಿನಲ್ಲಿ ಕುಳಿತಿದ್ದಾರೆ. ಅವರು ಬಂದರೆಂದು ಒಡನೆ ಅವರನ್ನು ಕರೆದು ಆದರಿಸುವರಾರು! ಅಲ್ಲೇ ತಿರುಗಾಡುತ್ತಿದ್ದ ಮಠದ ಪರಿಚಾರಕ ವರ್ಗದವರೂ ಇತರ ಆಶ್ರಿತ ಬ್ರಾಹ್ಮಣರೂ ಅವರನ್ನು ನೋಡಿ, ಅವರ ಹೊಲಸು ಮೈಯನ್ನೂ 'ಗೊವ್' ಎಂದು ನೊಣವುತ್ತುವ ಹೊಲಸು ಬಟ್ಟೆಗಳನ್ನೂ ಕಂಡು ಅಸಹ್ಯಪಟ್ಟು— "ಎಲೋ ನೀನು ಯಾರು! ಇಲ್ಲಿಗೇಕೆ ಬಂದೆ. ಹೊರಡು ಹೊರಡು" ಎಂದು ತಿರಸ್ಕರಿಸತೊಡಗಿದರು. ಆಗ ದಾಸರು ತಾವು ಯಾರೆಂಬುದನ್ನು— 'ನಾವು ಕುರುಬರು ನಮ್ಮ ದೇವರೇ ಬೀರಯ್ಯ! ಕಾವ ನಮ್ಮಜ್ಜ ನರಕುರಿ ಹಿಂಡುಗಳ!' ಎಂಬ ಪದವನ್ನು ಹಾಡಿ, ಪರಿಚಯ ಮಾಡಿಸಿದರು, ಮತ್ತು—

'ಸ್ವಾಮಿಾ, ನಾನು ಶ್ರೀಗಳವರ ಚರಣಾನುಗ್ರಹವನ್ನು ಆಶಿಸಿ ಬಂದಿದ್ದೇನೆ. ದಯಮಾಡಿ ಅವರ ಪಾದದರ್ಶನ ಮಾಡಿಸಬೇಕು' ಎಂದು ಬೇಡಿಕೊಂಡರು ಆದರೆ ದುರಭಿಮಾನದಿಂದ ಬೀಗುತ್ತಿದ್ದ ಅವರು ಶಾಠ್ಯದಿಂದ, ದಾಸರನ್ನು ಲಕ್ಷ್ಯೆಗೆ ತಾರದೆ—"ಹೋಗು ಹೋಗು. ಮಠದ ಪವಿತ್ರ ಸ್ಥಳವನ್ನು ಅಂಡೆಕುರುಬನಾದ ನೀನು ಅಪವಿತ್ರಗೊಳಿಸಬೇಡ" ಎಂದು ಗದರಿಸುತ್ತಿದ್ದರು. ಅಷ್ಟರಲ್ಲಿ ಶ್ರೀಗಳವರೂ ಹೊರಕ್ಕೆ ಬರಲು, ದಾಸರು ಅವರಿಗೂ ಸಾಷ್ಟಾಂಗ ನಮಸ್ಕಾರ ಮಾಡಿ, ಅನುಗ್ರಹಿಸಬೇಕೆಂದು ಬೇಡಿಕೊಂಡರು ಮಹಾನುಭಾವರಾದ ವ್ಯಾಸರಾಯಸ್ವಾಮಿಗಳವರು ತಮ್ಮ ಜ್ಞಾನದೃಷ್ಟಿಯಿಂದ ಕನಕದಾಸರ ಸಮಸ್ತ ವೃತ್ತಾಂತವನ್ನು ತಿಳಿದುಕೊಂಡರು. ಅಂತಹ ಭಕ್ತಶಿರೋಮಣಿಯು ತಮ್ಮಲ್ಲಿಗೆ ಬಂದುದು ಅವರಿಗೆ ಪರಮಸಂತೋಷವನ್ನುಂಟು ಮಾಡಿತು. ಒಡನೆ ಅವರು ಹಸನ್ಮುಖದಿಂದ—'ಕನಕಾ ನೀನು ಇಲ್ಲೇ ಇದ್ದುಬಿಡು' ಎಂದು ನುಡಿದುಬಿಟ್ಟರು ಶ್ರೀಗಳವರ ನುಡಿಯು ಮಠೀಯ ಇತರ ಬ್ರಾಹ್ಮಣರಿಗೆ ರುಚಿಸಲಿಲ್ಲ. ಆದರೂ ಅವರ ಆಜ್ಞೆಗೆ ವಿರೋಧವನ್ನು ಹೇಳುವಂತಿರಲಿಲ್ಲ ಶ್ರೀ ಕನಕದಾಸರು ಮುಂದೆ ಮಠದಲ್ಲಿಯೇ ಇದ್ದು, ಮಠದ ಬಾಗಿಲು ಕಾಯುವಿಕೆ, ಬಟ್ಟೆ ಒಗೆಯುವಿಕೆ ಮುಂತಾದ ಚಿಲ್ಲರೆ ಕೆಲಸಗಳನ್ನು ಮಾಡಿಕೊಳ್ಳುತ್ತಾ ತಮ್ಮ ಇಷ್ಟದೈವವಾದ ಆದಿಕೇಶವ ಸ್ವಾಮಿಯನ್ನು ಪರಿಪರಿಯಿಂದ ಹಾಡಿ ಸ್ತುತಿಸುತ್ತಾ ಪರಮಸಂತುಷ್ಟರಾಗಿ ಇದ್ದುಬಿಟ್ಟರು.

ಮುಂದೆ ಕಾಲವು ಸಾಗಿದಂತೆಲ್ಲಾ ಶ್ರೀ ರಮಾವಲ್ಲಭನ ಅಂತರಂಗ ಭಕ್ತರಾದ ಕನಕದಾಸರಿಂದ ಅನೇಕ ಅದ್ಭುತ ಕಾರ್ಯಗಳು ನಡೆದುವು. ಅವು ತಮ್ಮ ಕೀರ್ತಿ ಪ್ರತಿಷ್ಠೆಗಳನ್ನು ಹೆಚ್ಚಿಸಿಕೊಳ್ಳಬೇಕೆಂದು ಅವರೇ ಉದ್ದೇಶಪಟ್ಟು ಮಾಡಿದುವುಗಳಲ್ಲ. ಅವರನ್ನು ಹೀನಕುಲಜನೆಂದೂ-ಅಕ್ಷರಶತ್ರುವೆಂದೂ ದ್ವೇಷಿಸಿ-ದೂಷಿಸುತ್ತಿದ್ದ ಅಸೂಯಾತ್ಮರ ಅಭಿಪ್ರಾಯಗಳನ್ನು ಬದಲಿಸುವುದಕ್ಕಾಗಿ ಆಗಾಗ ನಡೆದ ಸಂಗತಿಗಳೇ ಕಥೆಗಳಾಗಿ ಭಕ್ತಜನಾನಂದಕರಗಳಾಗಿವೆ. ಸರ್ವತ್ರ ವ್ಯಾಪಿಸಿರುವ ವಿದ್ಯುಚ್ಛಕ್ತಿಯು ಅದಕ್ಕಾಗಿ ಏರ್ಪಟ್ಟ ಯೋಗ್ಯವಸ್ತುವಿನಲ್ಲಿ ಮಾತ್ರಪ್ರಕಾಶಗೊಳ್ಳುವುದಲ್ಲದೆ, ಎಲ್ಲಾ ಕಡೆಯಲ್ಲೂ ಹೇಗೆ ಬೆಳಗಲಾರದೋ ಹಾಗೆಯೇ ಭಗವನ್ಮಹಿಮೆಯೂ

ಯೋಗ್ಯಪಾತ್ರರಾದ ಆತನ ಭಕ್ತರ ಮೂಲಕವಲ್ಲದೆ ಅನ್ಯಥಾ ಪ್ರಕಟವಾಗುವುದಿಲ್ಲ. ಆದರೆ ಪ್ರತ್ಯಕ್ಷ ಪ್ರಮಾಣವನ್ನು ಮಾತ್ರವೇ ನಂಬುವ ಕೆಲವುಂದಿ ಈಗಿನ ವಿಜ್ಞಾನ ಶಾಸ್ತ್ರಾಧಾರಕರಿಗೆ ಅವುಗಳಲ್ಲಿ ನಂಬಿಕೆ ಹುಟ್ಟಲಾರದು.—ಹೋಗಲಿ! ಭಗವದ್ವಿಚಾರಗಳನ್ನೂ-ಸೃಷ್ಟಿಸೌಂದರ್ಯವನ್ನೂ ಕಿವಿಯುಳ್ಳವರು ಮಾತ್ರ ಕೇಳಿ-ಕಣ್ಣುಳ್ಳವರು ಮಾತ್ರ ನೋಡಬಲ್ಲರಲ್ಲದೆ, ಎರಡು ಕಾಲಿನ ಮನುಷ್ಯರೆಲ್ಲರಿಗೂ ಹಾಗೆ ಮಾಡಲು ಸಾಧ್ಯವಿಲ್ಲ ಹಾಗೆಯೇ ಅಘಟನೆಗಳನ್ನೂ ಘಟನೆಮಾಡಿಸಬಲ್ಲ ಸರ್ವಶಕ್ತನ ವಿಚಾರವನ್ನೂ ನಂಬಿಕೆಯುಳ್ಳವರು ಮಾತ್ರ ನಂಬಬಲ್ಲರು. ನೋಡಲೇಕೂಡದೆಂದು ಹಟತೊಟ್ಟು-ಕಣ್ಣುಮುಚ್ಚಿಕೊಂಡು ಕುಳಿತವರಿಗ ಹೇಗೆ ತೋರಿಸಲಾದೀತು!-ಆದರ ನಮ್ಮ ಬಡ ತತ್ವಶಾಸ್ತ್ರವು ಅರಸಿ ಕಾಣದ ಅಸಂಖ್ಯ ವಿಚಿತ್ರಸಂಗತಿಗಳು ಭೂಮಿ-ಅಂತರಿಕ್ಷಗಳಲ್ಲೂ, ವೇದ ಉಪನಿಷದಾದಿಗಳು ಹೊಗಳಲರಿಯದ ಅನಂತ ಮಹಿಮೆಗಳು ಸರ್ವೇಶ್ವರನಲ್ಲೂ ಇರುವುವೆಂಬುದನ್ನು ಮಾತ್ರ ಯಾರೂ ಮರೆಯಬಾರದು.

ಅವರ ಮಹಿಮಾಪ್ರದರ್ಶಕವಾದ ಕಥೆಗಳಲ್ಲಿ ಕೆಲವು,

೧. ಒಂದಾನೊಂದುದಿನ ಪ್ರಾತಃಕಾಲ ಶ್ರೀಗಳವರು ಸ್ನಾನಸಂಧ್ಯಾದಿಗಳನ್ನು ಮುಗಿಸಿಕೊಂಡು ಮಾನಸಪೂಜೆಗೆ ಆರಂಭಿಸಿದ್ದರು. ಹೊರಗೆ ಕನಕದಾಸರೂ ಆ ವೇಳೆಯಲ್ಲೇ ಮಾನಸಪೂಜೆಗೆ ತೊಡಗಿದ್ದರು. ಸ್ವಾಮಿಗಳು ತಮ್ಮ ಹೃದಯ ಕಮಲದಲ್ಲಿ ತಮ್ಮ ಇಷ್ಟದೈವದ ಭವ್ಯಮೂರ್ತಿಯನ್ನು ಸ್ಥಾಪನೆಮಾಡಿ, ದಿವ್ಯ ರತ್ನಾಭರಣ ಕಿರೀಟ ಕುಂಡಲಾದಿಗಳಿಂದ ಅಲಂಕರಿಸಿ, ತುಳಸಿಪುಷ್ಪಾದಿಗಳಿಂದ ಅರ್ಚಿಸಿದರು. ಅಷ್ಟರಲ್ಲಿ ವೈಜಯಂತೀ ಮಾಲೆಯನ್ನು ಸಮರ್ಪಿಸಬೇಕೆಂಬ ಭಾವವು ಹೊಳೆಯಿತು. ಅದನ್ನು ಸ್ವಾಮಿಯ ಕಂಠಕ್ಕೆ ಹಾಕಲು ಅದು ಕಿರೀಟದ ಮೂಲಕ ಹಿಡಿಸುವಂತಿರಲಿಲ್ಲ ಏನು ಮಾಡಬೇಕೆಂದು ಯೋಚಿಸತೊಡಗಿದರು. ಅಷ್ಟರಲ್ಲಿ ಹೊರಗೆ ಕುಳಿತಿದ್ದ ಕನಕದಾಸರು,—"ಮಹಾಪ್ರಭೋ ಯೋಚಿಸುವುದೇಕೆ? ಸ್ವಾಮಿಯ ಕಿರೀಟವನ್ನು ತೆಗೆದು ಮಾಲೆಯನ್ನು ಸಮರ್ಪಿಸೋಣವಾಗಲಿ!" ಎಂದು ಕೂಗಿಕೊಂಡರು. ತಮ್ಮ ಮನಸ್ಸಿನ ಯೋಚನೆಯನ್ನೂ ಭೇದಿಸಿ ತಿಳಿದ ಕನಕದಾಸರ ಮಹಿಮೆಗಾಗಿ ಶ್ರೀಗಳವರಿಗೆ ಅದ್ಭುತವೆನಿಸಿತು. ಅವರ ಆನಂದಾಶ್ಚರ್ಯಗಳಿಗೆ ಮೇರೆಯಿಲ್ಲವಾಯಿತು. "ಧನ್ಯ ಕನಕಾ-ನೀನೆ ಧನ್ಯನು" ಎಂದು ಹೊಗಳಿದರು.

ಬಳಿಕ ಶ್ರೀಗಳವರಿಗೆ ನಮ್ಮ ಕಥಾನಾಯಕರ ವಿಷಯದಲ್ಲಿ ಅನಿರ್ವಚನೀಯವಾದ ಪ್ರೀತಿವಿಶ್ವಾಸಗಳುಂಟಾದುವು. ಜ್ಞಾನಿಗಳು ಚೇತನರ ಪಾವಿತ್ರ್ಯತೆಯನ್ನಲ್ಲವೆ ಮೆಚ್ಚುವರು! ಅವರು ನೀತಿಯನ್ನಲ್ಲದೆ ಜಾತಿಮತಗಳನ್ನು ಗಮನಿಸಲಾರರಲ್ಲವೆ? ಮುಂದೆ ಕನಕದಾಸರನ್ನು ಅತ್ಯಂತ ಆದರಾಭಿಮಾನಗಳಿಂದ ನೋಡಿಕೊಳ್ಳಸಾಗಿದರು.

೨. ತಮ್ಮ ಮಾನಸಪೂಜೆಯ ಅತ್ಯಂತ ಗೂಢ ರಹಸ್ಯವನ್ನೂ ಕರತಲಾಮಲಕದಂತೆ ತಿಳಿದುಕೊಂಡ, ಕನಕದಾಸರ ಮಹಿಮೆಗಾಗಿ ಶ್ರೀಗಳವರು ಅದ್ಭುತಪಟ್ಟು ಆಗಾಗೆ ಅವರ ಪ್ರಶಂಸೆ ಮಾಡುತ್ತಿದ್ದರು. ಅವರ ವಿಷಯದಲ್ಲಿ ಬರುತ್ತಾ ಬರುತ್ತಾ ಅಧಿಕ ಪ್ರೀತಿ-ವಿಶ್ವಾಸ ಪೂಜ್ಯಭಾವಗಳುಂಟಾಗಿ ಶ್ರೀಗಳವರೇ ಸ್ವಹಸ್ತ ತೀರ್ಥ ಕೊಡುವಂತಹ ಪರಿಸ್ಥಿತಿಯೂ ಉಂಟಾಯಿತು. ಆಗ ಮಾತ್ರ ಮರೀಯರು ಸಹಿಸಲಿಲ್ಲ. ಸ್ನಾನಸಂಧ್ಯಾದಿಗಳಿಗೇ ಅರ್ಹನಲ್ಲದ, ಹೀನಕುಲದವನಿಗೆ ಶ್ರೀಗಳವರು ತೀರ್ಥ ಕೊಡುವುದೂ-ಕೇವಲ ಕುರುಬನೊಂದಿಗೆ ಸನ್ಯಾಸಿಗಳಾದ ಅವರು ದೇವರು-ಧರ್ಮ ಮುಂತಾದ ವಿಚಾರಗಳಲ್ಲಿ ಸಂಭಾಷಿಸುತ್ತಿದ್ದುದೂ ಕರ್ಮನಿಷ್ಠರೂ ಪಂಡಿತರೂ ಆದ ಬ್ರಾಹ್ಮಣರನ್ನು ಅವಮಾನಗೊಳಿಸಿದಂತೆ ಎಂದು ಅವರ ಭಾವನೆಯಾಯಿತು ಹೀಗಿರಲು ಒಂದಾನೊಂದುದಿನ ದೇವತಾರ್ಚನೆ ಮುಗಿದು ತೀರ್ಥಕೊಡುವ ಸಮಯವು ಬಂದಾಗ್ಗೆ, ತೀರ್ಥವು ನನಗೆ ಮುಂದಾಗಬೇಕು-ತನಗೆ ಮುಂದಾಗಬೇಕು ಎಂಬ ಚರ್ಚೆಗೆ ಪ್ರಾರಂಭವಾಯಿತು. ತಾವು ದೊಡ್ಡವರು-ತಾವು ಪಂಡಿತರು ಎಂಬ ಅಹಂಕಾರದಿಂದ ಬೀಗುತ್ತಿದ್ದ ಅವರಿಗೆ ಪಾಂಡಿತ್ಯವೆಂದರೆಂಥದೆಂಬುದನ್ನು ತೋರಿಸಬೇಕೆಂದು ಶ್ರೀಗಳವರಿಗೆ ಅಭಿಲಾಷೆ ಹುಟ್ಟಿತು. ಒಡನೆ ನೈವೇದ್ಯಕ್ಕಾಗಿ ಬಂದಿದ್ದ ರಸಬಾಳೆಯ ಹಣ್ಣುಗಳಲ್ಲಿ ಕೆಲವನ್ನು ತೆಗೆದುಕೊಂಡು, ಎಲ್ಲರನ್ನೂ ಕರೆದು ಒಬ್ಬೊಬ್ಬರಿಗೆ ಒಂದೊಂದರಂತೆ ಕೊಟ್ಟು,— 'ಇವುಗಳನ್ನು ಯಾರೂ ಇಲ್ಲದೆಡೆಯಲ್ಲಿ, ಯಾರಿಗೂ ಕಾಣದಂತೆ ತಿಂದು ನಿಮ್ಮಲ್ಲಿ ಯಾರು ಮೊದಲು ಬರುತ್ತಾರೋ ಅವರಿಗೆ ಮೊದಲು ತೀರ್ಥವೆಂದರು. ಕನಕದಾಸರಿಗೂ ಒಂದು ಹಣ್ಣು ಕೊಡಲ್ಪಟ್ಟಿತು. ಎಲ್ಲರೂ ಹೊರಟರು. ಒಬ್ಬರೊಂದು ಕತ್ತಲು ಕೋಣೆಗೆ, ಮತ್ತೊಬ್ಬರು ಗೋಡೆಯ ಹಿಂದೆ, ಬೇರೊಬ್ಬರು ಊರಹೊರಗೆ, ಹೀಗೆ ನಡೆದು, ಹಿಂದೆ ಮುಂದೆ ನೋಡಿಕೊಂಡು

ತಿಂದು ಶೀಘ್ರನಾಗಿ ಬಂದು, ಯಾರಿಗೂ ದೃಷ್ಟಿಗೋಚರನಾಗದಂತೆ ತಿಂದು ಬಂದೆವೆಂದು ಹೇಳಿದರು. ಕನಕದಾಸರು ಮಾತ್ರ ಹಣ್ಣನ್ನು ತಿನ್ನಲಾರದೆ ಹಾಗೇ ಸ್ವಾಮಿಗಳೆದುರಿಗೆ ತಂದಿಟ್ಟರು.—"ಇದೇನು ಕನಕಾ, ಯಾರೂ ಇಲ್ಲದೆ, ಮರೆಯಾದ ಸ್ಥಳವು ನಿನಗೆ ಎಲ್ಲೂ ಸಿಕ್ಕಲಿಲ್ಲವೆ?" ಎಂದು ಸ್ವಾಮಿಗಳವರು ಪ್ರಶ್ನಿಸಲು, ದಾಸರು—"ಮಹಾಸ್ವಾಮಿ ಸೂರ್ಯ ಚಂದ್ರಾದಿಗಳೂ, ವಾಯು ಪೃಥ್ವಿ ಮುಂತಾದ ಪಂಚಭೂತಾಭಿಮಾನಿ ದೇವತೆಗಳೂ, ಸರ್ವರ ದೇಹದಲ್ಲೂ ನೆಲೆಸಿರುವ ಇಪ್ಪತ್ತೈದುಸುಂದಿ ತತ್ವಾಭಿಮಾನಿದೇವತೆಗಳೂ ಇಲ್ಲದೆ ಸರ್ವಾಂತರ್ಯಾಮಿಯಾದ ಶ್ರೀಮನ್ನಾರಾಯಣಮೂರ್ತಿ, ಇಷ್ಟು ಮಂದಿಯೂ ನಾವು ಮಾಡುತ್ತಿರುವ ಕಾರ್ಯವನ್ನು ಸರ್ವದಾ ಸಾಕ್ಷಿರೂಪರಾಗಿ ನೋಡುತ್ತಿರುವಲ್ಲಿ, ಸ್ವಾಮಿ ಯಾರಿಗೂ ಕಾಣದಂತೆ ತಿನ್ನಲಾರದೆ ಹೋದೆನು" ಎಂದು ನುಡಿದರು. ಆಗ ಆ ಮಾತನ್ನು ಕೇಳಿದೊಡನೆಯೇ ಪಂಡಿತರಿಗೆ ತಮಗಿದ್ದ ಶಾಸ್ತ್ರಜ್ಞಾನದ ಮತ್ತು ಪಾಂಡಿತ್ಯದ ಬೆಲೆ ಎಷ್ಟೆಂಬುದು ಸ್ಪಷ್ಟವಾಯಿತು. ಎಲ್ಲರೂ ತಲೆಯನ್ನು ತಗ್ಗಿಸಿ,—"ನಿಜ, ಕನಕನು ಕುರುಬನಾದಗೂ ದೊಡ್ಡ ವಿಷಯಗಳನ್ನು ತಿಳಿದುಕೊಂಡಿದ್ದಾನೆ" ಎಂದುಕೊಂಡರು.

೫. ಮತ್ತೆ ಕೆಲವು ದಿನಗಳು ಕಳೆದುವು ಕನಕದಾಸರಿಗೆ ಶ್ರೀಗಳವರು ಕೊಡುತ್ತಿದ್ದ ಗೌರವದಿಂದ ತಮ್ಮ ಗೌರವಕ್ಕೆ ಹಾನಿಯುಂಟಾಗುತ್ತದೆಂದೂ, ಅಂತಹ ಸ್ಥಳದಲ್ಲಿರುವುದಕ್ಕಿಂತಲೂ ಎಲ್ಲಿಗಾದರೂ ಹೊರಟು ಹೋಗುವುದೇ ಮೇಲೆಂದೂ ಬ್ರಾಹ್ಮಣರಲ್ಲಿ ಕೆಲವರು ಗೊಣಗಿಕೊಳ್ಳತೊಡಗಿದರು 'ಮೊದಲು ತೀರ್ಥದಗಲಾಟೆ' ಯು ಪುನಃ ಪ್ರಾಪ್ತವಾಯಿತು ಆಗ ಒಂದು ದಿನ ಸ್ವಾಮಿಗಳವರು, ಒಂದು ಚಿಕ್ಕ ವಿನೋದವನ್ನು ಮಾಡಲೆಳೆಸಿದರು. ಪೂಜೆ ನಡೆದು, ತೀರ್ಥ ಕೊಡಲು ಕುಳಿತ ವೇಳೆಯಲ್ಲಿ ಕೈಯಲ್ಲೊಂದು ಚಿಕ್ಕ ಸಾಲಗ್ರಾಮವನ್ನು ಮುಚ್ಚಿಟ್ಟುಕೊಂಡು, 'ನನ್ನ ಕೈಯಲ್ಲಿರುವುದೇನೆಂಬುದನ್ನು ಹೇಳಿದವರಿಗೆ ಮೊದಲು ತೀರ್ಥ' ವೆಂದರು. ಬ್ರಾಹ್ಮಣ ವರ್ಗದಲ್ಲಿ ಕೆಲ ಹೊತ್ತು ನಿಶ್ಶಬ್ದವುಂಟಾಯಿತು ತರುವಾಯ ಒಬ್ಬರು, ಅಂಗಾರವಿದೆಯೆಂದರು, ಮತ್ತೊಬ್ಬರು ತುಲಸೀದಳವೆಂದರು, ಬೇರೊಬ್ಬರು ಗಂಧದ ಗುಳಿಗೆಯೆಂದರು, ಇನ್ನೊಬ್ಬರು ಬರೀ ಮುಷ್ಟಿಯೆಂದರು. ಶ್ರೀಗಳವರು ಅವರ

ಮಾತುಗಳಿಗೆ ಹಸನ್ಮುಖದಿಂದ ತಲೆಯನ್ನಾಡಿಸುತ್ತಾ, ಅಷ್ಟರಲ್ಲಿ ಕನಕದಾಸರು ಒಳಕ್ಕೆ ಬರಲು,—"ಕನಕಾ ನನ್ನ ಕೈಯಲ್ಲಿರುವುದೇನು ಹೇಳು!" ಎಂದರು. ಒಡನೆ ಆ ಭಕ್ತಶಿರೋಮಣಿಯು-ಧ್ಯಾನಿಸಿನೋಡಿ, ಪ್ರತ್ಯಕ್ಷ ಕಂಡರೋ ಎಂಬಂತೆ-ಕುಣಿಯತೊಡಗಿ, "ಈತನೀಗ ವಾಸುದೇವನು-ಲೋಕದೊಡೆಯ-ಈತನೀಗ ವಾಸುದೇವನು" ಎಂಬ ಕೀರ್ತನೆಯನ್ನು ಹಾಡಿ ಕೈಯಲ್ಲಿರುವುದು ವಾಸುದೇವ ಸಾಲಿಗ್ರಾಮವೆಂಬರ್ಥವನ್ನು ಸೂಚಿಸಿದರು. ಶ್ರೀಗಳವರು ಮುಷ್ಟಿಯನ್ನು ತೆರೆಯಲು, ಶಾಸ್ತ್ರವಿಧಿಗೆ ಅನುಸಾರವಾಗಿದ್ದಷ್ಟು ಚಕ್ರ-ಸುಳಿಗಳೊಂದಿಗೆ ಕೂಡಿ ಶೋಭಿಸುತ್ತಿದ್ದ ವಾಸುದೇವ ಸಾಲಗ್ರಾಮವನ್ನು ಕಂಡು ಎಲ್ಲರೂ ಭ್ರಾಂತರಾದರು. "ಕನಕನು ಸಾಮಾನ್ಯನಲ್ಲ!-ಕನಕನನ್ನು ಕೆಣಕಬೇಡಿ- ಕೆಣಿಕಿತಿಣುಕಬೇಡಿ" ಎಂದು ನುಡಿದು ಶ್ರೀ ವ್ಯಾಸರಾಯಸ್ವಾಮಿಗಳು ಮರೀಯರನ್ನು ಮತ್ತೊಂದು ಸಾರಿ ಎಚ್ಚರಿಸಿದರು.

೪. ಒಂದು ಸಾರಿ ಶ್ರೀ ವ್ಯಾಸರಾಯರು ಕನಕದಾಸರ ಅಂತರಂಗದ ಪರಿಶುದ್ಧತೆಯನ್ನು ಪ್ರಕಟಪಡಿಸಲು ಒಂದು ಚಮತ್ಕಾರ ಮಾಡಿದರು. ತಮ್ಮ ಪರಿವಾರದ ಮರೀಯು ಬ್ರಾಹ್ಮಣರಾದಿಯಾಗಿ ಎಲ್ಲರ ಕೈಯಲ್ಲೂ ಒಂದೊಂದು ಕಲಶವನ್ನು ಕೊಟ್ಟು, ಅದನ್ನು ನದಿಯಲ್ಲಿ ಸ್ವಚ್ಛವಾಗಿ ತೊಳೆದು ನೀರು ತುಂಬಿ ತರಬೇಕೆಂದರು. ಕಾರಣ ತಿಳಿಯದಿದ್ದರೂ ಶ್ರೀಗಳವರ ಆಜ್ಞಾ ಪ್ರಕಾರ ಎಲ್ಲರೂ ನೀರು ತಂದರು. ಎಲ್ಲರ ಕಲಶಗಳೂ ಥಳಥಳನೆಂದು ಹೊಳೆಯುತ್ತಿರಲು, ದಾಸರ ಕಲಶವು ಹೇಗಿದ್ದುದು ಹಾಗೇ ಕೊಳೆಯಾಗಿದ್ದಂತೆ ತೋರಿತು ಎಲ್ಲರೂ ಅಪಹಾಸ್ಯ ಮಾಡತೊಡಗಲು, ಶ್ರೀಗಳವರು ಕನಕದಾಸರ ಮುಖವನ್ನು ನೋಡಿದರು. ದಾಸರು,—"ಮಹಾಪ್ರಭೋ ಒಳಗಿನ ತತ್ವವು, ಮಹಾನುಭಾವರಾದ ತಮ್ಮಂಥವರಿಗೇ ಮನವರಿಕೆಯಾಗಬೇಕಲ್ಲದೆ, ಪಾಮರನಾದ ನನಗೇನು ತಿಳಿದೀತು" ಎಂದರು. ಒಡನೆ ಶ್ರೀಗಳವರು ಅದರ ಅಂತರಾರ್ಥವನ್ನು ಗ್ರಹಿಸಿ, ಇತರರ ಕಲಶಗಳನ್ನೂ-ದಾಸರ ಕಲಶವನ್ನೂ ಪರೀಕ್ಷಿಸಿ ನೋಡಲು, ಎಲ್ಲರ ಕಲಶಗಳ ಒಳಭಾಗವೂ ಕೊಳೆಯಿಂದ ತುಂಬಿಹೋಗಿದ್ದು-ಕನಕದಾಸರ ಕಲಶವು ಮಾತ್ರ ಪರಮಪರಿಶುದ್ಧವಾಗಿದ್ದುದು ಕಂಡುಬಂತು. ಅದನ್ನು ಕಂಡು ಎಲ್ಲರ ಮೋರೆಗಳೂ ಕಾಸಿನಗಲವಾದುವು. ಆಗ ಸ್ವಾಮಿಗಳು "ಮನಸ್ಸಿನಲ್ಲಿ ಕಲ್ಮಷವನ್ನಿಟ್ಟುಕೊಂಡು ಮೇಲೆ ಎಷ್ಟು

ಸ್ನಾನ ಮಾಡಿದರೂ ಏನೂ ಪ್ರಯೋಜನವಿಲ್ಲವೆಂದು ತಿಳಿಯಹೇಳಿ-ಭಗವದನು ಗ್ರಹಕ್ಕೆ ಪಾತ್ರನೂ ಪರಿಶುದ್ಧ ಚೇತನನೂ ಆದ ಕನಕದಾಸನನ್ನು ದ್ವೇಷಿಸ ಬೇಡಿರಿ'' ಎಂದು ಹೇಳಿದರು.

೫. ಸನ್ಯಾಸಿಗಳು ಶಿಷ್ಯಾನುಗ್ರಹಾರ್ಥವಾಗಿ ಸಂಚಾರ ಹೂರಡುವ ಪದ್ಧತಿಯಂತೆಯೇ, ಶ್ರೀ ವ್ಯಾಸರಾಯಸ್ವಾಮಿಗಳವರೂ ಒಂದು ಸಾರಿ ಸಂಸ್ಥಾನದೊಂದಿಗೆ ದೇಶಸಂಚಾರ ಹೊರಟಿದ್ದರು. ಒಂದು ದಿನ ಒಂದೂರಿನಿಂದ ಮಾರನೇ ಬೆಳಿಗ್ಗೆ ಮತ್ತೊಂದೂರಿಗೆ ಪ್ರಯಾಣಮಾಡುವ ಯೋಚನ ಮಾಡಿಕೊಂಡು ರಾತ್ರಿ ಎಲ್ಲರೂ ಮಲಗಿದ್ದರು. ಕನಕದಾಸರು ಮಾರನೆಯ ಪ್ರಾತಃಕಾಲ ಎಲ್ಲರಿಗಿಂತಲೂ ಮುಂಚಿತವಾಗಿಯೇ ಎದ್ದು, ಯಾವ ಊರಿಗೆ ಹೊರಡುವ ಯೋಚನೆ ಇತ್ತೋ ಆ ಊರಿನ ಮಾರ್ಗವನ್ನು ಹಿಡಿದು ಎಲ್ಲರಿಗಿಂತಲೂ ಎರಡು ಗಂಟೆ ಮುಂಚಿತವಾಗಿಯೇ ಹೊರಟುಬಿಟ್ಟರು. ಮಧ್ಯ ಮಾರ್ಗದಲ್ಲೊಂದು ಕಡೆ, ಶ್ರೀತುಲಸಿಯ ಗಿಡಗಳು ವನವಾಗಿ ಬಳೆದು ಮನೋಹರವಾಗಿದ್ದುದು ಅವರ ದೃಷ್ಟಿಗೆ ಬಿದ್ದಿತು ಎಳೆಯ ಆ ದಳಗಳನ್ನು ತಮ್ಮ ಇಷ್ಟದೈವವಾದ ರುಕ್ಮಿಣೀವಲ್ಲಭನಿಗೆ ಸಮರ್ಪಿಸಬೇಕೆಂಬ ಮನಸ್ಸಾಗಲು, ಮಹಾನುಭಾವರಾದ ದಾಸರು, ಅಲ್ಲೇ ಒಂದೆಡೆಯಲ್ಲಿ ಕುಳಿತು ಮಾನಸ ಪೂಜಾಮಗ್ನರಾಗಿ, ಆ ವನದಲ್ಲಿನ ತುಲಸಿಯಿಂದ ತಮ್ಮ ಇಷ್ಟದೈವವನ್ನರ್ಚಿಸಿ ಧನ್ಯರಾದರು. ಇಂತು ಪೂಜಾವಿಧಾನವನ್ನು ಮುಗಿಸಿಕೊಂಡು ಪುನಃ ಹೊರಟು ಮಾರ್ಗಕ್ರಮಣ ಮಾಡತೊಡಗಿದರು. ದಾಸರು ಊರಿನಿಂದ ಹೊರಟ ಎರಡು ಗಂಟೆಗಳ ತರುವಾಯ ಪರಿವಾರದೊಂದಿಗ ಹೊರಟಿದ್ದ ಶ್ರೀ ವ್ಯಾಸರಾಯರೂ ಅದೇ ಮಾರ್ಗವಾಗಿ ಬಂದು, ದೂರದಿಂದಲೇ ಆ ತುಲಸೀ ವನವನ್ನು ಕಂಡು, ಅದರ ಸಮೀಪದಲ್ಲಿಳಿದು ಆ ದಿನ ಮನಸಾರ ಶ್ರೀಹರಿಯನ್ನು ಲಕ್ಷತುಲಸೀದಳಗಳಿಂದ ಅರ್ಚಿಸಬೇಕೆಂದುಕೊಂಡರು. ಆದರೆ ಸಮೀಪಕ್ಕೆ ಬಂದು ನೋಡಲಾಗಿ, ಗಿಡಗಳ ಮೇಲೆಯೇ ಇದ್ದರೂ, ದಳಗಳೆಲ್ಲವೂ ಬಾಡಿ ಮ್ಲಾನವಾಗಿ ನಿರ್ಮಾಲ್ಯದಂತೆ ತೋರ್ರಟ್ಟುವು. ಶ್ರೀಗಳವರು, ಹಾಗಾಗಲು ಕಾರಣವೇನೆಂದು ಜ್ಞಾನದೃಷ್ಟಿಯಿಂದ ನೋಡಲು, ಅವು ಆ ಮೊದಲೇ ಶ್ರೀ ಕನಕದಾಸರ ಮಾನಸ ಪೂಜೆಯಲ್ಲಿ ಅರ್ಪಿತವಾದ ದಳಗಳೆಂಬುದು ಗೋಚರವಾಯಿತು. ಸ್ವಾಮಿಗಳವರು ದಾಸರ ಮಹಿಮೆಗಾಗಿ ಪರಮಾಶ್ಚ

ರ್ಯಪಟ್ಟು, ಅವರನ್ನು ಪರಿಪರಿಯಿಂದ ಹೊಗಳುತ್ತಾ, ಪುನಃ ಮುಂದಕ್ಕೆ ಹೊರಟರು ಶ್ರೀಗಳವರಿಂದ ಆ ಸಂಗತಿಯನ್ನು ತಿಳಿದ ಮರಸ್ಥ ಇತರ ಬ್ರಾಹ್ಮಣರು, ಕನಕದಾಸರ ಮಹಿಮೆ.ಯನ್ನು ಕಂಡು ಅದ್ಭುತಪಟ್ಟರು

ಭಗವದನುಗ್ರಹಕ್ಕೆ ಪಾತ್ರರಾದ ಶ್ರೀ ಕನಕದಾಸರಿಂದ ಹೀಗೆಯೇ ಇತರ ಅನೇಕ ಮಹಿಮೆಗಳು ನಡೆದುವೆಂದು ದಂತಕಥೆಗಳು ಹೇಳಲ್ಪಡುತ್ತಿವೆ. ಅವರು ಒಂದು ಸಾರಿ ಮೀನುಗಳನ್ನು ಹೂವು ಮಾಡಿ ತೋರಿಸಿದರಂತೆ! ಮದ್ಯವನ್ನು ಜೇನುತುಪ್ಪವನ್ನಾಗಿಸಿದರಂತೆ! ಒಂದಾನೊಂದು ಊರಿನ ಅನಾವೃಷ್ಟಿಯನ್ನು ನಿವಾರಣೆಮಾಡಲು ಮೇಘಗಳೇ ಇಲ್ಲದೆ, ಸ್ವಚ್ಛವಾಗಿದ್ದ ಅಂತರಿಕ್ಷದಿಂದ ಕುಂಭವೃಷ್ಟಿಯನ್ನು ಸುರಿಸಿದರಂತೆ! ಒಂದು ಸಾರಿ ಉಡುಪಿಯ ಶ್ರೀಕೃಷ್ಣಸ್ವಾಮಿಯು ತನ್ನ ಆಭರಣಗಳನ್ನೇ ಕನಕರ ಭಕ್ತಿಗೆ ಮೆಚ್ಚಿ ಅವರ ವಶಮಾಡಿ, ತನ್ಮೂಲಕ ಅವರ ಮಹತ್ವವನ್ನು ಪ್ರಕಟಗೊಳಿಸಿದನಂತೆ! ಬೇರೊಂದು ಸಾರಿ ಮಾರಮ್ಮನ ಜಾತ್ರೆಯಲ್ಲಿ ನಡೆಯುತ್ತಿದ್ದ ಅಸಂಖ್ಯ ಕುರಿಕೋಣಗಳ ವಧೆಯನ್ನು ತಮ್ಮ ಬೋಧನಾ ಸಾಮರ್ಥ್ಯದಿಂದ ತಪ್ಪಿಸಿದರಂತೆ! ಇನ್ನೊಂದು ವೇಳೆ ತಮ್ಮ ಮೇಲೇರಿ ಬರುತ್ತಿದ್ದ ಒಂದು ಮದಿಸಿದ ಆನೆಯನ್ನು-ಕೇವಲ ಶಾಂತಭಾವದಿಂದ ಕಂಡು ಅದನ್ನೂ ಶಾಂತಗೊಳಿಸಿ ಕಳುಹಿಸಿದರಂತೆ! ಅನಂತಶಯನದ ಮಹಾರಾಜನಿಗೆ ಪ್ರಾಪ್ತವಾಗಿದ್ದ ಬ್ರಹ್ಮಹತ್ಯಾ ದೋಷವನ್ನು ತಮ್ಮ ಮಹಿಮೆಯಿಂದ ನಿವಾರಿಸಿದರಂತೆ! ತಿರುಪತಿಯಲ್ಲಿ ಬೀಗಮುದ್ರೆಗಳಿಂದ ಬಂಧಿಸಿದ್ದ ಗರ್ಭಗುಡಿಯಲ್ಲಿ ಹೋಗಿ ನಿಂತು ಭಕ್ತ್ಯಾಧಿಕ್ಯದಿಂದ ನರ್ತನ ಮಾಡುತ್ತಾ, ಭಕ್ತಪರಾಧೀನನಾದ ಸ್ವಾಮಿಯನ್ನೂ ನರ್ತನ ಮಾಡಿಸಿ ಸಕಲರನ್ನೂ ಆಶ್ಚರ್ಯಮಗ್ನರನ್ನಾಗಿ ಮಾಡಿಸಿದರಂತೆ! ಬೇರೊಂದು ಸಾರಿ, ವಿಗ್ರಹಸ್ಥ ದೇವರ ತಲೆಯಲ್ಲಿ ಜಡೆಯಿದ್ದುದನ್ನು ತೋರಿಸಿದರಂತೆ! ರಥೋತ್ಸವ ಕಾಲದಲ್ಲಿ ಸಾಗಿಬಾರದೆ ನಿಂತುಬಿಟ್ಟಿದ್ದ ರಥವನ್ನು, ಕೀರ್ತನೆಯಿಂದ ಸ್ವಾಮಿಯನ್ನು ನುತಿಸಿ ಮೆಚ್ಚಿಸಿ, ನಡೆಯಿಸಿದರಂತೆ! ಬೇರೊಂದು ವೇಳೆ ಅತಿಶಯ ಲೋಭಿಯಾದ ಸಾಹುಕಾರನೊಬ್ಬನನ್ನು ತಮ್ಮ ವೈರಾಗ್ಯಪರ ಪದಗಳಿಂದ ಉದಾರಿಯೂ ಭಗವದ್ಭಕ್ತನೂ ಆಗುವಂತೆ ಮಾಡಿದರಂತೆ! ಬೇರೊಂದು ಸಾರಿ ಶ್ರೀರಂಗಕ್ಕೆ ನಡೆದು ಅಲ್ಲಿದ್ದ ಶ್ರೀರಂಗಧಾಮನನ್ನು ದರ್ಶನ ಮಾಡಲೆಳಸಿ ದೇವಾಲಯದ ಸಮೀಪಕ್ಕೆ ಹೋದರಂತೆ! ಆದರೆ ಅವರ ರೂಪು

ವೇಷಗಳನ್ನು ನೋಡಿ, ಅಲ್ಲಿದ್ದ ಪೂಜಾರಿಗಳು ಅವರನ್ನು ಲಕ್ಷ್ಯಮಾಡದೆ, ದೇವರ ದರ್ಶನ ಮಾಡಲು ಅವಕಾಶಕೊಡದೆ ಬಾಗಿಲನ್ನು ಮುಚ್ಚಿಕೊಂಡು ಹೊರಟುಹೋಗಿಬಿಡಲು, ಆಗ ಶ್ರೀ ದಾಸರು, ಸ್ವಾಮಿಯನ್ನು ಪರಿಪರಿಯಿಂದ ಪ್ರಾರ್ಥಿಸಿ—

"ಬಾಗಿಲನು ತೆಗೆಸಿ ಸೇವೆಯನು ಕೊಡು ಹರಿಯೆ | ಕೂಗುತಿಹ ಧ್ವನಿ ಕೇಳ್ವುದಿಲ್ಲವೇ ಧೊರೆಯೇ!" ಎಂಬ ಪದವನ್ನು ಹಾಡಿದರಂತೆ! ಒಡನೆ ಬೀಗ ಮುದ್ರೆಗಳಿಂದ ಬಂಧಿತವಾಗಿದ್ದ ಬಾಗಿಲು ವಿಶಾಲವಾಗಿ ತೆರೆದು, ಸ್ವಾಮಿಯು ದಾಸರಿಗೆ ದರ್ಶನವಿತ್ತನೆಂದೂ ವರ್ಣಿತವಾಗಿದ

ಆದರೆ ಈ ಮಹಿಮೆಗಳಲ್ಲೆಲ್ಲಾ ಕೇವಲ ಪ್ರತ್ಯಕ್ಷ ಪ್ರಮಾಣರೂಪವಾಗಿ ನಿಂತಿರುವ ಒಂದು ಸಂಗತಿಯಿದೆ. ಅದು ವಿಶೇಷ ಜನಜನಿತವಾಗಿ ನಮ್ಮ ಕಥಾನಾಯಕರ ಕೀರ್ತಿಯನ್ನು ಶಾಶ್ವತಗೊಳಿಸಿದೆ ಆದುದರಿಂದ ಸ್ಥಳಾಭಾವದಿಂದ ಇತರ ಕಥೆಗಳನ್ನು ವಿಸ್ತರಿಸಿ ಹೇಳದಿದ್ದರೂ ಅದನ್ನು ಸ್ವಲ್ಪ ವಿಶದವಾಗಿ ಬರೆಯುತ್ತೇವೆ.

ಶ್ರೀ ವ್ಯಾಸರಾಯಸ್ವಾಮಿಗಳವರು ಒಂದು ಸಾರಿ ಉಡುಪಿಯ ಯಾತ್ರೆಗೆ ಹೋದ ವೇಳೆಯಲ್ಲಿ ಕನಕದಾಸರೂ ಅವರೊಂದಿಗೆ ಹೋಗಿದ್ದರು ಶ್ರೀಗಳವರು, ಶ್ರೀಕೃಷ್ಣದೇವಸ್ಥಾನದ ಗರ್ಭಗುಡಿಯಲ್ಲಿ ಸ್ವಾಮಿಯ ಪೂಜೆಯಲ್ಲಿ ಮಗ್ನರಾಗಿ ಕುಳಿತುಬಿಟ್ಟರು ಸಹಸ್ರಾರು ಮಂದಿ ಬ್ರಾಹ್ಮಣ ಸುವಾಸಿನೀವರ್ಗವು ದೇವಸ್ಥಾನದಲ್ಲೆಲ್ಲಾ ನೆರೆದು ಅತಿಶಯ ಗದ್ದಲವಾಗಿತ್ತು. ಆಗ ಕೊಳಕು ಒಟ್ಟೆಯ ಕನಕದಾಸರನ್ನು ಒಳಕ್ಕೆ ಬಿಡುವವರಾರು! ದಾಸರಿಗೆ ಸ್ವಾಮಿಯ ದರ್ಶನಕ್ಕೆ ಅವಕಾಶವೇ ಇಲ್ಲದಾಯಿತು ಆಗ ಅವರಿಗುಂಟಾದ ಮನದುಬ್ಬಸವನ್ನೂ ಕಳವಳವನ್ನೂ ವರ್ಣಿಸಲಳವಲ್ಲ! ಆದರೆ ಮಾಡುವುದೇನು? ಆ ದಿನ ಹೇಗಾದರೂ ಸ್ವಾಮಿಯನ್ನು ದರ್ಶನ ಮಾಡಿಯೇ ತೀರಬೇಕೆಂದು ಹಟತೊಟ್ಟು, ಮಹಾದ್ವಾರದಲ್ಲಿ ಹೋಗಿ ನಿಂತರು. ಆದರೆ ಅಲ್ಲಿದ್ದವರು, ಶೂದ್ರನ ನೆರಳು ದೇವರ ಮೇಲೆ ಬೀಳುತ್ತದೆಂದು ಬಾಗಿಲನ್ನು ಮುಚ್ಚಿಬಿಟ್ಟರು. ಮುಂದೆ ಉಪಾಯ ತೋರದಾಯಿತು? ಆದರೂ ದಾಸರು ಹತಾಶರಾಗದೆ, ಗರ್ಭಗುಡಿಯ ಹಿಂಭಾಗಕ್ಕಿದ್ದ ಕಿಟಕಿಯ ಬಳಿಗೆ ಹೋಗಿ, ಅಲ್ಲಿ ಶ್ರೀಕೃಷ್ಣಸ್ವಾಮಿಯನ್ನು "ತೊರೆದು ಜೀವಿಸಬಹುದ ಹರಿನಿಮ್ಮ ಚರಣವ |

ಬರಿದೆಮುತ್ಯಾರನ್ನು ಅರಿತು ಪೇಳುವೆನಯ್ಯ!'' ಎಂಬ ಪದವನ್ನು ಹಾಡುತ್ತಾ, ಸ್ತುತಿಸತೊಡಗಿದರು ಆಹಾ ಅವರ ನಿರ್ಮಲ ಮನೋಭಾವನೆಯೆಂಥಾ ದ್ದೋ! ಸ್ವಾಮಿಗಳವರ ಎದುರಿಗಿದ್ದು ಪೂಜೆಯನ್ನು ತೆಗೆದುಕೊಳ್ಳುತ್ತಿದ್ದ ಶ್ರೀ ಕೃಷ್ಣಸ್ವಾಮಿಯು, ಒಡನೆ ಕನಕದಾಸರಿದ್ದ ಕಿಟಕಿಯ ಕಡೆಗೆ ಮುಖವನ್ನು ತಿರುಗಿಸಿಬಿಟ್ಟನು, ಶ್ರೀವರನ ದಿವ್ಯಮಂಗಳ ವಿಗ್ರಹಕ್ಕೆ ಪರಿಪರಿಯ ಪೂಜಾ ನೈವೇದ್ಯಾದಿಗಳನ್ನು ಸಮರ್ಪಿಸುತ್ತಿದ್ದ ಶ್ರೀಗಳವರು, ಸ್ವಾಮಿಯ ವಿಗ್ರಹದ ಮುಂಭಾಗವು ಅದೃಶ್ಯವಾಗಿ, ಹಿಂಭಾಗವು ಕಾಣತೊಡಗಿದ್ದನ್ನು ಕಂಡು ಭ್ರಾಂತರಾದರು. ಆಗಲವರು, ಕನಕದಾಸರ ಭಕ್ತಿಭಾಗ್ಯಕ್ಕೆ ಬೆಲೆಯಿಲ್ಲ ವೆಂದು ಅವರನ್ನು ಪರಿಪರಿಯಿಂದ ಶ್ಲಾಘಿಸಿದರು ಸ್ವಾಮಿಯ ಶಿಲಾಮೂರ್ತಿ ಯನ್ನೇ ತಮ್ಮ ಕಡೆಗೆ ತಿರುಗಿಸಿಕೊಂಡು, ಮಹದಾನಂದದಿಂದ ಆನಂದ ಬಾಷ್ಪಗಳನ್ನು ಸುರಿಸಿಕೊಂಡು ಭಜನೆ ಮಾಡುತ್ತಾ ಕುಳಿತಿದ್ದ ದಾಸರನ್ನು ಕಂಡು, ಅವರ ಮಹಿಮೆಗಾಗಿ ಅದ್ಭುತಪಟ್ಟು, ನೆರೆದ ಸಮಸ್ತ ಜನರೂ ಅವರ ಪಾದಗಳಿಗೆ ವಂದಿಸಿದರು ದಾಸರ ಪ್ರತಿಷ್ಠೆಯನ್ನು ತಿಳಿಯದೆ ಅವ ರನ್ನು ದ್ವೇಷಿಸುತ್ತಿದ್ದ ಸುಂದರ ಮೊತ್ತವು, ಮಹದಪರಾಧವಾಯಿತೆಂದೂ, ತಮ್ಮನ್ನು ಕ್ಷಮಿಸಬೇಕೆಂದೂ, ಅವರನ್ನು ಪಾದಾಕ್ರಾಂತರಾಗಿ ಬೇಡಿಕೊಂ ಡರು ಯಾವ ಕಿಟಕಿಯಲ್ಲಿ, ಕನಕದಾಸರಿಗೆ ಶ್ರೀಕೃಷ್ಣಮೂರ್ತಿಯು ದರ್ಶನ ಕೊಟ್ಟನೋ ಆ ಕಿಟಕಿಗೆ 'ಕನಕನಕಿಂಡಿ' ಎಂದು ಹೆಸರು ಬಿದ್ದು ಹೋ ಯಿತು ಈಗಲೂ ಉಡುಪಿಯಲ್ಲಿ ಶ್ರೀಕೃಷ್ಣಮೂರ್ತಿಯನ್ನು ಆ ಕಿಟಕಿಯ ಮೂಲಕ ದರ್ಶನ ಮಾಡುವಿಕೆಯೇ ಪುಣ್ಯಪ್ರದವೆಂದು ಜನರ ಭಾವನೆಯಿದೆ.

ಹೀಗೆ ಶ್ರೀ ಕನಕದಾಸರ ಮೂಲಕ ಅನೇಕ ಮಹಿಮಾನ್ವಿತ ಕಾರ್ಯ ಗಳನ್ನು ನಡೆಯಿಸಿ ಶ್ರೀನಿವಾಸನು ಭಕ್ತಪರಾಧೀನನು ಎಂಬ ತನ್ನ ಬಿರುದನ್ನು ಸಾರ್ಥಕಪಡಿಸಿಕೊಂಡನು.



## ಅಧ್ಯಾಯ ೭ "ಕವಿತೆ"

ಶ್ರೀ ಕನಕದಾಸರು ಕೇವಲ ಹರಿದಾಸರಾಗಿದ್ದು ಪದಗಳನ್ನು ಹಾಡಿ ದರು ಮಾತ್ರವಲ್ಲ! ಅವರು ಕೆಲವು ಗ್ರಂಥಗಳನ್ನೂ ರಚಿಸಿ ಕರ್ಣಾಟಕ ವಾಙ್ಮಯ ಸೇವೆಯನ್ನೂ ಮಾಡಿದ್ದಾರೆ. ಅವರ ಗ್ರಂಥಗಳು ಕರ್ಣಾಟಕ

ದೇಶದ ಎಲ್ಲಾ ಭಾಗದಲ್ಲೂ ಪ್ರಚಾರವಾಗಿದ್ದು ಅವರ ಕೀರ್ತಿಯನ್ನು ಶಾಶ್ವತಗೊಳಿಸಿವೆ. ಅವರು ಪಂಡಿತ ಕವಿಗಳಲ್ಲ—ವರಕವಿಗಳು. ಅವರು ಪ್ರೌಢ ವಿದ್ಯಾಭ್ಯಾಸವಲ್ಲ-ಸಾಮಾನ್ಯ ವಿದ್ಯಾಭ್ಯಾಸ ಮಾಡಿದ ವಿಚಾರಕ್ಕೂ ಎಲ್ಲೂ ಉಲ್ಲೇಖವಿಲ್ಲ. ಆದರೂ ಲೋಕದ ಸಮಸ್ತ ವಿದ್ಯಾವೈದುಷ್ಯಾದಿಗಳಿಗೂ ಆದಿಮೂಲಸ್ವರೂಪನಾದ ಸರ್ವೇಶ್ವರನನ್ನೇ ಮೆಚ್ಚಿಸಿ ಸ್ವಾಧೀನಗೊಂಡುದರಿಂದ, ಅವರಿಗೆ ಮೃದುಮಧುರ ವಚನಗಳಿಂದ ಪರಮಾತ್ಮನ ಮಹಿಮೆಯನ್ನು ವರ್ಣಿಸುವಂತಹ ಮನೋಹರ ಕವಿತಾವಧುವೂ ಸ್ವಾಧೀನಳಾದಳು. ಅವರು ಶ್ರೀವಿಷ್ಣುಭಕ್ತಿಸಾರ, ಮೋಹನತರಂಗಿಣಿ, ರಾಮಧಾನ್ಯಚರಿತ್ರೆ, ನಳಚರಿತ್ರೆ, ನೃಸಿಂಹಸ್ತವ ಇವುಗಳನ್ನು ರಚಿಸಿದ್ದಾರೆಂದು ತಿಳಿಯುಬಂದಿವೆ.

೧. **ಶ್ರೀವಿಷ್ಣುಭಕ್ತಿಸಾರ:**—ಇದು ಭಾಮಿನೀಷಟ್ಪದಿಯಲ್ಲಿ ರಚಿತವಾದ ನೂರೆಂಟು ಪದ್ಯಗಳ ಗ್ರಂಥವು ಇದರಲ್ಲಿ ದಾಸರು ಭಗವಂತನನ್ನು ಅನೇಕ ವಿಧಗಳಿಂದ ಸ್ತುತಿಸಿದ್ದಾರೆ ಅಲ್ಲದೆ ಭಕ್ತಿ ಜ್ಞಾನ ವೈರಾಗ್ಯಪರವಾದ ಅನೇಕ ಮನೋಹರ ಪದ್ಯಗಳೂ ಇವರಲ್ಲಿವೆ ಅವುಗಳಲ್ಲಿ ಕೆಲವು ಅನೇಕ ತತ್ವರಹಸ್ಯಗಳನ್ನೂ ಒಳಗೊಂಡು ಹೃದಯಂಗಮವಾಗಿವೆ.

೨. **ಮೋಹನತರಂಗಿಣಿ:**—ಶ್ರೀ ಕನಕದಾಸರು ತಮ್ಮ ಉದರಶೂಲೆಯ ಪರಿಹಾರಕ್ಕಾಗಿ ಶ್ರೀ ವೆಂಕಟೇಶ್ವರನನ್ನು ಬೇಡಿ, ಆತನಿಂದ ಆಜ್ಞಪ್ತರಾಗಿ, ರಾಣೇಬೆನ್ನೂರು ತಾಲ್ಲೂಕು ಕದರಮಂಡಲಿಗಿಗ್ರಾಮದ ಆಂಜನೇಯಸ್ವಾಮಿಯ ದೇವಾಲಯದಲ್ಲಿದ್ದುಕೊಂಡು ಇದನ್ನು ರಚಿಸಿದರೆಂದು ತಿಳಿಯಬರುತ್ತೆ ಇದರಲ್ಲಿ ೪೨ ಸಂಧಿಗಳೂ ೨೭೦೫ ಸಾಂಗತ್ಯರೂಪದ ಪದಗಳೂ ಇದ್ದು ಮನೋಹರವಾಗಿದೆ. ಇದರಲ್ಲಿ ವರ್ಣಿಸಲ್ಪಟ್ಟ ಶ್ರೀಕೃಷ್ಣಮೂರ್ತಿಯ ಮಹಿಮೆಯು ಕರ್ಣರಸಾಯನವಾಗಿದೆ ದಾಸರು ಈ ಗ್ರಂಥದ ವಿಷಯದಲ್ಲಿ,

“ಹರಿಶರಣರಪೆರ್ಚು ಬುಧಜನರಿಗೆಮೆಚ್ಚು | ದುರಿತಾಟವಿಗೆ ಕಾಳ್ಕಿಚ್ಚು ||
ವಿರಹಿಗಳಿಗೆಮುಚ್ಚು ವೀರರ್ಗೆ ಪುಚ್ಚು ಕೇ | ಳ್ವರಿಗಿದು ತನಿಬೆಲ್ಲದಚ್ಚು ||”

ಎಂದು ಹೇಳಿಕೊಂಡಿದ್ದಾರೆ.

೩. **ನಳಚರಿತ್ರೆ:**—ಇದರಲ್ಲಿ ಷಟ್ಚಕ್ರವರ್ತಿಗಳಲ್ಲಿ ಪ್ರಸಿದ್ದನಾದ ನಳಮಹಾರಾಜ-ದಮಯಂತಿಯರ ಪುಣ್ಯಚರಿತ್ರೆಯು ೪೮೧ ಭಾಮಿನೀ ಷಟ್ಪದಿಯ ಪದ್ಯಗಳಲ್ಲಿ ಹೃದಯಂಗಮವಾಗಿ ವರ್ಣಿತವಾಗಿದೆ.

**೪. ರಾಮಧಾನ್ಯಚರಿತ್ರೆ:**—ಇದೊಂದು ೧೫೬ ಪದ್ಯಗಳ ಭಾಮಿನೀ ಷಟ್ಪದೀ ಗ್ರಂಥವು. ಇದರಲ್ಲಿ ರಾಮಧಾನ್ಯ-ಎಂದರೆ ರಾಗಿಯ ಉತ್ಕೃಷ್ಟತೆಯು ಬಹು ಚಮತ್ಕಾರವಾಗಿ ವರ್ಣಿಸಲ್ಪಟ್ಟಿದೆ. ಈ ಧಾನ್ಯಕ್ಕೆ ಪೂರ್ವದಲ್ಲಿ ನರೆದಲೆಗ ಎಂಬ ಹೆಸರಿತ್ತಂತೆ! ಇದಕ್ಕೆ ರಾಗಿ ಎಂಬ ಹಸರ ಬಂದುದಕ್ಕೆ ಕಾರಣವನ್ನು, ದಾಸರು ಈ ಗ್ರಂಥದಲ್ಲಿ ಮನೋಹರವಾಗಿ ವರ್ಣಿಸುತ್ತಾರೆ. ಈ ಗ್ರಂಥವು ಇನ್ನೂ ಅಚ್ಚಾಗಿಲ್ಲವಾದರೂ, ಕರ್ಣಾಟಕ ಕವಿಚರಿತ್ರೆಕಾರರು ಅದರ ವಿಷಯವನ್ನು ಹೀಗೆಂದು ತಿಳಿಸುತ್ತಾರೆ.

ರಾವಣವಧೆಯನಂತರ ಶ್ರೀರಾಮನು ಅಯೋಧ್ಯೆಗೆ ಹೊರಟು ಮಾರ್ಗಮಧ್ಯದಲ್ಲಿ ಋಷಿಗಳ ಆಶ್ರಮಗಳನ್ನು ಸಂದರ್ಶಿಸಿ, ಅವರು ಸಮರ್ಪಿಸಿದ ಭಕ್ಷ್ಯಭೋಜ್ಯಗಳನ್ನು ಸವಿದು, ಅವರು ಉಪಯೋಗಿಸುದ ಧಾನ್ಯಗಳನ್ನು ನೋಡಬಯಸಿದನಂತೆ. ಆಗ ಅವರು ನರೆದಲೆಗ, ನೆಲ್ಲು, ಹಾರಕ, ಬರಗು, ಜೋಳ, ಕಂಬು, ಸಾವೆ, ನವಣೆ, ಗೋಧಿ ಮುಂತಾದ ಧಾನ್ಯಗಳನ್ನು ತಂದು ಸುರಿದರು. ಅವುಗಳಲ್ಲಿ ಯಾವುದು ಶ್ರೇಷ್ಠವೆಂದು ಕೇಳಲು ಒಬ್ಬೊಬ್ಬರು ಒಂದೊಂದನ್ನು ಹೊಗಳಿದರು. ಒಂದೊಂದು ಧಾನ್ಯವೂ ತನ್ನ ಪ್ರತಿಷ್ಠೆಯನ್ನು ಹೊಗಳಿಕೊಂಡಿತು. ಕೊನೆಗೆ ನರೆದಲೆಗನಿಗೂ ವ್ರೀಹಿ (ನೆಲ್ಲು) ಗೂ ವಾಗ್ವಾದವಾಯಿತು. ಶ್ರೀರಾಮನು ಅದನ್ನು ಕಂಡು ಆ ಎರಡನ್ನೂ ಆರಾರು ತಿಂಗಳ ಕಾಲ ಅಯೋಧ್ಯೆಯಲ್ಲಿ ಸೆರೆಯಲ್ಲಿರಿಸಿ, ಹೊರಟುಹೋದನು. ಆರು ತಿಂಗಳ ತರುವಾಯ ಗೌತಮನು ಅವುಗಳನ್ನು ತೆಗೆದುಕೊಂಡು ರಾಜಾಸ್ಥಾನಕ್ಕೆ ಕರೆತರಲು, ಇಂದ್ರನು ಅವುಗಳನ್ನು ವಿಮರ್ಶಿಸಿ ನರೆದಲೆಗನು ಸಾರಹೃದಯನೆಂದೂ ವ್ರೀಹಿಯು ನಿಃಸ್ಸಾರವಾದುವೆಂದೂ ಹೇಳಿದನು. ಆಗ ಎಲ್ಲರೂ ನರೆದಲೆಗನಿಗೆ ಬಿರುದುಗಳನ್ನು ಕೊಟ್ಟರು. ಶ್ರೀರಾಮನು ಇನ್ನು ಮುಂದೆ ನರೆದಲೆಗನು 'ರಾಘವ' ಎಂಬ ತನ್ನ ಹೆಸರಿನಿಂದ ಪ್ರಸಿದ್ಧವಾಗಲೆಂದು ನುಡಿದನಂತೆ. 'ರಾಘವ' ಪದದ ಅಪಭ್ರಂಶಸ್ವರೂಪವೇ, ಈಗಿನ ರಾಗಿ' ಎಂದಾಯಿತು, ಎಂಬದಾಗಿ ಈ ಗ್ರಂಥದಲ್ಲಿ ವರ್ಣಿತವಾಗಿದೆ.

**೫. ನೃಸಿಂಹಸ್ತವ:**—ಇದೊಂದು ೯೭ ಸಾಂಗತ್ಯ ಪದ್ಯಗಳಲ್ಲಿ ರಚಿಸಲ್ಪಟ್ಟ ಗ್ರಂಥವು.

ಇವುಗಳಲ್ಲದೆ ಇವರು ಹಾಡಿರುವ ಅನೇಕಾನೇಕ ದೇವರ ನಾಮಗಳಲ್ಲಿ ಭಕ್ತಿ ಜ್ಞಾನ ವೈರಾಗ್ಯಪರವಾದ ಅನೇಕ ವೈಷ್ಣವ ಪಂಥದ ತತ್ವ ವಿಚಾರ ಗಳು ಹೊರಡುತ್ತವೆ ಕನಕದಾಸರು ಹೇಳಿರುವ ಈ ತತ್ವ ಪದಗಳು-ಲಿಂಗ ವಂತ ಕವಿಯಾದ ಸರ್ವಜ್ಞನ ವಚನಗಳಂತೆಯೇ, ನಿರ್ಭೀತಿಯಿಂದಲೂ, ಗುಂಭಾರ್ಥದಿಂದಲೂ ನುಡಿದುವುಗಳಾಗಿವೆ ಅವುಗಳಿಗೆ ಅರ್ಥ ಮಾಡು ವುದು ಸಾಮಾನ್ಯವಲ್ಲ ಅವುಗಳಿಗೆ 'ಕನಕನ ಗುಟ್ಟು' ''ಕನಕನ ಮುಂಡಿಗೆ ಗಳು'' ಎಂಬ ಹೆಸರು ಬಂದಿದೆ.

ಅವುಗಳಲ್ಲಿ ಕೇವಲ ಒಂದೆರಡನ್ನು ಮಾತ್ರ ಇಲ್ಲಿ ಕೊಡಲು ಸಾಧ್ಯವಿದೆ.

''ಹಲವು ಜೀವನವ ಒಂದೆಲೆ ನುಂಗಿತು | ನೆಲೆಯಾದಿ ಕೇಶವನು ಬಲ್ಲ ಈ ಬೆಡಗಾ || ಪ || ''

''ಹರಿಯನುಂಗಿತುಹರ-ಬ್ರಹ್ಮನನುಂಗಿತು | ಸುರರಿಗುಂಟಾದ ದೇವರ ನುಂಗಿತು | ಉರಿಗಣ್ಣಶಿವನ ಒಂದೆಲೆ ನುಂಗಿತೋದೇವ | ಹರಿಯು ಬಳಗ ವನು ಒಂದೆಲೆ ನುಂಗಿತು || ೧ || ಎಂಟುಗಜಗಳನು ನುಂಗಿತು ಮತ್ತೆತಾ | ಉಂಟಾದಗಿರಿಯು ತಲೆಯನು ನುಂಗಿತು | ಕಂಠವಪಿಡಿದ ಬ್ರಹ್ಮನನುಂಗಿತೆಲೊ ದೇವ | ಎಂಟಾರುಲೋಕ ಒಂದೆಲೆನುಂಗಿತೋ || ೨ || ಗಿಡವನುಂಗಿತು ಗಿಡ ದೊಡತೊಟ್ಟನು ನುಂಗಿತು | ಗಿಡವನಾ ತಾಯ್ತಂದೆಗಳ ನುಂಗಿತು || ಬೆಡಗ ಬಲ್ಲರೆಪೇಳಿ ದೇವ ಕನಕದಾಸ ಎ | ನ್ನೊಡೆಯಾದಿಕೇಶವ ಬಲ್ಲ ಈ ಬೆಡಗ ||''

''ಕಣ್ಣಿಲ್ಲದಾತನು ಕಂಡುಪಿಡಿದ ಮೃಗ | ಕೈಯಿಲ್ಲದಾತನೆಚ್ಚಾ | ಮಣ್ಣೊ ಲಿಹೊರಳುವ ಕಾಲಿಲ್ಲದಾತನು | ಗಣ್ಯವಿಲ್ಲದೆಪಿಡಿದಾ ||''

''ಸುಟ್ಟಬೀಜವಬಿತ್ತಿ ಬೆಳೆಯಬಾರದಕಾಯಿ | ಬೆಟ್ಟದಿನಾರವನು || ತೊಟ್ಟುಇಲ್ಲದಹಣ್ಣು | ಮುಟ್ಟಿಕಾಯ್ವನು ಒಬ್ಬ ಹುಟ್ಟುಬಂಜೆಯಮಗನು ||''

ಹೀಗೆ ಭಗವದ್ಭಕ್ತಿಯ ಬಲದಿಂದ ಕವಿತಾ ಸಾಮರ್ಥ್ಯವನ್ನು ಪಡೆದು ಲೋಕೋದ್ಧಾರಕಕ್ಕಾಗಿ ಕವಿತೆಗಳನ್ನು ನುಡಿದ ವರಕವಿಗಳ ಪದಪದ್ಯಗಳಲ್ಲಿ ನಮ್ಮವರಿಗೆ ಈಗೀಗ ಪೂಜ್ಯಭಾವವುಂಟಾಗುತ್ತಿರುವುದು ಸಂತೋಷಪ್ರದವು.



# ಉ ಪ ಸ ಂ ಹಾ ರ

ನಮ್ಮ ಕಥಾನಾಯಕರು, ಶ್ರೀಮನ್ಮಧ್ವಾಚಾರ್ಯರಿಂದ ಸ್ಥಾಪಿತವಾದ ದ್ವೈತಮತವನ್ನು ಪ್ರಜಾಸಾಮಾನ್ಯದಲ್ಲಿ ಪ್ರಚಾರಗೊಳಿಸುವ ಮಹತ್ಕಾರ್ಯದಲ್ಲಿ ವಿಶೇಷ ಶ್ರಮೆಯನ್ನು ವಹಿಸಿಧ, ಶ್ರೀ ವ್ಯಾಸರಾಯಸ್ವಾಮಿಗಳು, ವಾದಿರಾಜರು, ಶ್ರೀ ಪುರಂದರದಾಸರು ಮುಂತಾದ ಮಹಾಪ್ರತಿಭಾನ್ವಿತ ವ್ಯಕ್ತಿಗಳ ಸಮಕಾಲೀನರಾಗಿದ್ದು, ಅವರಂತೆಯೇ ಮೃದುಮಧುರ ಕನ್ನಡದ ಪದಪದ್ಯಗಳ ಮೂಲಕ ಹರಿಭಕ್ತಿಯನ್ನು ಪ್ರಚಾರಗೊಳಿಸಿದರು ಇವರು ಜನ್ಮಿಸಿದ-ದೇಹವಿಟ್ಟ ಗೊತ್ತಾದ ತಿಥಿವಾರ ನಕ್ಷತ್ರಗಳು ತಿಳಿಯವು ಕೊನೆಗೆ ಜನಿಸಿದ ಸಂವತ್ಸರವೂ ಇನ್ನೂ ಸಂದೇಹಾಸ್ಪದವಾಗಿಯೇ ಇದೆ. ಇವರು ೯೮ ವರ್ಷಕಾಲದ ತಮ್ಮ ಅತ್ಯುತ್ತಮ ಜೀವಿತವನ್ನು ಹರಿಭಜನ, ಹರಿಸೇವೆ, ಹರಿಮಹಿಮಾವರ್ಣನೆ ಮುಂತಾದುವುಗಳಲ್ಲೇ ಕಳೆದು, ಕೊನೆಗೆ ಒಂದು ದಿನ ದೇಹದ ವಿಷಯದಲ್ಲಿ ಬೇಸರವುಂಟಾಗಲು ಕಾಗಿನಲ್ಲಿಯ ಶ್ರೀಮದಾದಿಕೇಶವ ಸ್ವಾಮಿಯನ್ನು—'ದೇವಾ, ನನಗೆ ನಿನ್ನ ಹೃತ್ಕಮಲದಲ್ಲಿ ಆಶ್ರಯ ಕೊಡು' ಎಂದು ಪ್ರಾರ್ಥಿಸಿದರಂತೆ! ಸ್ವಾಮಿಯು 'ಆ' ಎಂದು ಬಾಯಿ ತೆರೆಯಲು, ಮಹಾನುಭಾವರಾದ ಶ್ರೀ ಕನಕದಾಸರು ಒಡನೆ ಅದರಲ್ಲಿ ಪ್ರವೇಶಿಸಿಬಿಟ್ಟರೆಂದೂ ಒಂದು ಐತಿಹ್ಯವಿದೆ. ಈಗಲೂ ಕಾಗಿನೆಲ್ಲಿಯಲ್ಲಿ ಶ್ರೀ ಆದಿಕೇಶವಸ್ವಾಮಿಯ ಪಾದಸಮೀಪದಲ್ಲಿರುವ ಒಂದು ವಿಗ್ರಹವನ್ನು 'ಕನಕದಾಸರೆಂ'ದು ತೋರಿಸುತ್ತಾರ.

ಹರಿಭಕ್ತಿಸಾರದ ಗ್ರಂಥವು ಅತ್ಯಂತ ಚಿಕ್ಕದಾದರೂ ಅದರಲ್ಲಿ ಶ್ರೀ ದಾಸರು ನುಡಿದಿರುವ ಪದ್ಯಗಳಲ್ಲಿ ಒಂದೊಂದೂ ಮನನಯೋಗ್ಯವಾಗಿವೆ. ಅವುಗಳಲ್ಲಿರುವ ಅರ್ಥಸ್ವಾರಸ್ಯವನ್ನು ಗ್ರಹಿಸುವುದರ ಮೂಲಕ, ಕನ್ನಡಿಗರು ತಮ್ಮ ಪೂರ್ವಿಕ ಕವಿಗಳಲ್ಲೂ, ಭಕ್ತ-ಭಾಗವತರಲ್ಲೂ ಅಭಿಮಾನವನ್ನು ವಹಿಸುವುದಾದರೆ, ಮೂಲೆಗೆ ಮುಪ್ಪಾಗಿ ಬಿದ್ದಿರುವ ಎಷ್ಟೋ ಗ್ರಂಥಗಳು ಪುನರುಜ್ಜೀವಿತವಾಗುವುವು. ನಮ್ಮ ಪೂರ್ವ ಕವಿಗಳಲ್ಲೂ ಸಾಮಾನ್ಯರಲ್ಲ-ಮಹಾಪ್ರತಿಭಾಶಾಲಿಗಳು ಅನೇಕ ಮಂದಿಯಿದ್ದರು ಎಂಬುದು ಜಗತ್ತಿಗೆ ಪರಿಚಯವಾದರೆ, ಜಗತ್ತಿನ ದೃಷ್ಟಿಯು ಕರ್ಣಾಟಕದ ಕಡೆಗೆ ತಿರುಗಿ, ಹಿಂದಿನ ಯಶೋವೈಭವಗಳು ಪುನಃ ಪ್ರಾಪ್ತಿಸುವುವು.

ಭಾ ಷ'—"ಎಂಜಲೆಂಜಲು ಎಂಬರಾನುಡಿ | ಎಂಜಲಲ್ಲವೆ ವಾರಿಜಲಚರ | ದೆಂಜಲಲ್ಲವೆ ಹಾಲುಕರುವಿನ ಎಂಜಲೆನ್ನಿಸದೆ || ಎಂಜಲೆಲ್ಲಿಯದೆಲ್ಲಿಯುಂಪರ | ರೆಂಜಲಲ್ಲದೆ ಬೇರೆಭಾವಿಸ | ಲೆಂಜಲುಂಟೇ ದೇವ ರಕ್ಷಿಸು ನಮ್ಮನನವರತ ||"

'ತೊಲಗುವರು ಕಡೆಕಡೆಗೆ ತಾ ಹೊಲೆ | ಹೊಲೆಯೆನುತ ಕಳವಳಿಸಿ ಮೂತ್ರದ, ಬಿಲದೊಳಗೆ ಬಂದಿಹುದಕಾಣದೆ ಬರಿದೆಮನನೊಂದು || ಜಲದೊಳಗೆ ಮುಳುಗಿದರೆ ತೊಲಗದು | ಹೊಲೆಗೆಲಸ ವೀದೇಹದೊಳು ನೀ | ನೆಲೆಸಿರಲು ಹೊಲೆಯುಂಟೆ ರಕ್ಷಿಸು ನಮ್ಮನನವರತ ||"

"ಗೋಪುರದ ಭಾರವನು ಗಾರೆಯು | ರೂಪು ದೋರಿದ ಪ್ರತಿಮೆಯಂದದಿ | ಈಸಾಯು ಸಂಸಾರಭಾರವನಾರು ತಾಳುವರು || ತಾ ಪರಾಕ್ರಮಿಯೆಂದು ಮನುಜನು | ಕಾಪಥನನ್ನೈದುವನು ವಿಶ್ವ | ವ್ಯಾಪಕನು ನೀನಹುದು ರಕ್ಷಿಸು ನಮ್ಮನನ ವರತ ||"

ಯಾವ ಶ್ರೀ ಕನಕದಾಸರು "ಗಿಳಿಯುಮರಿಯನು ತಂದು ಪಂಜರ | ದೊಳಗೆ ಪೋಷಿಸಿ ಕಲಿಸಿ ಮೃದುನುಡಿ | ಗಳನು ಲಾಲಿಸಿ ಕೇಳ್ವ ಪರಿಣತರಂತೆ ನೀನೆನಗೇ || ತಿಳುಹಿಮತಿಯನು ಎನ್ನ ಜಿಹ್ವೆಗೆ | ಮೊಳಗುವಂದದಿ ನಿನ್ನನಾಮಾ | ವಳಿಯ ಪೊಗಳಿಕೆಯಿತ್ತು ರಕ್ಷಿಸು ನಮ್ಮನವರತ ||"

ಎಂದು ನುಡಿದು, ಕೇವಲ ಪರತಂತ್ರರೆಂತೆ-ಯಾವ ಭಾಗದಲೂ ಸ್ವಾಮ್ಯ-ಸ್ವಾತಂತ್ರ್ಯಗಳನ್ನು ವಹಿಸದೆ, ತಮ್ಮ ದೇಹಮನೋಬುದ್ಧಿಗಳೆಲ್ಲಕ್ಕೂ ಸರ್ವಸ್ವತಂತ್ರನಾದ ಶ್ರೀಮದಾದಿದೇವನೇ ಅಧಿಪತಿಯೆಂದೂ, ಎಲ್ಲವನ್ನೂ ಆತನೇ ನಡೆಸುಸತಕ್ಕವನೆಂದೂ ನಂಬಿ ಹೇಗೆ ಆತನ ಸೇವೆಯಲ್ಲಿ-ಅರ್ಥಾತ್-ಲೋಕಸೇವೆಯಲ್ಲಿ ನಿರತರಾಗಿದ್ದರೋ, ಅಂತಹ ನಿಷ್ಕಾಮಕರ್ಮಭಾವನೆಯು ನಮ್ಮ ಕರ್ಣಾಟಕರಲ್ಲೂ-ಭಾರತೀಯರಲ್ಲೂ ನೆಲೆಗೊಂಡು, ಅವರೂ ಆಸ್ತಿಕರೂ ಭಗವದ್ಭಕ್ತರೂ ಕರ್ಮಯೋಗಿಗಳೂ, ದೇಶಸೇವಾತತ್ಪರರೂ, ಭಾಷಾಸೇವಾನಿರತರೂ, ಆಗುವಂತೆ ನಮ್ಮ ಕಥಾನಾಯಕರಾದ ಶ್ರೀ ಕನಕದಾಸರ ಹೃದಯಾಂತರ್ವರ್ತಿಯಾಗಿದ್ದ ಶ್ರೀಮದಾದಿಕೇಶವಸ್ವಾಮಿಯು ಪರಮಾನುಗ್ರಹಮಾಡಲಿ.

ತಥಾಸ್ತು.



## ರಾಗ ಕೇದಾರಗೌಳ ಅಟತಾಳ



ತನುನಿನ್ನದು ಜೀ | ವನ ನಿನ್ನದಯ್ಯ || ಪ ||
ಅನುದಿನದಲಿ ಬಾಹೋ | ಸುಖದುಃಖ ನಿನ್ನದಯ್ಯ || ಅ, ಪ ||

ಸವಿನುಡಿ ವೇದಪುರಾಣಶಾಸ್ತ್ರಂಗಳ | ಕಿವಿಯಿಂದ ಕೇಳ್ವ ಸತ್ಕಥೆ ನಿನ್ನದೂ || ನವಮೋಹನಾಂಗೇರ ರೂಪವ ಕಣ್ಣಲಿ | ಎವೆ ಇಕ್ಕದೆ ನೋಡುವ ನೋಟ ನಿನ್ನದಯ್ಯ || ೧ ||

ಒಡಗೂಡಿ ಗಂಧಕಸ್ತೂರಿ ಪರಿಮಳಗಳು | ಬಿಡದೆ ಲೇಪಿಸಿಕೊಂಬುದು ನಿನ್ನದು || ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ ! ಕಡುರುಚಿಗೊಂಡರೆ ಆ ರುಚಿ ನಿನ್ನದಯ್ಯ || ೨ ||

ಮಾಯಪಾಶದ ಬಲೆಯೊಳು ಸಿಕ್ಕಿ ತೊಳಲುವ | ಕಾಯಿಪಂಚೇಂದ್ರಿಯಂಗಳು ನಿನ್ನವು || ಕಾಯಜಪಿತ ಕಾಗಿನೆಲೆಯಾದಿಕೇಶವ | ರಾಯ ನೀನಲ್ಲದೆ ನರರ ಸ್ವತಂತ್ರವೇ || ೩ ||

ಶ್ರೀ ಕನಕದಾಸರು



ಮುಂದಿನ ತಿಂಗಳ ಸಂಚಿಕೆ

**ಶ್ರೀಕೃಷ್ಣಭಕ್ತವೃಂದಶಿರೋಮಣಿ**

## ಮೀರಾಬಾಯಿ

—※ ಶ್ರೀರಾಮಸಹಾಯಂ ※—

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

### ಮುನ್ನುಡಿ:—

ನಮ್ಮ ಪ್ರಕೃತ ಕಥಾನಾಯಿಕೆಯಾದ ಮೀರಾಬಾಯಿಯು ಶ್ರೀಕೃಷ್ಣ ಭಕ್ತಾಗ್ರೇಸರಳು. ಈ ಮಹಾಮಹಿಮಳ ಪವಿತ್ರನಾಮವು, ಉತ್ತರ ದಕ್ಷಿಣವಾಗಿ ಹಿಮಾಲಯಾ ವಿಂಧ್ಯಪರ್ವತಗಳೂ, ಪೂರ್ವ ಪಶ್ಚಿಮವಾಗಿ ಬ್ರಹ್ಮದೇಶ ಸಿಂಧೂದೇಶಗಳೂ ಮೇರೆಗಳಾಗಿರಲು, ಮಧ್ಯದಲ್ಲಿರುವ ವಿಶಾಲವಾದ ಆರ್ಯಾವರ್ತದ (ಉತ್ತರ ಹಿಂದೂಸ್ಥಾನ) ಪ್ರತಿಯೊಂದು ಹಳ್ಳಿ ಹೊಳಲಿನ ಪ್ರತಿಯೊಂದು ಮನೆಯಲ್ಲಿನ ಪ್ರತಿಯೊಬ್ಬನಿಂದಲೂ ಉಚ್ಚರಿಸಲ್ಪಡುತ್ತಿದೆಯೆಂದರೆ ಅತಿಶಯೋಕ್ತಿಯಲ್ಲ! ಹಿಂದೀಭಾಷೆಯಲ್ಲಿ, ಈ ಪುಣ್ಯಾತ್ಮಳಿಂದ ಗಾನಮಾಡಲ್ಪಟ್ಟ ಸ್ತೋತ್ರಗೀತಗಳು ಸರಿಗಮಗಳ ತಲೆಬಾಲಗಳನ್ನರಿಯದ ಬೀದಿಯಲ್ಲಿ ಹೋಗುವ ಬಂಡಿ ಹೊಡೆವವನಿಂದ-ದನಗಳನ್ನು ಕಾಯುವ ಗೊಲ್ಲನಿಂದ-ಮುಷ್ಟಿ ಅಕ್ಕಿಯ ಭಿಕ್ಷೆಗಾಗಿ ಮನೆಮನೆ ತಿರುಗುವ ಭಿಕ್ಷುಕ ಭಿಕ್ಷುಣಿಯರಿಂದ ಪ್ರಾರಂಭಿಸಿ ಸಂಗೀತಸಾಹಿತ್ಯ ಕಲಾಪ್ರವೀಣರಾದ ಘನವಿದ್ವಾಂಸರಿಂದ ರಾಜಸಭೆಗಳಲ್ಲೂ ದೇವಸ್ಥಾನ-ಧರ್ಮಸ್ಥಳಗಳಲ್ಲೂ ಕೀರ್ತಿಸಲ್ಪಡುತ್ತಿವೆ. ಭಾಷಾಭೇದದಿಂದ ದಕ್ಷಿಣದೇಶದಲ್ಲಿ ಈಕೆಯು ಹಾಡಿದ ಕೀರ್ತನೆಗಳು ಅಷ್ಟು ಮಾತ್ರ ಪ್ರಚಾರಕ್ಕೆ ಬಾರದಿದ್ದರೂ, ಈ ಧನ್ಯಾತ್ಮಳ ಪರಮಪಾವನ ಚರಿತ್ರೆಯು ಅಶೇಷ ಭಾರತೀಯರಿಂದಲೂ ಪಠನಯೋಗ್ಯವಾಗಿದೆ.

ಈಕೆಯ ಜೀವಿತವು ಅನೇಕ ವಿಚಿತ್ರಘಟನೆಗಳಿಂದ ಕೂಡಿದೆ. ರಾಜಪುತ್ರಿಯಾಗಿ ಜನಿಸಿದುದರಿಂದ ಮಹಾರಾಣಿಯಾಗಿದ್ದು, ಕ್ಷತ್ರಿಯ ರಾಜನ ಅಂತಃಪುರದಲ್ಲಿ, ಪರರದೃಷ್ಟಿಗೆ ಬೀಳದಂತೆ ಪರದೆಯೊಳಗಡೆ (ಘೋಷಾದಲ್ಲಿ) ಇರಬೇಕಾದ ಈಕೆಯು ಸಾಮಾನ್ಯ ಸ್ತ್ರೀಯಂತೆ ಹೊರಕ್ಕೆ ಬಂದು ಸಂಚರಿಸಿ ಕೀರ್ತನಾ-ಪ್ರಸಂಗ - ಭಗವದುತ್ಸವಾದಿಗಳಲ್ಲಿ ಸಾಮಾನ್ಯ ಜನ ಸಮಾಜದೊಂದಿಗೆ ಬೆರೆತಿರುವಳು. ಪತಿಗೃಹದಲ್ಲಿ ರಾಜನ ಪಟ್ಟದರಸಿಯಾಗಿ ವಿವಿಧ ಭೋಗಭಾಗ್ಯಗಳ ಅಧಿಕಾರಿಣಿಯಾಗಿ-ಸಾಮಾನ್ಯತಃ ವಿಷಯಸೌಖ್ಯ ಶರದಿ

ಯಲ್ಲಿ ಮುಳಗಿರಬೇಕಾದ ತುಂಬು ಯೌವನದಲ್ಲಿ, ಕೇವಲ ವಿರಕ್ತಳಾಗಿ ಬ್ರಹ್ಮಚಾರಿಣಿಯಾಗಿ, ಮಹಾ ತಪಸ್ವಿನಿಯೋ ಎಂಬಂತೆ, ಶ್ರೀವರನ ಭಜನೆಸೇವೆಗಲ್ಲ ಕಾಲಕಳೆದಿರುವಳು. ಆರ್ಷೇಯ ಹಿಂದೂಧರ್ಮಾನುಸಾರವಾಗಿ ಸತಿಗೆ ಪತಿಯೇ ಅಧಿಪತಿಯಾದುದರಿಂದ ಕೇವಲ ಅಸ್ವತಂತ್ರಳಾದ ಸತಿಯು ಸರ್ವವಿಧದಲ್ಲೂ ಪತಿಯನ್ನೇ ಅನುಸರಿಸಬೇಕೆಂದಿರುವಲ್ಲಿ ಈ ಪುಣ್ಯವತಿಯು ಒಂದು ಬಗೆಯಿಂದ ಪತಿಯ ಇಷ್ಟಕ್ಕೆ ವಿರುದ್ಧವಾಗಿ ನಡೆದರೂ, ಅನನ್ಯ ಸಾಧಾರಣವಾದ ಕೀರ್ತಿಪ್ರತಿಷ್ಠೆಗಳಿಗೆ ಪಾತ್ರಳಾಗಿರುವಳು. ಈಕೆಯ ಈಬಗೆಯ ಜೀವಿತವು ಭಾರತದೇಶೀಯ ಸ್ತ್ರೀ ಜೀವಿತದಲ್ಲೇ ಒಂದು ವ್ಯತ್ಯಾಸವನ್ನು ಉಂಟುಮಾಡಿದ್ದರೂ, ಆತ್ಮಾಭಿವೃದ್ಧಿಮಾರ್ಗದಲ್ಲಿ ಸ್ತ್ರೀವರ್ಗಕ್ಕಿರುವ ಸ್ವಾತಂತ್ರ್ಯದ ಪರಮಾವಧಿಯು ಎಷ್ಟೆಂಬುದನ್ನು ಪ್ರದರ್ಶಿಸುತ್ತಿರುವುದು

ಭಗವಂತನನ್ನು ಭಕ್ತಿಪಾಶದಿಂದ ಬಂಧಿಸಿ ಸ್ವಾಧೀನಗೊಳ್ಳುವ ಸಾಮರ್ಥ್ಯವೂ ಸ್ವಾತಂತ್ರ್ಯವೂ ಪುರುಷನಿಗೆ ಮಾತ್ರವುಂಟು, ಅಬಲೆಯರು ಆ ಕಾರ್ಯಕ್ಕೆ ಅನರ್ಹರು ಎಂಬ ಭಾವನೆಯನ್ನು ಈ ಮಹಾಮಹಿಮಳ ಚರಿತ್ರೆಯು ಸುಳ್ಳೆನಿಸಿ, ಲಕ್ಷ್ಮೀಕಾಂತನನ್ನು ಭಜಿಸಿ ವಲಿಸಿಕೊಳ್ಳುವಲ್ಲಿ ಸ್ತ್ರೀ ಪುರುಷರೆಂಬುದಿಲ್ಲ. ದ್ವಿಜದ್ವಿಜೇತರರೆಂಬುದಿಲ್ಲ ಎಂಬಂಶವನ್ನೂ ಸ್ಪಷ್ಟೀಕರಿಸುವುದು. ಭಗವಂತನ ದೃಷ್ಟಿಯಲ್ಲಿ ನಮ್ಮ ಪ್ರಾಪಂಚಿಕ ಉನ್ನತಿ ಹೀನಸ್ಥಿತಿಗಳ-ಸಿರಿತನ ಬಡತನಗಳ-ಪುಂಸ್ತ್ರೀಲಿಂಗಗಳ-ವಯೋಭೇದಗಳ ಗಣನೆಯಿಲ್ಲ ! ಅಲ್ಲಿ ಬೇಕಾಗಿರತಕ್ಕುದು ಅನನ್ಯಭಕ್ತಿಭಾಗ್ಯವೊಂದೇ ! ನಮಗೆ ಹಿಮವತ್ಪರ್ವತಗಳೋ ಎಂಬಂತೆ ಅಗಾಧವಾಗಿ ತೋರುತ್ತಿರುವ ಜಾತಿಮತಗಳ ಭೇದಭಾವನೆಗಳಲ್ಲ; ಭಗವಂತನ ಒಲಿಮೆಗೆ ಅತ್ಯಾವಶ್ಯಕವಾದುದು ಅವ್ಯಭಿಚಾರಭಕ್ತಿಯೊಂದೇ! ಇಂತಹ ಅನನ್ಯ ಭಕ್ತಿಯಿಂದ ಶ್ರೀಕೃಷ್ಣಸ್ವಾಮಿಯನ್ನೇ ಹೃದಯೇಶನನ್ನಾಗಿ ಕೈಕೊಂಡು ಆರಾಧಿಸಿ, ಭಗವದ್ಭಕ್ತಿ ಸಾಮ್ರಾಜ್ಯ ಚಕ್ರವರ್ತಿನಿಯೆನ್ನಿಸಿಕೊಂಡ, ಈ ಸಾಧ್ವೀಮಣಿಯ ಚರಿತ್ರೆಯನ್ನೂ ಗ್ರಂಥಮಾಲೆ ಇತರ ಪುಸ್ತಕಗಳನ್ನು ಹೇಗೋಹಾಗೆಯೇ ಗುಣಗ್ರಹಣಶೀಲರಾದ ಕರ್ಣಾಟಕ ಮಹಾಜನರೂ ಯುವಕ ಯುವತಿಯರೂ ಬಾಲಕ ಬಾಲಿಕೆಯರೂ ಯಥಾಪೂರ್ವವಾಗಿ ಆದರಿಸುವವರಾಗಲೆಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು ಸಿಟಿ.
೧೧—೧೨—೧೯೨೬

ಇತಿ ಸುಜನ ವಿಧೇಯ,
ಯಂ. ರಾಮರಾವ್.



ಶ್ರೀಕೃಷ್ಣಭಕ್ತವೃಂದಶಿರೋಮಣಿ

# ಮೀ ರಾ ಬಾ ಯಿ

ಮೇರೆ ತೋ ಗಿರಿಧರ ಗೋಪಾಲ ದೂಸರಾ ನ ಕೋಯಿ

~ ಶ್ರೀರಾಮಸಹಾಯಂ ~

ಶ್ರೀಕೃಷ್ಣಭಕ್ತವೃಂದಶಿರೋಮಣಿ

# ಮೀರಾಬಾಯಿ

**ಅಧ್ಯಾಯ ೧** **"ಆನಂದಸಾಗರ"**

ನಮ್ಮ ಮಾತೃಭೂಮಿಯಾದ ಈ ಭಾರತದೇಶದಲ್ಲಿ ಜನ್ಮಿಸಿ, ಅಜರಾಮರವಾದ ಕೀರ್ತಿಪ್ರತಿಷ್ಠೆಗಳನ್ನು ಗಳಿಸಿಕೊಂಡ ನಾರೀಮಣಿಯರಲ್ಲಿ, ಅನೇಕರು ಪತಿಗಳೊಂದಿಗೆ ಚಿತೆಯನ್ನೇರಿ, ಪಡಲಾಗದ-ನುಡಿಯಲಾಗದ ಕಷ್ಟಸಂಕಟಗಳಿಗೀಡಾಗಿ, ಅನ್ನ ನೀರುಗಳನ್ನೂ ಕಾಣದೆ ಕಾಡುಗುಡ್ಡಗಳಲ್ಲಿ ಅಲೆದು ಮಹಾಪತಿವ್ರತೆಯರೆನ್ನಿಸಿಕೊಂಡು ಪ್ರಸಿದ್ಧರಾದರು ಕೆಲವರು ಅಂತಃಪುರದಲ್ಲಿ ಘರದೆಯೊಳಗಡ ಅಡಗಿ ಬೆಳೆದವರಾಗಿದ್ದರೂ ಅಸಾಮಾನ್ಯ ರಾಜನೀತಿ ರಾಜ್ಯವ್ಯವಹಾರಗಳಿಂದಲೂ, ಕರ್ತೃತ್ವಶಕ್ತಿಯಿಂದಲೂ ಕ್ಷತ್ರಿಯೋತ್ತಮರಾದ ವೀರಪುರುಷರಿಗೆ ಯಾವ ಭಾಗದಲ್ಲೂ ಕೀಳೆನಿಸಿಕೊಳ್ಳದಂತೆ ಧರ್ಮಮಾರ್ಗಕ್ಕೆ ಕುಂದುತಾರದೆ, ಪ್ರಭುತ್ವದ ದರ್ಪಕ್ಕೆ ಲೋಪವಿಲ್ಲದೆ ಪ್ರಜೆಗಳ ಪ್ರೀತಿ ವಿಶ್ವಾಸಗಳನ್ನು ಗಳಿಸಿಕೊಂಡು ರಾಜ್ಯಭಾರಮಾಡಿ ಪ್ರಸಿದ್ಧರಾದರು. ಮತ್ತೆ ಕೆಲವರು ವಿದ್ಯಾಭ್ಯಾಸ ಕಲಾಕುಶಲತೆಗಳಲ್ಲಿ ಅನುಪಮ ಪಾಂಡಿತ್ಯವನ್ನು ಗಳಿಸಿ ಘನತೆಗೇರಿದರು. ಇನ್ನು ಕೆಲವರು ಕೋಟ್ಯಾಂತರ ದ್ರವ್ಯವನ್ನು-ಹಿಂದೆ ಮುಂದೆ ನೋಡದೆ ದಾನಧರ್ಮಾದಿ ಪುಣ್ಯಕಾರ್ಯಗಳಿಗಾಗಿ ವ್ಯಯಗೊಳಿಸಿ ಶಾಶ್ವತಕೀರ್ತಿಗೆ ಪಾತ್ರರಾದರು. ಆದರೆ ನಮ್ಮ ಕಥಾನಾಯಿಕೆಯಾದ ಶ್ರೀ ಮೀರಾಬಾಯಿಯ ಮಾರ್ಗವೇ ಬೇರೆಯಾಯಿತು. ಮೇಲ್ಕಂಡವರೆಲ್ಲರೂ ಐಹಿಕಕಾರ್ಯಗಳಿಗಾಗಿ ಪ್ರಸಿದ್ಧರಾಗಿದ್ದರೆ ಈ ಸಾಧ್ವೀಮಣಿಯು, ರಾಜ್ಯ ಐಶ್ವರ್ಯ-ಭೋಗಭಾಗ್ಯಗಳ ವಿಲಾಸಗಳಲ್ಲಿ ಲೇಶವಾ

ತ್ರವೂ ಇಷ್ಟಪಡದೆ ಶ್ರೀಕೃಷ್ಣಭಗವಾನನನ್ನು ತನ್ನ ಇಷ್ಟದೈವವೆಂದು ಅಂಗೀಕರಿಸಿ, ಭಕ್ತಿಭಾವನೆಯಿಂದ ಆರಾಧಿಸಿ ಪ್ರಸಿದ್ಧಳಾದಳು,

ಪ್ರಪಂಚದಲ್ಲಿ ಪ್ರಬಲ ಬಂಧನವು ಪ್ರೇಮವು. ಸಂಸಾರದಲ್ಲಿ ತಾಯಿ ತಂದೆ, ಅಣ್ಣ ತಮ್ಮಂದಿರು, ಅಕ್ಕತಂಗಿಯರು, ಗಂಡಹೆಂಡಿರು, ನಂಟರಿಷ್ಟರು, ಇವರುಗಳನ್ನು ಅ-ದೃಷ್ಟವಾದ ಒಂದು ಪಾಶದಿಂದಲೋ ಎಂಬಂತೆ ಬಂಧಿಸಿಟ್ಟಿರುವುದು ಈ ಪ್ರೇಮವೇ! ರಾಜ ಪ್ರಜೆ-ಸ್ವಾಮಿಭೃತ್ಯ-ಗುರುಶಿಷ್ಯ ಇವರಲ್ಲಡಗಿರುವ ಸಂಬಂಧಗಳಿಗೂ ಈ ಪ್ರೇಮವೇ ಮೂಲಕಾರಣವಾಗಿರುವುದು. ಕೇವಲ ಮನುಷ್ಯರಲ್ಲಿ ಮಾತ್ರವಲ್ಲ - ಹಸು ಆಡು ನಾಯಿಗಳಿಂದ ಹುಲಿ ಸಿಂಹ ತೋಳಗಳವರೆಗಿನ ದುಷ್ಟಮೃಗಗಳಲ್ಲೂ—ಗುಬ್ಬಿಪಾರಿವಾಳಗಳಿಂದ ಹದ್ದು ಹೆಗ್ಗಿಡುಗಗಳ ವರೆಗಿನ ಪಕ್ಷಿವರ್ಗಗಳಲ್ಲೂ ಹುಳುಹುಪ್ಪಟೆ ಕ್ರಿಮಿಕೀಟಗಳಲ್ಲೂ ಈ ಪ್ರೇಮವೇ ಅಖಂಡ ಸಾಮರ್ಥ್ಯದಿಂದ ಆಧಿಪತ್ಯ ಮಾಡುತ್ತಿದೆ ಅದೃಶ್ಯವಾಗಿದ್ದರೂ ಈ ಪ್ರೇಮಪಾಶದಿಂದ ಬಂಧಿತರಾಗಿಯೇ ಸಂಸಾರದಲ್ಲಿ ತಾಯಿಯು ಮಕ್ಕಳಿಗಾಗಿ ಅನುಭವಿಸಲಸಾಧ್ಯವಾದ ದುಃಖ, ತಾಪತ್ರಯ, ಮನೋವ್ಯಥ, ಕಷ್ಟ-ನಿಷ್ಠುರಗಳನ್ನು ಅನುಭವಿಸುವುದನ್ನೂ, ತಂದೆಯು ಅನಿರ್ವಚನೀಯ ಅಸಹನೀಯ ಕಷ್ಟಗಳನ್ನಾದರೂ ಅನುಭವಿಸಿ ಕುಟುಂಬಭರಣಮಾಡುವುದನ್ನೂ ನೋಡುತ್ತಿರುವೆವು. ಪಶುಪಕ್ಷಿ ಮೃಗಗಳಾದರೂ ತಮ್ಮ ಕಂದಗಳ ಪ್ರಾಣರಕ್ಷಣೆಗಾಗಿ ಬೇಟೆಗಾರನ ಪಾಶಕ್ಕೆ ಒಡಲನ್ನೊಡ್ಡುತ್ತಿರುವುದು ಎಷ್ಟೋ ವೇಳೆ ಕಂಡುಕೊಂಡಿರುವುದು - ಒಂದರೊಡನೊಂದು ಪ್ರಾಣಾಂತ್ಯದವರೆಗೂ ಹೋರಾಡುತ್ತಿರುವುವು ಪ್ರೇಮವೆಂಬ ಈ ಪಾಶವು ಮಾತ್ರವಿಲ್ಲದಿದ್ದರೆ ಅಥವಾ ದುರ್ದೈವದಿಂದ ಕಡಿಯಿತೆಂದರೆ, ಪ್ರಪಂಚದಲ್ಲಿ ಪ್ರಾಣಿಗಳ ಜೀವಿತವು ಕೊಳ್ಳಿಬಿದ್ದ ಸಂತೆಯಂತೂ-ಅಗ್ನಿಪರ್ವತದ ಮಹಾ ಅಗ್ನಿಜ್ವಾಲೆಗಳಂತೆಯೂ ಉರಿದು ಭಸ್ಮವಾಗುತ್ತಿತ್ತೆಂಬುದಕ್ಕೆ ಸಂಶಯವೇನು!—ಹಾಗಾದರ ಆದರಲ್ಲಿ ಆಶ್ಚರ್ಯವೇನು?

ಈ ಪ್ರೇಮವೇ ಬೇರೆಬೇರೆ ಅವಸ್ಥೆಗಳಲ್ಲಿ-ಸ್ಥಾನಗಳಲ್ಲಿ ಬೇರೆಬೇರೆ ಹೆಸರುಗಳಿಂದ ಕರೆಯಲ್ಪಡುತ್ತಿದೆ. ತಾಯಿತಂದೆಗಳೂ, ಗುರುವೂ ಮಕ್ಕಳಲ್ಲೂ ಶಿಷ್ಯರಲ್ಲೂ ತೋರಿಸುತ್ತಿರುವ ಪ್ರೇಮವನ್ನು ಪುತ್ರವಾತ್ಸಲ್ಯ-ಶಿಷ್ಯವಾತ್ಸಲ್ಯ ಎಂಬ ಹೆಸರಿನಿಂದ ಕರೆಯುತ್ತೇವೆ. ಮನುಷ್ಯನು ದೀನ-ಅಂಗಹೀನರಲ್ಲೂ

ಮನುಷ್ಯೇತರ ಪ್ರಾಣಿಗಳಲ್ಲೂ ತೋರಿಸುವ ಈ ಪ್ರೇಮವನ್ನೇ ದಯೆ ಕನಿಕರ ಮಮತೆ ಎಂಬ ಹೆಸರಿನಿಂದ ಕರೆಯುತ್ತೇವೆ! ಹಾಗಯೇ ಮಕ್ಕಳು ತಾಯಿ ತಂದೆಗಳ ವಿಷಯದಲ್ಲೂ, ಶಿಷ್ಯನು ಗುರುಗಳ ವಿಷಯದಲ್ಲೂ, ಭಕ್ತನು ಭಗವಂತನ ವಿಷಯದಲ್ಲೂ ತೋರಿಸುವ ಪ್ರೇಮವು ಭಕ್ತಿಯೆಂಬ ಹೆಸರಿನಿಂದ ಕರೆಯಲ್ಪಡುತ್ತದೆ ಜೀವಿತದಲ್ಲಿ ಪತಿಪತ್ನಿಯರ ನಿಕಟ ಸಂಬಂಧಕ್ಕಾಗಿ ಅವರಲ್ಲಿರಬೇಕಾದ ಈ ಪಾಶವು ಪ್ರೇಮವೆಂಬ ಅದರ ಸಹಜನಾಮದಿಂದಲೇ ಪ್ರಸಿದ್ಧವಾಗಿದೆ. ಆದರೆ ಸರ್ವೇಶ್ವರನಾದ ಪರಮಾತ್ಮನೂ, ವಿಶ್ವಕುಟುಂಬಿಗಳಾದ ಸಾಧುಸಂತ ಮಹನೀಯರೂ ಜಗತ್ತಿನಮೇಲೂ, ಪಾಪಿಗಳಾದ ಜಗದಜೀವಿಗಳ ಮೇಲೂ ತೋರಿಸುತ್ತಿರುವುದೇನು ಪ್ರೇಮವೋ ವಾತ್ಸಲ್ಯವೋ ದಯೆಯೋ ಮರುಕವೋ ಕನಿಕರವೋ ಅಥವ ಇವೆಲ್ಲವುಗಳ ಮೊತ್ತದ ಒಂದು ಅಪ್ರತಿಮ – ಅನಿರ್ವಾಚ್ಯ ಮನಸ್ಥಿತಿಯೋ ?

ತಾಯಿಮಕ್ಕಳು ಗುರುಶಿಷ್ಯರು ಪತಿಪತ್ನಿಯರು ಅಣ್ಣತಮ್ಮಂದಿರು-ಅಕ್ಕತಂಗಿಯರು ರಾಜಪ್ರಜೆಗಳು ಇವರಲ್ಲಿ ಪ್ರತ್ಯಕ್ಷ ನಿಕಟಸಂಬಂಧವೂ ಒಬ್ಬರನ್ನೊಬ್ಬರು ಅಗಲಿಹೋಗಲಾರದ ಜೀವಿತಾಶಯವೂ ಇರುವುದರಿಂದ ಪ್ರೇಮವು ಒಂದು ವೇಳೆ ಅಷ್ಟು ಪವಿತ್ರವಾಗಿರದಿದ್ದರೂ ಎಂತೋ ಇದ್ದು ಪರಸ್ಪರರ ಅಕೃತ್ರಿಮ ಮನೋಭಾವನೆಯಿಂದ ಬೆಳೆದು ವೃದ್ಧಿಗೊಳ್ಳಲು ಅವಕಾಶವುಂಟು. ಹೀಗಿರುವಲ್ಲಿ ಕಣ್ಣಿಗೆಕಾಣದ-ಆದರೆ ಭವದ ಬಂಧನವನ್ನೇ ನೀಗಿಸುವ ಭಗವಾನನಲ್ಲಿ ಇಂತಹ ಪ್ರೇಮವು ಉದಯಿಸುವ ಮಾರ್ಗವೇನು? ಅಜ್ಞಾನಿ ಮನುಷ್ಯಪ್ರಾಣಿಗೆ ತನಗೆ ಪ್ರತ್ಯಕ್ಷ ಅಶನವಸನಗಳನ್ನು ತಂದಿತ್ತು ಪೋಷಿಸದ ಪರಮಾತ್ಮನಲ್ಲಿ ಭಕ್ತಿಯೂ, ಕಷ್ಟಗಳಲ್ಲಿ ಪ್ರತ್ಯಕ್ಷ ನೆರವಾಗಿ ಸಹಾಯಮಾಡದ ಸರ್ವೇಶನಲ್ಲಿ ಕೃತಜ್ಞತೆಯೂ ಉಂಟಾಗುವ ಮಾರ್ಗವಾವುದು ? ಹಾಗೆ ಸರ್ವಶಕ್ತನೂ ಸರ್ವಾಂತರ್ಯಾಮಿಯೂ ಆದ ಭಗವಂತನಲ್ಲೇ ಭಕ್ತಿಯು ಉದಯಿಸದಿದ್ದರೆ ಮನುಷ್ಯನ ಭವಬಂಧ ನಿವಾರಣೆಗೆ ಬೇರೆ ಮಾರ್ಗವೇನಿದ ?

ಅಜ್ಞಾನಿಯಾದ ಮಾನವನ ದೃಷ್ಟಿಯು ವ್ಯಕ್ತವಾದ ಲೌಕಿಕದ ಹಲವು ಮಾರ್ಗಗಳನ್ನು ಬಿಟ್ಟು, ಅವ್ಯಕ್ತನಾದ ಪರಮೇಶ್ವರನ ಕಡೆಗೆ ಹೊರಳಿ-ಆ ದೇವದೇವನ ಸಾನ್ನಿಧ್ಯವನ್ನು ಸೇರಿ ಅಲ್ಲಿ ನಲೆಗೊಂಡು ಜನ್ಮಸಾರ್ಥಕ್ಯ

ವನ್ನುಂಟುಮಾಡಲು ಸಹಕಾರಿಯಾಗಿರುವಂತೆ ಮಹಾಮಹಿಮರಾದ ಪೂರ್ವಿಕ ಮಹರ್ಷಿಗಳು ಒಂದು ಸೋಪಾನಪಙ್ಕ್ತಿಯನ್ನು ಸಿದ್ಧಪಡಿಸಿಟ್ಟಿರುವರು. ಆ ಸೋಪಾನಪಙ್ಕ್ತಿಯಲ್ಲಿ ಒಂಬತ್ತು ಅಂತಸ್ತುಗಳುಂಟು. ಅವುಗಳನ್ನು ಒಂದೊಂದನ್ನಾಗಿ ಏರಿಹೋದರಲ್ಲದೆ, ಸ್ವಾಮಿಯ ಸಾನ್ನಿಧ್ಯವು ದೊರೆಯಲಾರದು. ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ ಎಂಬಿವೇ ಆ ಸೋಪಾನಪಙ್ಕ್ತಿಯ ಒಂಬತ್ತು ಅಂತಸ್ತುಗಳು. ಪ್ರಾರಂಭಕ್ಕೆ ಭಗವಾನನು ಜಗದ್ರಕ್ಷಣೆಗಾಗಿ ವಿವಿಧ ಕಾಲದೇಶಗಳಲ್ಲಿ ಎತ್ತಿರುವ ಅವತಾರಗಳ-ಮಾಡಿರುವ ಮಹತ್ಕಾರ್ಯಗಳ ಅಥವ ಅದ್ಭುತ ಸೃಷ್ಟಿಚಮತ್ಕೃತಿಯ ದಿವ್ಯ ಸಂಗತಿಗಳನ್ನು ವೇದಶಾಸ್ತ್ರಪುರಾಣಗಳ-ಕಥೆ ಪ್ರಸಂಗಗಳ ಮೂಲಕ ಕೇಳಬೇಕಾದುದು (ಶ್ರವಣ) ಪ್ರಥಮ ಕರ್ತವ್ಯವು ತರುವಾಯ ಹಾಗೆ ಶ್ರವಣಮಾಡಿದ ಭಗವಂತನ ಗುಣಮಹಿಮೆಗಳನ್ನೇ-ನಿರಂತರ ಮನಸ್ಸಿನೆದುರಿಗಿಟ್ಟುಕೊಂಡು ಪಂಚೇಂದ್ರಿಯಗಳೂ ಆ ಯೋಚನೆಯಲ್ಲೇ ಐಕ್ಯಹೊಂದುವಂತೆ ಹಾಡಿ-ಸ್ತುತಿಸಬೇಕಾದುದು (ಕೀರ್ತನ) ಆವಶ್ಯಕವು. ಶ್ರವಣ ಕೀರ್ತನಗಳಿಂದ ಸಾರವಾದ ಭಗವದ್ವಿಚಾರಗಳು ಮನಸ್ಸರೋವರದಲ್ಲಿ ಸ್ಥಿರಗೊಂಡು ಬೇರು ಬಿಡಬೇಕಾದುದರಿಂದ ಅವುಗಳನ್ನೇ ಸದಾ ಧ್ಯಾನಿಸುತ್ತಿರಬೇಕು (ಸ್ಮರಣ) ಭಗವನ್ಮಾರ್ಗದಲ್ಲಿ ನಡೆಯಲು ಪ್ರಾಪಂಚಿಕವಾದ ಅಭಿಮಾನ ಅಹಂಕಾರಾದಿಗಳ ಖಂಡನೆಯಾಗಬೇಕಾದುದು ಅತ್ಯಾವಶ್ಯಕವಾದುದರಿಂದ ನಿರಂತರ ಸ್ಮರಣೆಯಿಂದ ಭಗವದ್ವಿಚಾರವನ್ನು ಗಳಿಸಿದ ಮನಸ್ಸಿನಲ್ಲಿ ವಿನಯವಿಧೇಯತಾದಿಗುಣಗಳು ಅಭ್ಯಾಸವಾಗುವಂತೆ ಎಡೆಬಿಡದ ಅಭಿಷೇಕಾದಿಗಳಿಂದಲೂ ಪುಣ್ಯಕ್ಷೇತ್ರ ತೀರ್ಥಾದಿಗಳ ಯಾತ್ರೆಯಿಂದಲೂ ಸ್ವಾಮಿಯ ಸೇವೆ (ಪಾದಸೇವನ) ಮಾಡಬೇಕು ನಿಯಮನಿಷ್ಠೆಗಳೂ ನಂಬಿದ ವಸ್ತುವಿನಲ್ಲಿ ಮನೋದಾರ್ಢ್ಯವೂ ಏಕಾಗ್ರತೆಯೂ ಉಂಟಾಗುವಂತೆ ತುಲಸಿಪತ್ರ ಪುಷ್ಪಾದಿಗಳನ್ನು ಸಂಗ್ರಹಿಸಿ ಸ್ವಾಮಿಗೆ ಸಮರ್ಪಿಸಿ (ಅರ್ಚನ) ಪೂಜೆಮಾಡಬೇಕು. ಈದಿನ ಅರ್ಚಿಸಿದುದಕ್ಕೆ ನಾಳೆಯೇ ಫಲಪ್ರದವಾಗದಿದ್ದರೆ ಬೇಸತ್ತು ಹೀಗೆ ಇಂದೊಂದು ನಾಳೆಯೊಂದು ಧ್ಯೇಯಮೂರ್ತಿಗಳನ್ನು ಕೈಕೊಳ್ಳದಂತೆ ತನ್ನ ಆರಾಧ್ಯಸ್ವಾಮಿಯನ್ನು ಬಿಟ್ಟರೆ ಅನ್ಯಥಾ ಮಾರ್ಗಕಾಣೆನೆಂಬ ಮನೋಭಾವದಿಂದ ನಮಸ್ಕಾರ (ವಂದನ) ಮಾಡಬೇಕು. ಮುಂಗೆ ಅಭಿಮಾನವು ಅಳಿದು, ದಂಭ

ದರ್ಪಗಳ ಹುಟ್ಟಡಗಿ, ನಾನು ಕರ್ತೃವೆಂಬ ಸ್ವಾಮ್ಯಬುದ್ಧಿಯು ನಾಶವಾಗಿ ಸರ್ವೇಶನ ಸರ್ವ ಸ್ವಾತಂತ್ರ್ಯವನ್ನು ಸ್ಥಾಪಿಸುವಂತೆ ಉಚ್ಚ-ನೀಚ ಭಾವಗಳನ್ನು ಮರೆತು ವಿನೀತನಾಗಿ ಸ್ವಾಮಿಗೆ ದಾಸಾನುದಾಸನೋ ಎಂಬಂತೆ ಸಕಲ ವಿಧ ಸೇವೆಗಳನ್ನೂ (ದಾಸ್ಯ) ಮಾಡಬೇಕು ಇಷ್ಟಾದಮೇಲೆ ತನ್ನ ಇಷ್ಟ ದೈವವನ್ನು ಕಂಡರೆ ಉಳಿವೆನು, ಕಾಣದಿದ್ದರೆ ಅಳಿವೆನೆಂಬಷ್ಟುಮಟ್ಟಿನ ಅಕೃತ್ರಿಮ ಮನೋಭಾವದಿಂದ ತಾಯಿಮಕ್ಕಳಲ್ಲಿ, ನಾಯಕ - ನಾಯಿಕೆಯರಲ್ಲಿ ತೋರಿಬರುವಂತಹ ದರ್ಶನಾಭಿಲಾಷೆಯಿಂದ ಇಷ್ಟದೈವದರ್ಶನವನ್ನು (ಸಖ್ಯ) ಆಶಿಸಬೇಕು ಕೊನೆಯದಾಗಿ, ತನ್ನಹೃದಯೇಶ್ವರನಿಗಾಗಿ ಸ್ವಕೀಯವಾದ ಸಮಸ್ತವನ್ನೂ ಎಂದರೆ ಪಂಚಪ್ರಾಣಗಳನ್ನಾದರೂ ಅರ್ಪಿಸಲು (ಆತ್ಮ ನಿವೇದನ) ಸಿದ್ಧನಾಗಬೇಕು ಈ ಒಂಬತ್ತು ಅಂತಸ್ತುಗಳ ಸೋಪಾನಪಜ'ಕ್ತಿಯನ್ನು ಕ್ರಮವಾಗಿ ಹತ್ತಿದರಲ್ಲದೆ ಭಗವಚ್ಚರಣಾರವಿಂದವು ಲಭ್ಯವಾಗದು. ಅನಾದಿಕಾಲದಿಂದ ಈ ಪ್ರೇಮ (ಭಕ್ತಿ) ಪಂಥವನ್ನು ಅನುಸರಿಸಿ ನಡೆದವರೆಲ್ಲರೂ ಈ ನವವಿಧ ಮಾರ್ಗಗಳನ್ನೇ ಅನುಸರಿಸಿರುವರು

ನಮ್ಮ ಕಥಾನಾಯಿಕೆಯಾದರೂ ಈ ಆರ್ಷೇಯಮಾರ್ಗವನ್ನು ಅನುಸರಿಸಿಯೇ ಶ್ರೀ ಕೃಷ್ಣಸ್ವಾಮಿಯ ಚರಣಾರವಿಂದ ಮಕರಂದ ಮಧುಪಾನಮತ್ತಳಾದ ಭೃಂಗರಾಜವೋ ಎಂಬಂತೆ ಆನಂದಸಾಗರದ ಮೇಲ್ಭಾಗದಲ್ಲಿ ತೇಲುತ್ತಾ, ತಾನು ಸವಿದ ಆ ಮಧುಮಹಿಮೆಯನ್ನು ಜಗದ ಮಾನವವರ್ಗಕ್ಕೆ ಕರ್ಣರಸಾಯನವಾಗಿರುವಂತೆ ಹಾಡಿರುವಳು. ಮಧುಪಾನದಿಂದ ಕೊಬ್ಬಿದ ಆ ವೇಳೆಯಲ್ಲಿ ಆ ಭೃಂಗಕ್ಕೆ ತಾನೊಂದು ಚಿಕ್ಕಪ್ರಾಣಿಯೆಂಬ ಯೋಚನೆಯೂ ತನ್ನ ದೇಹವು ಕಪ್ಪೆಂಬ ಸಂಕೋಚವೂ ಹಾರಿಹೋಗಿ, ಅಖಂಡ ಆನಂದಸಾಗರದಲ್ಲಿ ಏಕಾಧಿಪತ್ಯಮಾಡುತ್ತಿರುವಂತಹ ಭಾಗ್ಯವು ಪ್ರಾಪ್ತಿಸಿತು ಅಂತೇ ಇದು ಜಗದ ಸಕಲರ ಪ್ರೀತಿ ವಿಶ್ವಾಸಗಳಿಗೂ ಭಕ್ತಿ ಅಭಿಮಾನಗಳಿಗೂ ಪಾತ್ರವಾಗಿರುವುದು.

ನಮ್ಮ ಕಥಾನಾಯಿಕೆಯ ಜನ್ಮಸ್ಥಿತಿಯಲ್ಲೇ ದೈವಿಕವಾಗಿ ಉಂಟಾದ ಒಂದು ವಿಚಿತ್ರ ಘಟನೆಯುಂಟು ಆಕೆಯು. ಜನನವಾದುದು ರಾಜಪುತ್ರಸ್ಥಾನದಲ್ಲಿ! ಬುಡ್ಡಗಾಡುಮರುಭೂಮಿಗಳ ಮುಳ್ಳುಕಂಟಿಗಳಲ್ಲಿ ಕಮಲಪುಷ್ಪವು ಹುಟ್ಟಿ ಬೆಳೆದುದೆಂದರೆ ಅದು ಪರಮಾಶ್ಚರ್ಯದ ಮಾತಲ್ಲವೆ? ಸದಾ ಯುದ್ಧಜೀವಿ

ಗಳೂ, ನಿಷ್ಠುರಿಗಳೂ, ಭಕ್ತಿಭಾವಗಳ ಸೆಲೆಯನ್ನೇ ಕಾಣದವರೂ ಆದ ರಜಪೂತವೀರವೃಂದದಲ್ಲಿ ಆಕೆಯ ಜನನ ! ಸುಖಾವಿಷಯ ಲೋಲುಪರೂ, ಅಹಂಕಾರ ಮಮಕಾರಗಳ ನೆಲೆವೀಡೂ ಆದ ಪತಿಯೊಂದಿಗೆ ಸಾಗಬೇಕಾದ ಜೀವನಯಾತ್ರೆ ! ಕಾಡುಕಂಟಿಗಳ ಸಮೂಹದಲ್ಲಿ ಬೆಳೆದ ಚಂದನ ವೃಕ್ಷದಂತೆ-ಹುಲಿಸಿಂಗಗಳ ಮಧ್ಯದಲ್ಲಿದ್ದು ಬೆಳೆದ ಹುಲ್ಲೆ (ಕರು)ವಿನಂತೆ ಆಕೆಯ ಜೀವಿತವೂ ಸಾಗಿತು. ಇಷ್ಟು ಕಂಟಕಗಳ ಮಧ್ಯದಲ್ಲಿ ಜಾಲಿಮರಗಳ ಮಧ್ಯದಲ್ಲಿ ಬೆಳೆದ ಬಾಳೆಯಂತೆ, ಆಕೆಯಲ್ಲಿ ಮೊಳಕೆಗೊಂಡ ಭಕ್ತಿಸಸಿಯೂ ಬೆಳೆಯಿತು. ಆದರೆ ಭಗವನ್ಮಹಿಮೆಯು ವಿಚಿತ್ರವಾದುದಲ್ಲವೆ ? ಕೈಯಿಟ್ಟರೆ ಕುಟುಕುವ ಕೇದಿಗೆಯ ತೆನೆಯಲ್ಲಿ ಮಧುರವಾದ - ಸುವಾಸನಾಯುಕ್ತವಾದ ಪುಷ್ಪವನ್ನೂ ಸಮೀಪಿಸಿದರೆ ಚುಚ್ಚುವ ಗುಲಾಬಿ ಗಿಡದಲ್ಲಿ ನೇತ್ರಾನಂದಕರವಾದ ಗುಲಾಬಿ ಹೂವನ್ನೂ, ಶುಷ್ಕವಾದ ಸೋರೆಬುರುಡೆ, ಒಣ-ತಂತಿಗಳಲ್ಲೂ, ಗೇಣುದ್ದದ ಕಟ್ಟಿಗೆ ತುಂಡಿನಲ್ಲೂ ಕರ್ಣರಸಾಯನವಾದ ಗಾನವೈಭವವನ್ನೂ, ವಿಷದೊಂದಿಗೆ ಅಮೃತವನ್ನೂ, ತಣುವಾದ ಶ್ರೀಗಂಧದಲ್ಲಿ ಉಷ್ಣತೆಯನ್ನು ಹುಗಿದಿಟ್ಟಿರುವ ಆ ಲೋಕನಾಯಕನ ಸೃಷ್ಟಿಚಮತ್ಕೃತಿಗೆ ಅಸಾಧ್ಯವಾದುದಾವುದು !

ರಾಜಪುತ್ರಸ್ಥಾನದಲ್ಲಿ ಅನೇಕ ರಾಜವಾಡೆಗಳುಂಟು! ಅವುಗಳಲ್ಲಿ ಮಾರವಾಡದೇಶಕ್ಕೆ 'ಮಾರತ' ಎಂಬ ನಗರರಾಜವು ಮುಖ್ಯಪಟ್ಟಣವಾಗಿರುವುದು. ಆ ದೇಶಕ್ಕೆ ಅಧಿಪತಿಯು ರಾಠೋರ್ ಎಂಬ ರಜಪೂತ ಕುಲ ವಿಭೂಷಿತನಾದ ಜಯಮಲ್ಲನೆಂಬ ವೀರ ಸರದಾರನು. ಆತನು ಪ್ರಜಾಪರಿವಾರಗಳಿಗೆ ಸಕಲವಿಧ ಅನುಕೂಲತೆಗಳನ್ನು ಒದಗಿಸುತ್ತಾ, ಧರ್ಮದಿಂದ ರಾಜ್ಯಭಾರಮಾಡುತ್ತಿದ್ದನು. ಆತನಿಗೆ ತನ್ನ ಧರ್ಮಪತ್ನಿಯಲ್ಲಿ ಬಹುದಿನಗಳವರೆಗೆ ಮಕ್ಕಳಿಲ್ಲದೆ-ಇಲ್ಲದೆ, ದಂಪತಿಗಳಿಬ್ಬರೂ ಇಹಜೀವಿತದಲ್ಲಿ ಬೇಸತ್ತಿದ್ದರು ವಯಸ್ಸು ಮೀರುತ್ತಾ ಬಂದಂತೆಲ್ಲಾ ಜಯಮಲ್ಲನು ತಮಗೆ ಪುತ್ರೀಪುತ್ರರ ಮುಖಚಂದ್ರದರ್ಶನ ಮಾಡುವ ಯೋಗವಿಲ್ಲವೆಂದುಕೊಂಡು, ಆ ಆಸೆಯನ್ನು ಸಂಪೂರ್ಣವಾಗಿ ತ್ಯಜಿಸಿ, ಇನ್ನು ಭಗವದ್ಭಜನೆ ಸಾಧುಸೇವೆ, ಆರ್ತಜನರಕ್ಷಣೆ ಮುಂತಾದುವುಗಳಿಂದಲಾದರೂ ಜನ್ಮವನ್ನು ಸಾರ್ಥಕಪಡಿಸಿಕೊಳ್ಳೋಣವೆಂದು ಯೋಚಿಸಿದನು. ತನ್ನ ದೇಶದಲ್ಲಿದ್ದ ದೇವಾಲಯಗಳಲ್ಲಿ ಪೂಜೆ ಪುರಸ್ಕಾರಾದಿಗಳೂ ಉತ್ಸವಾದಿಗಳೂ ಕ್ರಮತಪ್ಪದೆ ನಡೆಯುವಂತೆ ಏರ್ಪಡಿ

ಸಿದನು. ದೀನರು ಅಂಗಹೀನರು ನಿರ್ಗತಿಕರು ಮುಂತಾದವರು ಬೀದಿಬೀದಿಗಳಲ್ಲಿ ನಾಯಿನರಿಗಳಿಗೆ ಈಡೆಯಾಗಿ ಉಳಿದು ಹಿಡಿಕೂಳಿಗೆ ಹಲ್ಲಿರಿಯುವಂತೆ, ಅಂಗಹೀನರಿಗೂ ಅನಾಥರಿಗೂ ಧಾರ್ಮಿಕ ನಿವಾಸಸ್ಥಳಗಳನ್ನೂ, ನಿರ್ಗತಿಕರಿಗೆ ಕಾರ್ಯಕ್ಷೇತ್ರಗಳನ್ನೂ ಉಂಟುಮಾಡಿ ಅವರ ಜೀವನಕ್ಕೆ ತಕ್ಕ ನೌಕರಿಗಳನ್ನು ಒದಗಿಸಿದನು. ತಾನು ನ್ಯಾಯಮಾರ್ಗ ತಪ್ಪದ ರಾಜ್ಯಾಂಗ ವಿಚಾರಗಳನ್ನು ಗಮನಿಸುತ್ತಾ, ವಿಶೇಷ ವೈಭವ ವಿಲಾಸಾದಿಗಳಲ್ಲಿ ಕಾಲಹರಣ ಮಾಡದೆ, ಮನಸಾಕ್ಷಿಗೆ ವಿರೋಧವಿಲ್ಲದಂತೆ ದಿನದ ಕಾರ್ಯವನ್ನು ತೀರಿಸಿ, ತರುವಾಯ ಅಂತರ್ಗೃಹದಲ್ಲಿ ಸಕಲ ಲೋಕರಕ್ಷಕನಾದ ಪರಾತ್ಪರನಾದ ಪರಮೇಶ್ವರನನ್ನು ಅನೇಕ ವಿಧದ ಕೀರ್ತನೆಗಳಿಂದ ಹಾಡಿ ಹಾಡಿಸಿ ಕೇಳುತ್ತಲೂ ಪುರಾಣ ಪುಣ್ಯ ಕಥೆಗಳನ್ನು ಶ್ರವಣ ಮಾಡುತ್ತಲೂ, ಹೀಗೆ ಸಚ್ಚಿಂತನೆಯಲ್ಲಿ ಕಾಲಯಾಪನೆಮಾಡುತ್ತಿದ್ದನು. ಹೀಗಿರುವಲ್ಲಿ ಆತನ ಪುಣ್ಯತರುವು ಫಲಿಸಿಬರಲು ಬರಡುಹಸುವು ಹಾಲ್ಗರೆದಂತೆಯೂ, ಶುಭ್ರಮೇಘವು ಧಾರಾವೃಷ್ಟಿಯನ್ನು ಸುರಿಸಿದಂತೆಯೂ ಆತನ ಪತ್ನಿಯಲ್ಲಿ ಗರ್ಭೋದಯವಾಯಿತು ರಾಜನ ಆನಂದ ಆಶ್ಚರ್ಯಗಳಿಗೆ ಮಿತಿಯಿಲ್ಲದೆ ಹೋಯಿತು. ಮಹಾರಾಣಿಯ ಗರ್ಭವೂ ಒಂಬತ್ತು ತಿಂಗಳಕಾಲ ಸುಖವಾಗಿ ಬೆಳೆದು, ವಿಕ್ರಮಶಕೆಯ ೧೫೭೫, (ಕ್ರಿ. ಶ. ೧೫೧೮೧) ನೆಯ ಸಂವತ್ಸರದಲ್ಲಿ ಶುಭದಿನ ಶುಭತಾರೆಗಳಿಂದ ಮಂಗಳಪ್ರದವಾದ ಒಂದು ಶುಭ ಮುಹೂರ್ತದಲ್ಲಿ, ರಾಜಪತ್ನಿಯ ಗರ್ಭಪಾರಾವಾರದಲ್ಲಿ ಒಂದು ಕನ್ಯಾರತ್ನವು ಜನಿಸಿತು. ಜಯಮಲ್ಲನ ಕಣ್ಣುಗಳೆಂಬ ಚಕೋರಗಳು ಶಿಶುವಿನ ಮುಖಚಂದ್ರದರ್ಶನದಿಂದ ತೃಪ್ತವಾದುವು. ಮನಸ್ಸು ಆನಂದಸಾಗರದಲ್ಲಿ ಓಲಾಡತೊಡಗಿತು. ಸಾಗರಕ್ಕೆ ಮೇರೆಯನ್ನು ಕಂಡಾವರಾರು?



ಅಧ್ಯಾಯ ೨   "ಬಾಲ್ಯ-ವಿದ್ಯಾಭ್ಯಾಸ"

ಮಕ್ಕಳು ಮಕ್ಕಳೆಂದು ಬಹುಕಾಲ ಹಲುಬಿ ಹಂಬಲಿಸಿದ ರಾಜರಿಗೂ, ಶ್ರೀಮಂತರಿಗೂ ಅಪೂರ್ವವಾಗಿ ಒಂದು ಮಗುವಾದರೆ ಅದರ ಸುಖಸಂತೋಷ ಸಂಭ್ರಮಗಳೂ ಆ ತಮ್ಮ ಮಗುವಿನಲ್ಲಿ ಅವರ ಪ್ರೇಮವೂ ಎಷ್ಟು ಪ್ರಮಾ

ಣದಲ್ಲಿರುವುದೆಂಬುವುದನ್ನು, ಜ್ಯೇಷ್ಠಾದೇವಿಯು ಪರಮಾನುಗ್ರಹಕ್ಕೆ ಪಾತ್ರರಾಗಿ, ಬೇಡಬೇಡವೆಂದರೂ ವರುಷಕ್ಕೆರಡು ಅವಳಿ ಮಕ್ಕಳನ್ನು ಪಡೆವ ಪುಣ್ಯಶಾಲಿ ದಂಪತಿಗಳು ತಿಳಿಯಲಾರರು! ಜಯಮಲ್ಲರಾಜನು ಮೊದಲೇ ಭಕ್ತಿಯುಕ್ತ ಚಿತ್ತವುಳ್ಳವನಾದುದರಿಂದ ತನಗೆ ಲಭ್ಯವಾದ ಆ ಸಂತಾನಫಲಕ್ಕೆ ಲೋಕಪಿತನ ಅವ್ಯಾಜಕಾರುಣ್ಯವೇ ಕಾರಣವೆಂಬದಾಗಿ ಭಾವಿಸಿ, ಕೃತಜ್ಞತೆಯಿಂದ ಆತನ ಪ್ರೀತಿಗಾಗಿ ತನ್ನ ರಾಜ್ಯದಲ್ಲೆಲ್ಲಾ ಪೂಜೆಗಳೂ ಉತ್ಸವಗಳೂ ಅತಿಶಯವಾಗಿ ನಡೆಯಲೆಂದು ಆಜ್ಞಾಪಿಸಿದನು. ಬ್ರಾಹ್ಮಣಾದಿ ಶ್ರೋತ್ರಿಯವರ್ಗವನ್ನು ಉಡುಗೆರೆ ಉತ್ಸವ ಭೋಜನ, ದಕ್ಷಿಣೆ ತಾಂಬೂಲ ಫಲಮಾಲ್ಯಾದಿಗಳಿಂದ ಸತ್ಕರಿಸಿ, ಅವರಿಂದ ತನ್ನ ಕಂದನಿಗಾಗಿ ಆಶೀರ್ವಾದವನ್ನು ಪಡೆದನು. ದೀನರಿಗೂ ಅಂಗಹೀನರಿಗೂ ಅನಾಥರಿಗೂ ಬಡಪಾಯಿಗಳಿಗೂ ಅವರ ದಾರಿದ್ರ್ಯ ಕಷ್ಟಸಂಕಟಗಳು ಇಂಗುವಂತೆ, ಅನ್ನವಸ್ತ್ರಗಳನ್ನು ಕೊಡಿಸಿ ಅತ್ಯಲ್ಪ ಸಹಾಯದಿಂದಲೇ ತೃಪ್ತರಾಗುವ ಆ ಬಡಜನಗಳು ಆತ್ಮಸಂತೋಷದಿಂದ ತನ್ನ ಸಂತಾನದ ಮೇಲೆ ಹರಕೆಯ ಮಳೆಯನ್ನೇ ಸುರಿಸುತ್ತಿದ್ದುದನ್ನು ಕಂಡು ಕೇಳಿ ಪರಮಾನಂದಗೊಂಡನು. ನೂರಾರು ಬಂಡಿಗಳಲ್ಲಿ ಸಕ್ಕರೆಯನ್ನು ಹೇರಿಸಿ, ಎಲ್ಲೆಡೆಯಲ್ಲೂ ಹಂಚಿಸಿ ಇಂತು ಎಲ್ಲರ ಬಾಯಿಗೂ ಸಿಹಿಯನ್ನು ಕೊಟ್ಟು-ತೃಪ್ತಿಪಡೆದ ಅವರು ಮಧುರವಾದ ಮಾತುಗಳಿಂದ ಮಗು ಬಾಣಂತಿಯರ ಶ್ರೇಯಃಪ್ರಾರ್ಥನೆ ಮಾಡುವಂತೆ ಅನುಗೊಳಿಸಿದನು. ಮತ್ತು ಜ್ಯೋತಿಷ್ಕರನ್ನು ಬರಿಸಿ, ಅವರಿಂದ ಜಾತಕರ್ಮವನ್ನು ವಿಧ್ಯುಕ್ತ ರೀತಿಯಿಂದ ನೆರವೇರಿಸಿ ಜನ್ಮಪತ್ರಿಕೆಯನ್ನು ಒರೆಸಿ ಪೂಜಿಸಿ ದಾನದಕ್ಷಿಣೆಗಳಿಂದ ಸಕಲರನ್ನೂ ತಣಿಸಿದನು

ಪ್ರಸವಗೃಹದಲ್ಲಿ ಹತ್ತುದಿನಗಳು ಕಳೆದುವು. ರಾಜಪತ್ನಿಗೆ ಮಂಗಳಸ್ನಾನವಾಯಿತು ಹನ್ನೊಂದನೆಯ ದಿನ ರಾಜಗೃಹವನ್ನು ತಳಿರುತೋರಣಗಳಿಂದ ಸಿಂಗರಿಸಿ, ದಿವ್ಯ ಮಂಗಳ ವಾದ್ಯಗಳು ಭೋರ್ಗರೆಯುತ್ತಿರಲು ವಿಪ್ರರ ವೇದಘೋಷವು ಕರ್ಣಾನಂದಕರವಾಗಿರಲು ನಾಮಕರಣವಿಧಿಯನ್ನು ನೆರವೇರಿಸಿ, ನೆರೆದ ಭೂಸುರವರ್ಗವನ್ನು ವಿವಿಧ ದಾನಗಳಿಂದಲೂ ಭೂರಿದಕ್ಷಿಣೆಗಳಿಂದಲೂ ಆನಂದಗೊಳಿಸಿದನು. ಸಾಯಂಕಾಲ, ಅರಮನೆಯಲ್ಲಿ ಸುವಾಸಿನಿಯರು ಬಂದು ಸೇರಿ ಮಗುವನ್ನು ಚಿನ್ನರನ್ನಗಳಿಂದ ಅಲಂಕೃತವಾದ ತೊಟ್ಟಿ

ಲಲ್ಲಿಟ್ಟು ಹಾಡಿ ಹರೆಸಿ 'ಮೀರೆ' ಎಂಬ ನಾಮವನ್ನು ಇಟ್ಟು ಕರೆದರು ಈ ಮೀರಾಬಾಯಿಯೇ ನಮ್ಮ ಕಥಾನಾಯಿಕೆಯು.

ರಾಜಪತ್ನಿಯು ಬಾಣಂತಿಯ ಅವಧಿಯನ್ನು ಆರೋಗ್ಯದಿಂದ ಕಳೆದಳು. ಮಗುವೂ ಯಾವ ಬಾಧೆಗೂ ಒಳಪಡದ, ಆರೋಗ್ಯಭಾಗ್ಯಕ್ಕೆ ಕುಂದುಂಟಾಗದಿರಲು ಬೆಳೆದು ತಾಯಿತಂದೆಗಳಿಗೆ ನೇತ್ರೋತ್ಸವವನ್ನುಂಟುಮಾಡತೊಡಗಿತು ಆ ರಾಜದಂಪತಿಗಳು ತಮ್ಮ ಮನೆಯಲ್ಲಿ ಸಾಕ್ಷಾಲ್ಲಕ್ಷ್ಮೀದೇವಿಯೇ ಅವತರಿಸಿದಳೆಂದುಕೊಂಡು, ಸಂಭ್ರಮಸಡಗರಗಳಿಂದ ದಿನಕ್ಕೊಂದು ಗಳಿಗೆಗೊಂದು ಬಗೆಯ ಒಡವೆ ವಸ್ತ್ರಗಳಿಂದ ತಮ್ಮಾಕುವರಿಯನ್ನು ಸಿಂಗರಿಸಿ, ನೋಡಿ ಆನಂದಗೊಳ್ಳುವರು ಮಗುವೂ ತುಂಬುಗಲ್ಲಗಳಿಂದ-ಮುಂಗುರುಳುಗಳಿಂದ-ತೇಜಸ್ವಿ ನೇತ್ರಗಳಿಂದ- ದುಂಡುದುಂಡಾಗ ಹಸ್ತಪಾದಗಳಿಂದ ಮನೋಮೋಹಕವಾದ ಮುಖಕಮಲದಿಂದ ದರ್ಶಿಸಿದವರ ಮನಸ್ಸಿನ ಕಳವಳವನ್ನೆಲ್ಲಾ ಪರಿಹರಿಸಿ ಪರಮಾನಂದಗೊಳಿಸುವುದು.

ರಾಜಾ ಜಯಮಲ್ಲನು ಆಸ್ತಿಕನಾದುದರಿಂದ, ಹೊಳೆಯನ್ನು ದಾಟಿದ ಮೇಲೆ ಇನ್ನು ಅಂಬಿಗನಗೊಡವೆಯೇಕೆಂಬಂತೆ, ಸಂತಾನವನ್ನು ಪಡೆದ ತರುವಾಯ ಇನ್ನು ದೇವರಪೂಜೆ ಉತ್ಸವಾದಿಗಳ - ಭಜನೆ ಕೀರ್ತನಗಳ ಗೊಡವೆಯೇಕೆಂದು ಕೃತಘ್ನನಾಗಲಿಲ್ಲ. ಹಿಂದೆ ರಾಜಕಾರ್ಯಗಳ ಗೊಂದಲದಲ್ಲಿ ಅವಕಾಶವಾದಾಗ ಭಗವಂತನ ಗುಣಗಾನಗಳಲ್ಲಿ ತೊಡಗುತ್ತಿದ್ದ ರಾಜನು, ಈಗ ನಿತ್ಯಕೃತ್ಯಗಳಲ್ಲಿ ಭಗವತ್ಸೇವೆಯೂ ಭಜನೆ-ಕೀರ್ತನೆಗಳೂ ಒಂದೆಂದು ಭಾವಿಸಿ, ತನ್ನ ವಂಶೋದ್ಧಾರಕ್ಕಾಗಿ ಕರುಣಿಸಿದ ಆ ಕಂದನನ್ನು ಕ್ಷೇಮದಿಂದ ಕಾಪಾಡೆಂದು ದಯಾಳುವಾದ ಭಗವಂತನನ್ನು ಕೃತಜ್ಞತೆಯಿಂದ ಸ್ಮರಿಸಿ ಪ್ರಾರ್ಥಿಸುವನು. ಚಿಕ್ಕವಳಾದ ಮೀರೆಯೂ ತಂದೆಯ ಸಮೀಪದಲ್ಲೇ ಕುಳಿತು, ಆತನು ಆನಂದಮಗ್ನನಾಗಿ ಅರೆದೆರೆದ ನೇತ್ರಗಳಿಂದ ಆನಂದಬಾಷ್ಪವು ಸುರಿದುಹೋಗುತ್ತಿರಲು ಕೀರ್ತನೆಗಳನ್ನು ಹಾಡುತ್ತಿರುವುದನ್ನು ನೋಡುವಳು. ತಾನೂ ಹಾಗೆಯೇ ಮುದ್ದುಮುದ್ದು ನುಡಿಗಳಿಂದ ನುಡಿದು ಹಾಡಿಕೊಳ್ಳುವಳು. ಎದ್ದು ಪುಟ್ಟ ಕರಗಳಿಂದ ತಾಳವನ್ನು ಹಾಕಿಕೊಳ್ಳುತ್ತಾ, ದೇವವಿಗ್ರಹದ ಎದುರಿಗೆ ಕುಣಿದಾಡತೊಡಗುವಳು. ರಾಜನೂ

ತನ್ನ ಮಗಳ ಈ ಬಗೆಯ ಬಾಲಲೀಲೆಗಳನ್ನು ಕಂಡು ಪರಮ ಸಂತೋಷ ಪಡುವನು

ವಿಮಲೆಯು ನಾಲ್ಕೈದು ವರ್ಷದ ಬಾಲಿಕೆಯಾದಳು. ರಾಜನು ಶ್ರೇಷ್ಠ ವಿದ್ಯಾಗುರುಗಳನ್ನು ಕರೆತರಿಸಿ, ತನ್ನ ಕುವರಿಗೆ ಅಕ್ಷರಾಭ್ಯಾಸವಮಾಡಿಸಿದನು. ಇತರ ಬಾಲಿಕೆಯರು ವರ್ಷಕ್ಕೆ ಕಲಿಯುವುದನ್ನು ವಿಮಲೆಯು ಕ್ಷಣಕ್ಕೆ ಕಲಿಯುತ್ತಾ, ಹಾಗೆ ಕಲಿತುದನ್ನು ಎಂದಿಗೂ ಮರೆಯದೆ, ಮುಂದೆ ನಾಲ್ಕೈದು ವರ್ಷಗಳ ವಿದ್ಯಾಭ್ಯಾಸದಲ್ಲೇ ಶ್ರೀಮನ್ಮಹಾವಿಷ್ಣುಭಾಗವತ, ಹರಿವಂಶ, ಶ್ರೀರಾಮಾಯಣ ಮಹಾಭಾರತಾದಿ ಪೂಜ್ಯಗ್ರಂಥಗಳನ್ನು ಪಠಿಸಿದಳು. ಅವುಗಳಲ್ಲಿ ವರ್ಣಿತವಾದ ಮಹಾಭಕ್ತರ-ಭಾಗವತರ ಪುಣ್ಯಚರಿತ್ರೆಗಳನ್ನು ಮನಮುಟ್ಟಿ ಓದಿದಳು. ಶ್ರೀರಾಮಾಯಣವನ್ನು ಪಠಿಸುವಾಗ ಅದರಲ್ಲಿ ವರ್ಣಿತಳಾದ ಶ್ರೀರಾಮಭಕ್ತಳೆಂದ ಶಬರಿಯ ನಿಷ್ಕಲ್ಮಷ-ನಿಷ್ಕಪಟ ಭಕ್ತಿಯು ಆಕೆಯ ಮನಸ್ಸನ್ನು ಹೆಚ್ಚಾಗಿ ಆಕರ್ಷಿಸಿತು. ತರುವಾಯ ಭಾಗವತವನ್ನು ಪಠಿಸುವಾಗ ಗೋಪಸ್ತ್ರೀಯರ ಶ್ರೀಕೃಷ್ಣಭಕ್ತಿಯು ಅದನ್ನು ಪರಮಾವಧಿಗೆ ಮುಟ್ಟಿಸಿತು. ತಂದೆಯ ಪ್ರತ್ಯಕ್ಷ ಆಚರಣೆಯು ಕಣ್ಣಿಗೆ ಕಟ್ಟಿದಂತಿದ್ದು ವಿಮಲೆಯಲ್ಲಿ ಭಕ್ತಿಬೀಜವು ನಾಟಿ, ಬೆಳೆದು ವೃದ್ಧಿಯಾದ ಸ್ವಾಭಾವಿಕ ವಿಚಾರವಂತಿರಲು, ನಮ್ಮ ಕಥಾನಾಯಿಕೆಯಲ್ಲಿ ಶ್ರೀ ಕೃಷ್ಣಭಕ್ತಿಯು ಹುಟ್ಟಿ ಬೆಳೆದುದಕ್ಕೆ ವ್ಯಕ್ತವಾದ ಕಾರಣವೆಂಬಂತೆ ತೋರುವ ಒಂದು ದಂತಕಥೆಯೂ ಹೇಳಲ್ಪಡುತ್ತಿದೆ. ವಿಮಲಾಬಾಯಿಯು ಇನ್ನೂ ಆರುವರ್ಷ ವಯಸ್ಸಿನಲ್ಲಿದ್ದಾಗ, ಒಂದಾನೊಂದು ದಿನ ಅರಮನೆಯ ಹೊರವಳಯದಲ್ಲಿ, ದಾಸಿಯರು ಜೊತೆಗಿರಲು ಆಡಿಕೊಂಡಿದ್ದಳಂತೆ! ಅಷ್ಟರಲ್ಲಿ ಅಲ್ಲಿಗೆ ಕಾರ್ಯಾಂತರದಿಂದ ರಾಜಾ ಜಯಮಲ್ಲನೂ ಬಂದನು. ಆ ವೇಳೆಗೆ ಸರಿಯಾಗಿ ಶುಭ ಮಂಗಳವಾದ್ಯಗಳಿಂದಲೂ ಜನಗಳ ಗುಂಪಿನ ಕೋಲಾಹಲದಿಂದಲೂ ಕೂಡಿದ ಒಂದು ಮೆರವಣಿಗೆಯೂ ಅಲ್ಲಿಗೆ ಬಂದಿತು. ಮೆರವಣಿಗೆಯವರು ಅರಮನೆಯ ಸಮೀಪಕ್ಕೆ ಬಂದು, ಅದನ್ನು ಅಲ್ಲಿ ನಿಲ್ಲಿಸಿ, ಸಮಸ್ತರೂ ರಾಜನಿಗೆ ವಂದಿಸಿ, ಆತನ ಅನುಮತಿಯನ್ನು ಪಡೆದು ಮುಂದಕ್ಕೆ ಹೊರಟು ಹೋದರು. ಅಷ್ಟುಹೊತ್ತೂ ಮೆರವಣಿಗೆಯನ್ನು ನೋಡುತ್ತಾ ಅಲ್ಲೇ ನಿಂತಿದ್ದ ವಿಮಲೆಯು ತಂದೆಯ ಬಳಿಗೆ ಓಡಿಬಂದು, ಆತನ ಬಟ್ಟೆ

ಯನ್ನು ಹಿಡಿದುಕೊಂಡು ಪಿತೃಸ್ನೇಹವು-ಅರಸು ರಾಜನೆಂಬ ತಾನು ರಾಜ ಕನ್ಯೆಯೆಂಬ ಲಜ್ಜೆ [illegible]ಗಳನ್ನು ಮೀರಾಂ ಮುಂದುವರಿದಿರಲು, ಕಂಠ ಧ್ವನಿಯು ಪ್ರೇಮ ಪ್ರೀ[illegible] ಸ್ನೇಹಾಧಿಕ್ಯತೆಗಳನ್ನು ಸೂಚಿಸುತ್ತಿರಲು 'ಅಪ್ಪಾ, ಅಲ್ಲಿ ಅಂಬಾರಿಯಲ್ಲಿ ಅಷ್ಟು ಸುಂದರವಾಗಿರುವುದೇನಪ್ಪಾ!' ಎಂದು ಕೇಳಿದಳು. ಅಮೃತರಸವು ಸೂಸುವಂತಿದ್ದ ಪ್ರಿಯಪುತ್ರಿಯ ಆ ಮಾತುಗಳನ್ನು ಕೇಳಿ ರಾಜನು-'ಅವನಮ್ಮ ಅವನು ಮದುಮಗನು, ಮೆರವಣಿಗೆಯಾಗಿ ಹೋಗುತ್ತಿದ್ದಾನಮ್ಮಾ' ಎಂದನು. ಅದನ್ನು ಕೇಳಿದ ಮೀರಾಬಾಯಿಯೂ ನಿಷ್ಕಲ್ಮಷತೆಯು ತನ್ನ ವಿಶಾಲನೇತ್ರಗಳಲ್ಲಿ ವ್ಯಕ್ತಪಡುತ್ತಿರಲು ಪುನಃ—'ಅದು ಎಷ್ಟು ಚನ್ನಾಗಿದೆ. ನೋಡಪ್ಪಾ! ನನಗೊಬ್ಬ ಅಂಥ ಮದುಮಗನು ಬೇಕು. ತಂದುಕೊಡುವೆಯಾ! ಯಾವಾಗ ತಂದು ಕೊಡುವೆಯಪ್ಪಾ?' ಎಂದು ಅಂಗಲಾಚಿಕೊಂಡಳು.

ರಾಜಾ ಜಯಮಲ್ಲನು ಬಹು ಪ್ರಾಜ್ಞನು. ಅಂತಹ ಚಿಕ್ಕವಯಸ್ಸಿನಲ್ಲೇ ಸೌಂದರ್ಯವನ್ನು ಮೆಚ್ಚಿ ಅಪೇಕ್ಷಿಸುವಂತಹ ತನ್ನ ಮಗಳ ಮನಸ್ಥಿತಿಯನ್ನು ಕುರಿತು ಪರಮಾನಂದಪಟ್ಟನು. ಅಷ್ಟು ಚಿಕ್ಕವಯಸ್ಸಿನಲ್ಲೇ ಲಜ್ಜೆಯಿಲ್ಲದೆ ಮದುಮಗನು ಬೇಕೆಂದು ಅಪೇಕ್ಷಿಸಿದಳೆಂದು ಗದರಿಸಿಕೊಳ್ಳಲಿಲ್ಲ! ಹಾಗೆ ಕೇಳಬಾರದೆಂದು ನಿವಾರಿಸಲಿಲ್ಲ. ಹೊಸಹೊಸವಸ್ತುಗಳನ್ನು ನೋಡುವ ಮತ್ತು ತಾವು ಹಾಗೆ ನೋಡಿದ ವಸ್ತುಗಳನ್ನು ಕೈಯಿಂದ ಮುಟ್ಟಿ ಬಾಯಿಗಿಟ್ಟು ರುಚಿನೋಡುವ ಮುಂತಾದ ಮಕ್ಕಳ ಚೇಷ್ಟೆಗಳು, ಅವರಲ್ಲಿ ಆಗತಾನೇ ವಿಕಾಸಗೊಳ್ಳುತ್ತಿರುವ ಇಂದ್ರಿಯಗಳ ಚಪಲತೆಯಿಂದೂ ಅದು ಪ್ರಕೃತಿಸಿದ್ಧವಾದುದೆಂದೂ ಆತನು ತಿಳಿದಿದ್ದನು. ಅವರ ಅಪೇಕ್ಷೆಗಳನ್ನು ಬೇಸರಗೊಳ್ಳದೆ ಒದಗಿಸುತ್ತಾ ಹೋದರೆ ಮತ್ತು ಅವರು ಕೇಳುವ ವಿವಿಧ ಪ್ರಶ್ನೆಗಳಿಗೆ ಕಷ್ಟಪಟ್ಟಾದರೂ ಯೋಗ್ಯ ಉತ್ತರಗಳನ್ನು ದೊರಕಿಸಿ ಅವರನ್ನು ತೃಪ್ತಿಗೊಳಿಸುತ್ತಾ ಹೋದರೆ, ಕ್ರಮವಾಗಿ ಅವರ ವಿಚಾರಶಕ್ತಿಯೂ, ಪ್ರಕೃತಿವೀಕ್ಷಣಾಭಿಲಾಷೆಯೂ ಹೆಚ್ಚುತ್ತಾ ಹೋಗುವುದೆಂಬುದಾದರೂ ಆತನಿಗೆ ತಿಳಿದಿತ್ತು. ಮಕ್ಕಳು ಅಭಿಲಾಷೆಪಟ್ಟು ಹಾಗೆ ಕೇಳುವ ಪ್ರಶ್ನೆಗಳಿಗೆ ಪ್ರತ್ಯುತ್ತರಗಳು ತಮಗೇ ತಿಳಿಯದೆ ತಾಯಿತಂದೆಗಳು ಗದರಿಸಿ ನಿಷ್ಠುರತೆಯಿಂದ ಅವರನ್ನು ಸುಮ್ಮನಾಗಿಸುವರಾದರೆ ಅದರಿಂದ ಮಕ್ಕಳ

ವಿಚಾರಪರ ಮನಸ್ಸಿಗೆ ಹಟಾತ್ತಾಗಿ ಘಾತವುಂಟಾದಂತಾಗಿ, ಅವರ ಮುಂದಿನ ಆ ಶಕ್ತಿಯೇ ನಾಶವಾಗಿ ಹೋಗಬಹುದೆಂಬುದಾದರೂ ಆತನಿಗೆ ತಿಳಿಯದಿರಲಿಲ್ಲ. ಆಗ ರಾಜನು ತನ್ನ ಮಗಳು 'ಅಪ್ಪಾ ನನಗೆ ಅಂಥಾ ಮದುಮಗನನ್ನು ಯಾವಾಗ ತಂದುಕೊಡುವೆಯಪ್ಪಾ!' ಎಂದು ತಾನುಟ್ಟಿದ್ದ ಬಟ್ಟೆಯನ್ನು ಹಿಡಿದು ಕಾಡುತ್ತಾ, ಅಂಬಾರಿಯ ಕಡೆಗೇ ನೋಡುತ್ತಾ ಇದ್ದುದನ್ನು ಕಂಡು, ಹಸನ್ಮುಖದಿಂದ-ಪ್ರಸನ್ನ ದೃಷ್ಟಿಗಳಿಂದ ಆ ತನ್ನ ಕಂದನನ್ನು ನೋಡಿ ತಲೆಯಮೇಲೆ ಕೈಸವರಿ ಬೆನ್ನಮೇಲೆ ಕೈಯಾಡಿಸುತ್ತಾ, ಸುಣ್ಣ-ಪಾದ ಕನ್ನೆಗಳಿಗೆ ಮುತ್ತಿಕ್ಕಿ 'ಅಮ್ಮಾ ಇರು. ಈಗ ತರಿಸಿ ಕೊಡುವೆನು' ಎಂದು ನುಡಿದು, ಸಮೀಪದಲ್ಲಿದ್ದವರನ್ನು ಕಳುಹಿಸಿ, ತಮ್ಮ ಮನೆದೇವರಾದ ಶ್ರೀಕೃಷ್ಣಸ್ವಾಮಿಯ ಒಂದು ಭವ್ಯ ವಿಗ್ರಹವನ್ನು ತರಿಸಿ, ಮಗುವಿನ ಕೈಯಲ್ಲಿತ್ತು '—ಮಗೂ ಮೀರಾ, ಇದೇ ನಿನ್ನ ಮದುಮಗನು. ನೋಡಿದೆಯಾ ಇದು ಎಷ್ಟು ಸುಂದರವಾಗಿದೆ. ಇದರೊಂದಿಗೆ ನೀನು ಜಗಳವಾಡಬಾರದು, ಇದನ್ನು ಬೈಯಬಾರದು, ಪ್ರೀತಿಯಿಂದ ನೋಡಿಕೊಳ್ಳಬೇಕು' ಎಂದು ನುಡಿದು, ಮುದ್ದಿನ ಮೂಟೆಯಾದ, ತನ್ನ ಆ ಪ್ರಿಯ ಪುತ್ರಿಯನ್ನು ಮತ್ತೊಮ್ಮೆ ಹಿಡಿದೆತ್ತಿ ಆಲಂಗಿಸಿ ಮುತ್ತಿಟ್ಟು ತನ್ನ ಕೆಲಸದ ಮೇಲೆ ಹೊರಟು ನಡೆದನು.

ಮೀರೆಗೆ ಪರಮಾನಂದವಾಯಿತೆಂದು ಹೇಳಬೇಕೇನು? ಒಡನೆ ಹಸನ್ಮುಖದಿಂದ ಅರಳಿದ ಕಣ್ಣುಗಳಿಂದ ಸಂತೋಷವು ಉಕ್ಕಿಬಂದು ಗಂಟಲು ಕಟ್ಟಿದಂತಾಗಲು ಮುಂದೆ ತಂದೆಯ ಕಡೆಗೂ ನೋಡಲಿಲ್ಲ, ಕೃತಜ್ಞತಾ ಸೂಚಕವಾದ ಒಂದು ಮಂದಹಾಸವನ್ನೂ ತೋರಿಸಲಿಲ್ಲ; ಆತನನ್ನು ಬಿಟ್ಟು ಆ ವಿಗ್ರಹವನ್ನು ತಾನೇ ಎತ್ತಿಕೊಂಡು ಅರಮನೆಯೊಳಕ್ಕೆ ನಡೆದುಬಿಟ್ಟಳು. ತಾನು ಆಡಿಕೊಳ್ಳುತ್ತಿದ್ದ ಪ್ರಾಸಾದದಲ್ಲಿನ ಒಂದು ಭಾಗದಲ್ಲಿ ಎತ್ತರವಾದ ಒಂದು ಪೀಠದ ಮೇಲೆ ಅದನ್ನು ಕೂರಿಸಿ, ತನ್ನಲ್ಲಿದ್ದ ಅತ್ಯುತ್ತಮವಾದ ಒಡವೆಗಳನ್ನಿಟ್ಟು ವಸ್ತ್ರಗಳನ್ನುಡಿಸಿ, ಹೂವಿನ ಹಾರಾ ತುರಾಯಿಗಳಿಂದ ಅದನ್ನು ಸಿಂಗರಿಸಿದಳು. ತನಗಾಗಿ ದಾಸಿಯರು ತಂದಿತ್ತ ತಿಂಡಿ ಪದಾರ್ಥಗಳನ್ನು ಅದಕ್ಕೆ ಒಪ್ಪಿಸಿದಳು. ಹಾಲು ಹಣ್ಣುಗಳನ್ನು ಅದಕ್ಕೆ ಸಮರ್ಪಿಸಿದಳು. ತನ್ನ ಸಂಗಾತಿಯರಾದ ಬಾಲಿಕೆಯರನ್ನು ಕರೆದು "ನೋಡಿರೇ ನನ್ನ ಮದುಮಗನನ್ನು ನೋಡಿರಿ ಎಷ್ಟು ಚನ್ನಾಗಿದ್ದಾನೆ" ಎಂದು ತೋರಿಸಿ

ದಳು ತನಗೆ ಬಂದ ಒಂದೆರಡು ಹಾಡುಗಳನ್ನು ಹೇಳಿ, ಆ ವಿಗ್ರಹದ ಎದುರಿಗೆ ಕೋಲಾಟಹಾಕಿ ಕುಣಿದಳು. ಎಷ್ಟು ಬಗೆಯಿಂದ ಅಲಂಕಾರ ಮಾಡಿದರೂ, ಅದಕ್ಕೆ ಎಷ್ಟು ಸಾರಿ ತಿಂಡಿ ತೀರ್ಥಗಳನ್ನು ಸಮರ್ಪಿಸಿದರೂ, ಮತ್ತೇನುಮಾಡಿದರೂ, ಅವಳಿಗೆ ತೃಪ್ತಿಯುಂಟಾಗದು. ತರುವಾಯ ತನ್ನ ಮದುಮಗನಿಗೆ ನಿದ್ರೆಬಂತೆಂದು ತೂಗುಮಂಚದ ಮೇಲೆ ಮಲಗಿಸಿ ತೂಗಿದಳು.

ಆ ಶ್ರೀಕೃಷ್ಣವಿಗ್ರಹದ ವಿಷಯದಲ್ಲಿ ಮೀರೆಯ ಪ್ರೇಮವು ಅಕೃತ್ರಿಮತೆಯಿಂದ ಬೆಳೆಯಸಾಗಿತು. ತಾನು ಪಾಠಮಾಡುವಾಗಲೂ, ಆಟವಾಡುವಾಗಲೂ, ಭೋಜನಸ್ನಾನ ನಿದ್ರೆ ಹೀಗೆ ಏನುಮಾಡುವಾಗಲೂ, ಆ ವಿಗ್ರಹವನ್ನು ಬಿಟ್ಟಿರದೆ ಜೊತೆಗೇ ಇಟ್ಟುಕೊಂಡಿರುವಳು. ಅವಳಿಗೆ ಅದೊಂದು ಕಾಷ್ಠವಿಗ್ರಹವೆಂದು ತೋರಲೇ ಇಲ್ಲ. ಅದೂ ಪ್ರಾಣಸಹಿತವಾದ ತನ್ನ ಮನೋಹರಮೂರ್ತಿಯೆಂದೇ ಅವಳ ಭಾವನೆಯಾಗಿದ್ದಿತು. ಇಂತು ಬಾಲಲೀಲೆಗಾಗಿಯೋ ಆದರೂ ಮದುಮಗನೆಂದು ಏರ್ಪಟ್ಟ ಶ್ರೀ ಕೃಷ್ಣವಿಗ್ರಹದೊಂದಿಗೆ ಮೀರೆಯ ಮನಸ್ಸು ಲಗ್ನವಾಗಿ ಹೋಯಿತು. ಮತ್ತು ಅದರೊಂದಿಗೆ-ವಿದ್ಯೆಯೆಂದು ಅರ್ಥವಿಲ್ಲದ ವಿವಿಧ ವಿಷಯ ಸಮೂಹಗಳ ಕಂತೆಯೊಂದನ್ನು ತಲೆಯಲ್ಲಿ ತುಂಬಿಕೊಳ್ಳದೆ-ಭಗವದ್ಭಾಗವತರ ಚರಿತ್ರೆಗಳಲ್ಲಿ ಪ್ರೇಮರಸವನ್ನು ವೃದ್ಧಿಗೊಳಿಸುವ ಉತ್ತಮ ವಿಚಾರಗಳನ್ನೇ ಕಲಿತಳಾದುದರಿಂದ ಅವಳಲ್ಲಿ ಹಾಗೆ ಬೆಳೆದ ಆ ಪ್ರೇಮವೇ ಬರುತ್ತಾ ಬರುತ್ತಾ ನಿಷ್ಕಲ್ಮಷ ಭಕ್ತಿಯ ಸ್ವರೂಪವನ್ನು ಹೊಂದಿ, ಆಕೆಯ ಜೀವಿತ ಸಾರ್ಥಕ್ಯಕ್ಕೂ ಸಹಕಾರಿಯಾಯಿತು.



## ಅಧ್ಯಾಯ ೩ "ವಿವಾಹ-ವೈಭವ"

ಪೂರ್ವದಲ್ಲಿ ನಮ್ಮ ಬಾಲಿಕೆಯರಿಗೆ ಚಿಕ್ಕವಯಸ್ಸಿನಲ್ಲೇ ವಿವಾಹಮಾಡುತ್ತಿದ್ದುದರ ವಿಷಯದಲ್ಲಿ ಈಗ ಅನೇಕ ಚರ್ಚೆಗಳೂ ಆಕ್ಷೇಪಗಳೂ ಹುಟ್ಟಿಬೆಳೆಯುತ್ತಾ, ಆ ಪದ್ಧತಿಯನ್ನು ಮೂಲೋತ್ಪಾಟನಗೊಳಿಸಿ, ಆ ಸ್ಥಾನ

ದಲ್ಲಿ ಪ್ರೌಢ ವಿವಾಹ ಪದ್ಧತಿಯನ್ನು ಸ್ಥಾಪಿಸಬೇಕೆಂದು, ಅನೇಕಮಂದಿ ಸಮಾಜ ಸುಧಾರಕರೂ, ರಾಷ್ಟ್ರಸೇವಕರೂ ಪ್ರಯತ್ನಪಡುತ್ತಿರುವರಷ್ಟೆ! ಲೋಕದಲ್ಲಿನ ಪ್ರತಿಯೊಂದು ವಿಚಾರವೂ, ಸಾಧಕ ಬಾಧಕ ಎಂಬೆರಡು ದೃಷ್ಟಿಗಳಿಂದಲೂ ವಿಮರ್ಶಿಸಲ್ಪಡತಕ್ಕದ್ದು ನ್ಯಾಯ ಸಮ್ಮತವು. ಆದುದರಿಂದ ಸಮಾಜಾಭಿವೃದ್ಧಿಗೆ ಅಡಿಗಲ್ಲಿನಂತಿರುವ ಈ ವಿವಾಹ ಪ್ರಮೇಯ (Problem)ವನ್ನು ಕುರಿತು ವಿಚಾರಮಾಡತಕ್ಕುದೂ ಆವಶ್ಯಕವಾಗಿದೆ. ಪೂರ್ವಿಕ ಪದ್ಧತಿಗಳನ್ನು ಮೆಚ್ಚುವವರು ಮನುಧರ್ಮ-ಪರಾಶರಧರ್ಮ ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ವಚನಗಳನ್ನು ಉದಹರಿಸುತ್ತಾ, ನಮ್ಮ ಜನಾಂಗದಲ್ಲಿ ಆರ್ಷೇಯವಾಗಿ ನಡೆದು ಬಂದಿರುವ ಈ ಪದ್ಧತಿಯನ್ನು ಮೀರಬಾರದೆಂದೂ-ಮೂಲೋತ್ಪಾಟನಗೊಳಿಸದೆ ರಕ್ಷಿಸಬೇಕೆಂದೂ ಹೇಳುತ್ತಿರುವರು. ಪಾಶ್ಚಾತ್ಯಸಮಾಜದಲ್ಲಿ ಪ್ರೌಢವಯಸ್ಸಿನಲ್ಲಿ ವರಕನ್ಯೆಯರಲ್ಲಿ ಪರಸ್ಪರರ ಮೆಚ್ಚುಗೆಗಳನ್ನನುಸರಿಸಿ ಆಗುತ್ತಿರುವ ವಿವಾಹಗಳನ್ನು ಕಂಡು ನಾವೂ ಹಾಗೆಯೇ ಮಾಡುವುದು ಸಾಧುವೆಂದು ಭಾವಿಸುತ್ತಿರುವ ಸುಧಾರಕ ವರ್ಗಕ್ಕೆ ಸೇರಿದ ಕೆಲವರು, ಪೂರ್ವದಲ್ಲಿ ನಮ್ಮಲ್ಲೂ ದಮಯಂತಿ, ಸಾವಿತ್ರಿ, ಶಕುಂತಳೆ, ದ್ರೌಪದಿ ಮುಂತಾದವರು ಪ್ರೌಢರಾದಮೇಲೆಯೇ ವಿವಾಹಿತರಾದರೆಂಬ ಕಾರಣವನ್ನು ಮುಂದುಮಾಡಿಕೊಂಡು, ಪ್ರೌಢರಾದಮೇಲೆ ಮದುವೆಮಾಡುವುದೇ ಯುಕ್ತವೆಂದು ಪ್ರತಿಪಾದಿಸುತ್ತಿರುವರು. ಚಿಕ್ಕ ವಯಸ್ಸಿನಲ್ಲಿ ಮದುವೆಮಾಡತಕ್ಕ ಪದ್ಧತಿಯು, ನಮ್ಮ ದೇಶಕ್ಕೆ ಮಹಮ್ಮದೀಯರು ಪ್ರವೇಶವಾದಮೇಲೆ ಬಂದಿತೆಂದೂ, ಜನಾಂಗದ ಸಂರಕ್ಷಣೆ ಅವರ ಧನಮಾನಗಳ ಭದ್ರತೆ ಮುಂತಾದುವುಗಳು ಸುವ್ಯವಸ್ಥೆಯಿಂದ ಏರ್ಪಟ್ಟಿರುವ ಈ ಕಾಲದಲ್ಲಿ ಯಾರೂ ಅಂತಹ ಪ್ರಾಣಮಾನಗಳ ಭೀತಿಯಿಂದ ಬಾಧಿತರಾಗುವಂತಹ ಸಂಭವವಿಲ್ಲವಾದುದರಿಂದ ಈಗ ಹಿಂದಿನ ಪ್ರೌಢವಿವಾಹ ಪದ್ಧತಿಯು ಪುನಃ ಸಾರ್ವತ್ರಿಕವಾಗಿ ಪ್ರಚಾರಕ್ಕೆ ಬರಬಹುದೆಂದೂ, ಈ ಸುಧಾರಕ ವರ್ಗಕ್ಕೆ ಸೇರಿದವರು ವಾದಿಸುತ್ತಿರುವರು. ಕನ್ನಿಕೆಯರಿಗೆ ಎಂಟನೆಯ ವರ್ಷದಲ್ಲೇ ವಿವಾಹಮಾಡುತ್ತಿದ್ದುದರಲ್ಲಿ ಪೂರ್ವಿಕರಿಗೆ ತಮ್ಮ ಬಾಲಿಕೆಯರ ಮಾನಪ್ರಾಣಗಳ ಸಂರಕ್ಷಣಾಭೀತಿಯೇ ಮುಖ್ಯ ಕಾರಣವಾಗಿದ್ದಿದ್ದರೆ, ಅವರನ್ನು ಮಹಮ್ಮದೀಯರ ಧಾಳಿಯಿಂದ ರಕ್ಷಿಸುವುದಕ್ಕಾಗಿ, ಕೊರಳಲ್ಲಿದ್ದ ಮಾಂಗ

ಲ್ಯವು ರಕ್ಷಾಯಂತ್ರವಾಗಿಯೂ ಹೇಗೆ ಸಹಾಯವಾಗಿದ್ದಿತೋ ನಮಗೆ ತೋರದು. ಅಲ್ಲಾವುದ್ದೀನನೇ ಮೊದಲಾದ ಕೆಲವು ಮಂದಿ ಮಹಮ್ಮದೀಯ ರಾಜರು, ಭೀಮಸಿಂಗನಂತಹ ವೀರ ಕ್ಷತ್ರಿಯಪತಿಯು ಎದುರಾಗಿದ್ದಾಗಲೇ ಆತನನ್ನೇ—'ನಿನ್ನ ಪತ್ನಿ ಪದ್ಮಿನಿಯನ್ನು ತಂದೊಪ್ಪಿಸೆ'ಂದು ಕೇಳಿ ಅದಕ್ಕಾಗಿ ಲಕ್ಷಾಂತರ ದ್ರವ್ಯವನ್ನೂ ಸಾವಿರಾರು ಸೇನೆಯನ್ನೂ ನಾಶಗೊಳಿಸಿರುವರೆಂದು ಚರಿತ್ರೆಯು ಘಂಟಾಘೋಷವಾಗಿ ಹೇಳುತ್ತಿದ್ದರೂ, ರಾಜಪುತ್ರಿಯಾದ ಕಮಲಕುಮಾರಿ ಮುಂತಾದವರ ಸಂಬಂಧದಿಂದ ಒಂದೆರಡಲ್ಲ-ಅನೇಕ ಕ್ಷತ್ರಿಯ ಮನೆತನಗಳೇ ನಿರ್ನಾಮವಾದುವೆಂಬ ಸಂಗತಿಯು ಜನಜನಿತವಾಗಿದ್ದರೂ, ಎಂಟು ಹತ್ತು ವರ್ಷ ವಯಸ್ಸಿನ ಕನ್ನಿಕೆಯರ ಕೊರಳಿನಲ್ಲಿದ್ದ ಮಾಂಗಲ್ಯವನ್ನು ಮಾತ್ರ ನೋಡಿ, ಅವರು ಬೇರೊಬ್ಬನಿಗೆ ವಿವಾಹಿತರಾದುದರಿಂದ ಅವರನ್ನು ಅಪಹರಿಸಬಾರದೆಂದು ಮಹಮ್ಮದೀಯ ಸೈನಿಕರು ಧರ್ಮಭೀತರಾದರೆಂದು ಊಹಿಸುವುದರಲ್ಲಿ ಎಷ್ಟು ಸತ್ಯಾಂಶವಿದೆಯೆಂಬ ಬಗೆಗೆ ನಮಗೇಕೋ ನಂಬಿಕೆ ತೋರದು. ಪೂರ್ವದಲ್ಲಿ ದಮಯಂತಿ ಶಕುಂತಳೆ ಮುಂತಾದ ನಾಲ್ಕೆಂಟುಮಂದಿಯ ಹೆಸರುಗಳನ್ನು ಬೆರಳಿನಿಂದೆಣಿಸಿ ಅವರು ಪ್ರೌಢರಾದ ಮೇಲೆ ವಿವಾಹಿತರಾದರೆಂದು ಪ್ರತಿಪಾದಿಸುವುದರಲ್ಲೂ ಅರ್ಥವಿಲ್ಲ! ಏಕೆಂದರೆ, ಆಗಿನ ಜನಸಾಮಾನ್ಯದಲ್ಲಿದ್ದ ಪದ್ಧತಿಯೂ-ಆಚರಣೆಯೂ ಒಬ್ಬಿಬ್ಬರು ರಾಜಪುತ್ರಿಯರ ವಿವಾಹದಿಂದ ಸಿದ್ಧವಾಗುವದಿಲ್ಲ. ದ್ರೌಪದಿಗೆ ಐದು ಮಂದಿ ಗಂಡಂದಿರಿದ್ದರೆಂಬ ಕಾರಣದಿಂದ, ಆಗ ಸ್ತ್ರೀಯರಿಗೆ ಬಹುಪತೀತ್ವವಿತ್ತೆಂದು ಸ್ಥಾಪಿಸಿ, ಈಗಲೂ ಹಾಗೆಯೇ ಆಗಬಹುದೆಂದರೆ ಅದನ್ನು ಯಾರು ಮೆಚ್ಚುವರು ? ಆದುದರಿಂದ ಪ್ರೌಢವಿವಾಹವಿಚಾರದಲ್ಲೂ ಪೂರ್ವಿಕರ ಉದಾಹರಣೆಯನ್ನು ಅನುಸರಿಸಬೇಕೆಂಬ ಆಶಯವೂ ಶ್ರದ್ಧೆಯೂ ನಮ್ಮ ಸುಧಾರಕವರ್ಗಕ್ಕೆ ಇರುವುದಾದರ, ಅವರು ನಾಲ್ಕೆಂಟುಮಂದಿ ರಾಜಪುತ್ರಿಯರ ವಿವಾಹಗಳನ್ನು ಉದಹರಿಸುವುದನ್ನುಳಿದು, ಆಗ ಜನಾಂಗದಲ್ಲಿದ್ದ ಆಚರಣೆಯೇನೆಂಬುದನ್ನು ಕಂಡುಹಿಡಿದು ವಿಮರ್ಶಿಸಿದರ, ಆಗ ಅವರ ಹೇಳಿಕೆಗೆ ಹೆಚ್ಚು ಮಹತ್ವವು ಸಿಕ್ಕೀತು !

ಅದಂತಿರಲಿ ; ಈಗಿನ ಪಾಶ್ಚಾತ್ಯ ಪ್ರೌಢ ವಿವಾಹಗಳನ್ನು ಅನುಸರಿರಿಸಬೇಕೆಂದರೆ ಆ ಭಾಗದಲ್ಲಿ ಒಂದು ವಿನಂತಿ. ನಾವು ಒಂದೊಂದು ವಿಷಯ

ದಲ್ಲೂ ಆಯಾ ಪ್ರಮೇಯ (Problem) ಗಳಲ್ಲಡಗಿರುವ ತತ್ವವೇನೆಂಬು ದನ್ನು ವಿಮರ್ಶಿಸದೆ, ಕೇವಲ ಅಂಧಪರಂಪರೆಯಲ್ಲಿ ಅನುಕರಣವಾಡಿದರೆ ಮಾತ್ರವೇ ಪ್ರಯೋಜನವಿಲ್ಲವೆಂಬಂಶವನ್ನು ಗಮನಿಸಬೇಕು. ಪಾಶ್ಚಾತ್ಯ ಮಾತಾಪಿತೃಗಳು ತಮ್ಮ ಕನ್ನಿಕೆಯರಿಗೆ ಯುಕ್ತ ವಯಸ್ಸು ಬರುವವರೆಗೂ ಅವರ ವಿವಾಹದ ವಿಷಯವನ್ನೇ ಅವರೆದುರಿಗ ಎತ್ತದೆ, ಅದರ ಮೋಹಕ ವಿಚಾರಗಳು ಅವರಿಗೆ ತಿಳಿಯಲು ಅವಕಾಶವಿಲ್ಲದಂತೆ ಕೇವಲ ವಿದ್ಯಾಭ್ಯಾಸ ಮುಂತಾದ ವಿಚಾರಗಳಲ್ಲೇ ಅವರ ಮನಸ್ಸು ಪ್ರವೇಶಿಸಿರುವಂತೆ ಅನುಕೂಲ ಪಡಿಸಿ, ವಿವಾಹಯೋಗ್ಯವಯಸ್ಕರಾದರೆಂದು ತಿಳಿದಾಗ ತಮ್ಮ ಕನ್ನಿಕೆಗೆ ತಕ್ಕ ಗುಣರೂಪ ವಯೋವಿದ್ಯಾಬುದ್ಧ್ಯಾದಿಗಳಲ್ಲಿ ಯೋಗ್ಯರೆನ್ನಿಸುವ ಉತ್ತಮವಂಶಸಂಭೂತರಾದ ಕೆಲಮಂದಿ ತರುಣರು ಕಾರಣಾಂತರಗಳಿಂದ ತಮ್ಮ ಮನೆಗೆ ಬಂದು ಹೋಗುವಂತೆ ಅವಕಾಶವನ್ನು ಕಲ್ಪಿಸುವರು ಅವ ರಲ್ಲಿ ಗುಣ ರೂಪ ಸ್ವಭಾವಗಳಲ್ಲಿ ಸಮಾನಯೋಗ್ಯತೆಯುಳ್ಳವನೊಂದಿಗೆ ಬಾಲಿಕೆಯ ಮನಸ್ಸು ಲಗ್ನವಾಗುವುದು. ಮುಂದೆ ಅವರು ಒಡನೆಯೇ ವಿವಾಹಿತರಾಗದಿದ್ದರೂ ಅನೇಕ ವೇಳೆ ಏಕಾಂಗಿಗಳಾಗಿ ಸೇರಿ ಪರಸ್ಪರರ ಸ್ವಭಾವಗಳಲ್ಲಿ ಸಂಪೂರ್ಣ ಪರಿಚಯವನ್ನು ಹೊಂದಲು, ಅವರ ಸಾಮಾ ಜಿಕ ಪದ್ಧತಿಯು ಪ್ರತಿಬಂಧಗೊಳಿಸುವಂತಿಲ್ಲ! ತರುವಾಯ ಇಬ್ಬರ ಮನಸ್ಸೂ ಕಳಂಕರಹಿತವಾಗಿ ಪರಸ್ಪರರ ವಿಷಯದಲ್ಲಿ ತೃಪ್ತಿಹೊಂದಿ ಒಂದಾ ಯಿತೆಂದು ತಿಳಿದಾಗ ಉಭಯ ಮಾತಾಪಿತೃಗಳ ಸಮ್ಮತಿಯಿಂದ ವಿವಾಹ ವಿಧಿಯು ನಡೆಯುವುದು (ಹಾಗೆ ನಡೆದ ವಿವಾಹಗಳ ಸ್ಥಿತಿಯೂ ನೂರಕ್ಕೆ ಐವತ್ತರ ಅಂಶದವರೆಗೂ ಏನು ಗತಿಯನ್ನು ಹೊಂದಿ-ಪಾಶ್ಚಾತ್ಯಪ್ರಪಂಚ ದಲ್ಲಿ ವಿವಾಹ ವಿಚಾರವೂ ಜನಾಂಗ ಜೀವನವೂ ಎಂತಹ ದುರವಸ್ಥೆಗೆ ಮುಟ್ಟಿ ರುವುದೆಂಬುದನ್ನು-ನಮ್ಮವರಲ್ಲಿ ಕೇವಲ ಅವರ ಬಿಳಿಯ ತೊಗಲಿನ-ಥಳಥಳಿ ಸುವ ಉಡಿಗೆತೊಡಿಗೆಗಳ-ಕುರುಳುಹೆರಳುಗಳ-ಮೂತಿಗೆ ಬಳಿದುಕೊಳ್ಳುವ 'ಪೌಡರ'ನ ಮೋಹಕ್ಕೆ ಮರುಳಾದ ಅಲ್ಪಮತಿಗಳು ತಿಳಿಯಲಾರರು.) ಹೋಗಲಿ! ಆದರೂ ಹಾಗೆ ಮನೋಧರ್ಮಗಳ ಸೇರ್ಪಡೆಯನ್ನು ಕುರಿತು ಗಮನಿಸಿ ಅದಕ್ಕೆ ತಕ್ಕ ಅನುಕೂಲತೆಗಳನ್ನು ಒದಗಿಸಿ ಆ ಪದ್ಧತಿಯನ್ನೇ ಅತ್ಯಂತವಾಗಿ ಅನುಸರಿಸುವುದಾದರೆ ಅಂತಹ ಆಚರಣೆಗೆ ಅರ್ಥವಿದೆಯೆಂದು

ತೃಪ್ತರಾಗುವೆವು. ಆದರೆ ದೊಡ್ಡವರಾದ ಮೇಲೆ ವಿವಾಹವಾದರೆ, ಅವರು ವಿಧವೆಯರಾಗುವ ಭೀತಿಯಿಲ್ಲವೆಂಬ ಮತ್ತು ಒಂದು ವೇಳೆ ಆದರೂ ಅವರೂ ಸ್ವತಂತ್ರ ಜೀವನೋಪಾಯದ ಯೋಗ್ಯತೆಯನ್ನು ಸಂಪಾದಿಸಿರುವರೆಂಬ-ಮತ್ತು ಮುಖ್ಯವಾಗಿ ದೃಢಾಂಗರಾದ ಮಕ್ಕಳನ್ನು ಹಡುವರೆಂಬ ಮುಂತಾದ ಕಾರಣಗಳನ್ನು ಮುಂದುಮಾಡಿ-ಮುತ್ತೈದೆಯರಾಗುವ ಮೊದಲೇ-ಅನ್ಯಥಾ ಯೋಚನೆಯನ್ನೂ ಮಾಡಿ, ಅವರ ಮನಸ್ಸಿನ ಬೆಳವಣಿಗೆಗೆ ಗಮನ ಕೊಡದಿದ್ದರೆ ಮಾತ್ರ, ಅದು ಕೇವಲ ಸ್ವೇಚ್ಛಾ ಪ್ರವೃತ್ತಿಯನ್ನೂ-ಇಂದ್ರಿಯ ಸಂತೃಪ್ತಿಯ ವಿಷಯದಲ್ಲಿ ನಿರಂಕುಶತೆಯನ್ನೂ ಅನುಸರಿಸುವುದಾದುದರಿಂದ, ಅದು ನಮ್ಮ ಜನಾಂಗದ ಅಭಿವೃದ್ಧಿಗಿಂತಲೂ ಅವನತಿಯನ್ನೇ ಹೆಚ್ಚಾಗಿ ಉಂಟುಮಾಡುವುದೆಂದು ಧಾರಾಳವಾಗಿ ಹೇಳಬಹುದು.

ಇನ್ನು ನಮ್ಮ ಪೂರ್ವಿಕರು ಬಾಲ್ಯವಿವಾಹವನ್ನು (ಶಿಶುವಿವಾಹವನ್ನಲ್ಲ) ರೂಢಿಗೆ ತಂದಿದ್ದುದರಲ್ಲಿ ಕೇವಲ ಅಪ್ರೌಢರಾಗಿದ್ದರೇ ಎಂಬುದನ್ನೂ ವಿಚಾರಿಸಬೇಕಾಗಿದೆ. ತಮ್ಮ ಪುತ್ರಿಯರ ಕ್ಷೇಮಚಿಂತನೆ ಇರುವ ಯಾವ ತಾಯಿಯೂ-ಯಾವ ತಂದೆಯೂ ಮುಂದೆ ಅವರ ಅನ್ನವಸ್ತ್ರಗಳನ್ನೂ ಧನಮಾನಗಳ ರಕ್ಷಣೆಯನ್ನೂ ಒದಗಿಸಲು ಶಕ್ತನೆಂದು ತೋರುವ ಯೋಗ್ಯನಿಗಲ್ಲದೆ ಬೀದಿಯಲ್ಲಿ ಹೋಗುವ ಭಿಕಾರಿಗೆ ತಾವು ಹೆತ್ತು ಸಲಹಿದ ಮಕ್ಕಳನ್ನು ಮಾರಿಕೊಂಡು ನಿಶ್ಚಿಂತರಾಗಿರರು. ಹಾಗೆ ಯಾವನಾದರೊಬ್ಬನು ದುಡ್ಡಿಗಾಗಿ ಮಗುವನ್ನು ಮಾರಿಕೊಂಡಿದ್ದರೆ ಅಂತಹ ನರಾಧಮನ ಆಚರಣೆಯು ಜನಾಂಗದ ಧ್ಯೇಯವಾಗಲಾರದು! ಹಾಗೆ ವಿವಾಹವಾದ ನಂತರ ಇನ್ನೂ ಕೇವಲ ಬಾಲ್ಯವಯಸ್ಸಿನಲ್ಲೇ ಇರುತ್ತಿದ್ದುದರಿಂದ-ವಿವಾಹಸಂಬಂಧವಾದ ಆಗಲೇ ವಧೂವರರ ದೇಹಸಂಬಂಧವೂ ಆಗಿ ತನ್ಮೂಲಕ ಅವರ ಆರೋಗ್ಯಾಭಿವೃದ್ಧಿಗೆ ಕುಂದುಂಟಾಗುತ್ತಿತ್ತೆಂದು ಯಾರೂ ಊಹಿಸಲಾರರಲ್ಲವೆ? ಮುಂದೆ ಕೊನೆಯ ಪಕ್ಷ ಎರಡು ಮೂರು ವರ್ಷಕಾಲ-ಕೆಲ ಸಂದರ್ಭಗಳಲ್ಲಿ ನಾಲ್ಕಾರು ವರ್ಷಗಳ ಕಾಲ, ಚಿಕ್ಕ ಅಳಿಯನು ಹಬ್ಬ ಹುಣ್ಣಿಮೆಗಳಿಗಾಗಿಯೂ, ಮನೆಯಲ್ಲಿ ನಡೆಯುವ ವಿವಾಹ ಉಪನಯನಾದಿ ಶುಭಪ್ರಸ್ತುತಗಳಿಗಾಗಿಯೂ ಬಂದುಹೋಗುವಾಗ ನಡೆವ ಆರತಿ ಅಕ್ಷತೆಗಳು, ಉರುಟಣೆ ಉತ್ಸವಾದಿಗಳಿಂದ ಇಬ್ಬರ ಮನಸ್ಸಿನಲ್ಲೂ ಪ್ರೇಮವು ಧಾರ್ಮಿಕ

ರೀತಿಯಿಂದ, ಹಿರಿಯರ ಆತಂಕಗಳಿಗೊಳಪಟ್ಟು ಅಭಿವೃದ್ಧಿಯಾಗುತ್ತಿರಲು ಅವಕಾಶವುಂಟಾಗುತ್ತಿದ್ದಿತು ಅಲ್ಲದೆ, ಮಂಗಳಗೌರಿ, ವರಮಹಾಲಕ್ಷ್ಮಿ, ಶ್ರಾವಣಶುಕ್ರವಾರ-ಶನಿವಾರಗಳ ಪೂಜೆ ಮುಂತಾದುವುಗಳಲ್ಲಿ ತನ್ನ ಸೌಮಾಂಗಲ್ಯರಕ್ಷಣೆಗಾಗಿ ಆ ಜಗಜ್ಜನನಿಯನ್ನು ಪ್ರಾರ್ಥಿಸಿ ಕೇವಲ ಅಪಂಚತನೇ ಆಗಿದ್ದರೂ ಆ ತನ್ನ ಪತಿಯ ಕ್ಷೇಮಚಿಂತನೆಯನ್ನು ಮಾಡುತ್ತಿದ್ದುದರಿಂದ ನಮ್ಮ ಬಾಲಿಕೆಯರಲ್ಲಿ ಪತಿಗಳೆಂದರೆ ಎಷ್ಟು ಮಟ್ಟಿನ ಭಕ್ತಿ ಗೌರವ ಪ್ರೀತಿ ವಿಶ್ವಾಸಗಳು ಹುಟ್ಟಿ ಬೆಳೆಯಲು ಅವಕಾಶವಿದ್ದಿತು ಎಂಬುದನ್ನು ಯಾರಾದರೂ ಯೋಚಿಸುವರೆ? ಮುಂದೆ ಕನ್ಯೆಯು ಪ್ರೌಢಳಾಗಿ, ವರನೂ ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಇಬ್ಬರೂ ಯುಕ್ತವಯಸ್ಕರಾಗಿದ್ದಾಗಲೇ ಪರಸ್ಪರರಿಗೆ ದೇಹಸಂಬಂಧವೂ ಕೇವಲ ಧರ್ಮದೃಷ್ಟಿಯಿಂದಲೇ ಆಗುತ್ತಿದ್ದ ಪದ್ಧತಿಯಿದ್ದಿತು ಈ ಬಗೆಯ ವಿವಾಹಪದ್ಧತಿಯಿಂದ, ಮೇಲ್ಕಂಡಷ್ಟು ಪ್ರಯೋಜನಮಾತ್ರವಲ್ಲ! ಕನ್ಯೆಯ ಮತ್ತು ವರನ ಪಕ್ಷದವರು ಅನೇಕ ವೇಳೆ ಮಿಳಿತರಾಗಿ ಅವರಲ್ಲಿ ಸ್ನೇಹ ಬಾಂಧವ್ಯಗಳೂ ಐಕಮತ್ಯ ಸೌಜನ್ಯ-ಸಹಾನುಭೂತಿಗಳೂ ಬೆಳೆದು, ಸಮಾಜದಲ್ಲಿ ಒಂದೊಂದು ವಿವಾಹಮೂಲವಾಗಿ ಅನೇಕ ಸಂಸಾರಗಳಲ್ಲಿ ಒಕ್ಕಟ್ಟುಂಟಾಗಲೂ ಅವಕಾಶವಿರುತ್ತಿದ್ದಿತು. ಹಾಗಲ್ಲದೆ ಪ್ರಾಯಕ್ಕೆ ಬಂದನಂತರ, ಆಗ್ಗೆ ತಮ್ಮ ಮನಸ್ಸೊಪ್ಪಿದವರನ್ನು ಪತ್ರಮೂಲಕವೋ ಚಿತ್ರಪಟಗಳ ಮೂಲಕವೋ ಮೆಚ್ಚಿವರಿಸಿ, ತಾವಿಬ್ಬರು ಹಿಡಿಂಬಿಭೀಮಸೇನರಂತೆ, ಸ್ವೇಚ್ಛೆಯಾಗಿ ವಿಹರಿಸಲು ತೊಡಗುವುದರಿಂದ ಜನಾಂಗಕ್ಕೂ-ಧರ್ಮಕ್ಕೂ-ದೇಶಕ್ಕೂ ಸಹಾಯವಾಗುವುದಾದರೆ ನಿಜವಾಗಿ ಅದು ಪುಣ್ಯೋದಯವೆಂದೇ ಭಾವಿಸಬೇಕು! ಒಂದು ವಿವಾಹದಿಂದ ನಾಲ್ಕು ಸಂಸಾರಗಳಲ್ಲಿ ಐಕಮತ್ಯವುಂಟಾಗಬೇಕೆಂಬುದು ಪೂರ್ವಿಕರ ಧ್ಯೇಯ. ಆದರೆ, ಆದರಲ್ಲಿ ಈಗ ಕಂಡುಬರುತ್ತಿರುವ ಸಾವಿರಾರು ಲೋಪಗಳಿಂದಲೇ ಅದರ ಯೋಗ್ಯತೆಯನ್ನು ನಿಷ್ಕರ್ಷಿಸಬಾರದು ಲೋಕದಲ್ಲಿ ದೋಷವಿಲ್ಲದುದು ಯಾವುದೂ ಇಲ್ಲವೆಂಬುದನ್ನು ಮರೆಯಬಾರದು. ಆ ಲೋಪಗಳೂ, ನಾವು ವಿವಾಹವೆಂಬುದನ್ನು ಧರ್ಮಬಂಧನೆಂಬುದನ್ನು ಮರೆತು ಕನ್ಯಾವರರನ್ನು ಮಾರಿಗೆಗಿಟ್ಟು ಕನ್ಯಾಶುಲ್ಕ-ವರಶುಲ್ಕಗಳಿಂದ ಅವರನ್ನು ಬೆಲೆಮಾಡಿ, ವಡವೆವಸ್ತ್ರಗಳ ಮೋಹವು ಪವಿತ್ರಪ್ರೇಮವನ್ನು ಕುಂದಿಸಲು ಅವಕಾಶವನ್ನು ಕಲ್ಪಿಸಿ

ಯೂ ಕಲ್ಪಿಸುತ್ತಲೂ ಇರುವುದರಿಂದಲೇ ಉಂಟಾಗಿ ನಮ್ಮ ವಿವಾಹ ಪದ್ಧತಿಯಲ್ಲಿ ಬೆಹಾಸೆಯೂ, ವಧೂವರರ ಮಾತಾಪಿತೃಗಳಲ್ಲಿ ದ್ವೇಷಾಸೂಯೆಗಳೂ ಹೆಚ್ಚುತ್ತಿವೆಯಲ್ಲದೆ ಬೇರೆಯಲ್ಲ! ನಮ್ಮ ಸಮಾಜ ಪದ್ಧತಿಗೆ ದೂರವಾದ ಈ ವ್ಯಾಪಾರ ಭಾವನೆಯನ್ನು ನಾವು ಬಿಟ್ಟು, ಭಾರತೀಯ ವಿವಾಹದ ಪವಿತ್ರಧ್ಯೇಯವನ್ನು ತಿಳಿದೆವಾದರೆ ಭಾರತೀಯ ಗೃಹದಲ್ಲಿ ಶಾಂತಿಸುಖ ಸಮಾಧಾನಗಳು ಕರೆಸಿಕೊಳ್ಳದೆಯೇ ಬರುವುವು. ಹಾಗಲ್ಲದೆ ಪ್ರೌಢ ವಿವಾಹ ಪದ್ಧತಿಯಿಂದ ನಮ್ಮವರ ಧಾರ್ಮಿಕ ನೈತಿಕ ದೈಹಿಕ ಸಾಮಾಜಿಕ ಲೋಪಗಳು ನಿವಾರಣೆಯಾಗಿ ಅದು ಮೇಲ್ಕಂಡ ದೃಷ್ಟಿಕೋಣ (angle of vision) ದಿಂದ ಸಮಾಜದಲ್ಲಿ ಐಕಮತ್ಯವನ್ನುಂಟುಮಾಡುವುದಾದರೆ, ಅದೂ Better to build anew than to repair the ruins ಎಂಬ ತತ್ವವನ್ನನುಸರಿಸಿರುವುದಾದುದರಿಂದ, ಸಮಾಜದ ಉನ್ನತಿಯನ್ನು ಕೋರುವ ಪ್ರತಿಯೊಬ್ಬ ದೇಶಾಭಿಮಾನಿಯೂ ಆನಂದಿಸುವನು. ಪ್ರಪಂಚದಲ್ಲಿ ಯಾವುದೊಂದು ಪದ್ಧತಿಯೂ ಸರ್ವಕಾಲ ಸರ್ವಾವಸ್ಥೆಗಳಲ್ಲೂ ಶಾಶ್ವತವಾಗಿರಲು ತಕ್ಕುದಲ್ಲವಾದರೂ, ನಾವು ಮಾಡಿಕೊಳ್ಳುವ ಸುಧಾರಣೆಗಳೇ ನಮ್ಮ ಕೊರಳಿಗೆ ಉರುಳುಗಳಾಗದಂತೆಯೂ- ನಮ್ಮ ಅಧೋಗತಿಗೆ ಕಾರಣಗಳಾಗದಂತೆಯೂ ಇದ್ದರೆ ಮಾತ್ರ, ನಾವೂ ವಿಚಾರಶೀಲರಲ್ಲೋ ಪರಿಗಣಿತರಾಗುವೆವು!—

ಕಾಮಕ್ರೋಧಾದಿಗಳೂ, ಭೋಗಾಭಿಲಾಷೆಯೂ ಪ್ರವೇಶಗೊಂಡಿರದ ಬಾಲ್ಯ ವಯಸ್ಸಿನಲ್ಲೇ ಮನಸ್ಸೆಂಬ ಕ್ಷೇತ್ರದಲ್ಲಿ ಬಿತ್ತಲ್ಪಟ್ಟ ಪ್ರೇಮ ಬೀಜವು ದೈವಿಕವಾದುದಾಗಲಿ ಅಥವ ಪ್ರಾಪಂಚಿಕವಾದುದಾಗಲಿ ಅದು ಪವಿತ್ರವಾಗಿರುವುದು.—ನಿಷ್ಕಲಂಕವಾಗಿರುವುದು. ಹಾಗೆ ಬಿತ್ತಲ್ಪಟ್ಟ ಪ್ರೇಮ ಬೀಜವು ಪೂರ್ವದಲ್ಲಿ, ಭಕ್ತಿ ವಿಶ್ವಾಸ ವಿನಯ ವಿಧೇಯತೆಗಳೆಂಬ ಗೊಬ್ಬರ ನೀರುಗಳಿಂದ ಪೋಷಿತವಾಗಿ ವಯಸ್ಸಿನೊಂದಿಗೆ ಬೆಳೆದು ವೃದ್ಧಿಯಾಗುತ್ತಿದ್ದುದರಿಂದ ದೈವಿಕವಾದುದಾಗಿದ್ದರೆ ಕೊನೆಯಲ್ಲಿ ಆ ಪ್ರಾಣಿಯನ್ನು ಮಹಾಭಕ್ತನನ್ನಾಗಿಸಿ ಅವನಲ್ಲಿ ವಿಶ್ವಪ್ರೇಮವೆಂಬ ಅಮೃತಫಲವನ್ನಾಗಲೀ, ಐಹಿಕವಾದುದಾಗಿದ್ದರೆ ಸಮಾಜದಲ್ಲಿ ಸುಖಸಮಾಧಾನ ಶಾಂತತೆಗಳೆಂಬ ಉತ್ತಮ ಫಲವನ್ನಾಗಲೀ ಕೊಡುತ್ತಿದ್ದಿತು. ಆ ಪ್ರೇಮದಲ್ಲಿ ಭಕ್ತಿ-ವಿಶ್ವಾಸಗಳಿಗೆ

ಎಡೆಯಿತ್ತಲ್ಲದೆ ಕಾಸುವೀಸಗಳ ಲೆಕ್ಕಾಚಾರ (Calculation) ಕ್ಕಲ್ಲ! "ಈ ಕನ್ಯೆಯನ್ನು ಮದುವೆಯಾದರೆ ಎಷ್ಟು-ವರೌಲ್ಯ (ವರದಕ್ಷಿಣೆ), ಎಷ್ಟು ವರೋಪಚಾರ-ಎಂತಹ ವಾಹನ ವಿಶೇಷಗಳು-ಮತ್ತೆಂತಹ ಮರ್ಯಾದೆಯೂ ಲಭ್ಯವಾಗುವುದೆಂದು ವರನೂ, ಈ ವರನನ್ನು ಮದುವೆಯಾದರೆ ಎಷ್ಟು ಸೇರು ಬಂಗಾರ-ಎಂತೆಂತಹ ವಸ್ತ್ರವಡವೆಗಳು ಪ್ರಾಪ್ತವಾಗುವುದೆಂದು ಕನ್ಯೆಯೂ ಲೆಕ್ಕ ಹಾಕಿಕೊಂಡು ಒಬ್ಬರೊಬ್ಬರನ್ನು ವರಿಸತಕ್ಕ ವಿವಾಹ ಪದ್ಧತಿಯ ಧ್ಯೇಯದೊಂದಿಗೆ "ಈ ವಿವಾಹ ಸಂಬಂಧದಿಂದ ವಂಶೋದ್ಧಾರವಾಗಿ ಉಭಯಕುಲಗಳ ಪಿತೃಗಳೂ ಸದ್ಗತಿಯನ್ನು ಹೊಂದಬೇಕೆಂ"ಬ ಧ್ಯೇಯವಿದ್ದ ವಿವಾಹ ಪದ್ಧತಿಯನ್ನು ಹೋಲಿಸಿದರೆ ಅವುಗಳಲ್ಲಿ ಯಾವುದು ಉತ್ತಮವೆಂಬುದನ್ನು ಹೇಳದೆಯೇ ಊಹಿಸಬಹುದಾಗಿದೆಯಲ್ಲವೆ?—

ಬಾಲಿಕೆಯಾಗಿದ್ದ ಮೀರಾಬಾಯಿಯ ಪ್ರೇಮವು ನಿಷ್ಕಲಂಕವಾದುದಾಗಿ ಅಭಿವೃದ್ಧಿಯನ್ನೈದಿತು ಅವಳಲ್ಲಿ ಕ್ರಮವಾಗಿ ತಾನು ರಾಜಪುತ್ರಿಯೆಂಬ ಭಾವನೆ-ಅಭಿಮಾನಗಳು ಕಡಮೆಯಾದುವು. ಸಾಧುಸಂತರೂ ಭಾಗವತರೂ ಎಲ್ಲಿರುವರೆಂದರೆ ಅಲ್ಲಿಗೆ ನಡೆದು ಅವರೊಂದಿಗೆ ಭಜನೆಯಲ್ಲಿ ತೊಡಗುವಳು. ಭಕ್ತಿ ಪಾರವಶ್ಯತೆಯಿಂದ ಉಚ್ಚಸ್ವರದಿಂದ ಕೀರ್ತಿಸತೊಡಗಿದಳೆಂದರೆ ಕೇಳುವವರ ಮೈಮೇಲಿನ ರೋಮಗಳು ಎದ್ದು ನಿಲ್ಲುವುವು. ಭಕ್ತ್ಯುದ್ರೇಕವನ್ನು ತಡೆಯಲಾರದೆ ಒಂದೊಂದುಸಾರಿ ಕುಣಿಯತೊಡಗುವಳು. ಆಕೆಯ ಸುಮಧುರ ಕಂಠಧ್ವನಿಯು ತಂಬೂರಿಯ ಶೃತಿಯೊಂದಿಗೆ ಮಿಳಿತವಾಗಿ, ಆಕೆಯ ಗಾನವೈಭವವನ್ನು ಸ್ವರ್ಗೀಯ ಗಾನವೈಭವಕ್ಕೆ ಮಿಗಿಲೆನ್ನಿಸುವುದು. ಭಕ್ತಿಪರ ಮನಸ್ಥಿತಿಯವನಾಗಿದ್ದ ರಾಜಾ ಜಯಮಲ್ಲನೂ, ತನ್ನ ಮಗಳ ಗಾನಕಲೆಯು ಭಗವತ್ಪರವಾದುದನ್ನು ತಿಳಿದು ಪರಮಸಂತೋಷಪಟ್ಟನು.

ಮೀರಾಬಾಯಿಯು ಮುಂದೆ ವಿವಾಹಯೋಗ್ಯ ವಯಸ್ಕಳಾದಳು. ಅವಳ ಸೌಂದರ್ಯ ಸೌಕುಮಾರ್ಯಾದಿಗಳ ಪ್ರಸಿದ್ಧಿಯು ದೇಶದೇಶಗಳಲ್ಲಿ ವಿಸ್ತರಿಸಿತು. ಆ ರಾಜಪುತ್ರಿಯನ್ನು ವರಿಸಿ ವಿವಾಹವಾಗಬೇಕೆಂದು ಅನೇಕ ರಾಜಕುವರರು ಇಚ್ಛಿಸಿದರು. ತಂದೆಯೂ ಅವರೆಲ್ಲರ ಭಾವಚಿತ್ರಗಳನ್ನೂ ತರಿಸಿ ಅವರಲ್ಲಿ ತನ್ನ ಕುವರಿಗೆ ಯೋಗ್ಯವರನಾರೆಂದು ಒಹು ವಿಚಾರ ನಡೆಸಿ

ದನು. ಆದರೂ, ಅವಳು ತಮ್ಮನ್ನೇ ವರಿಸುವಂತೆ ಅನುಗ್ರಹಿಸಬೇಕೆಂದು ದೇವರಿಗೆ ಬಹು ಬಗೆಯಿಂದ ಹರಕೆಗಳನ್ನು ಹೊತ್ತರು. ಹೀಗೆಯೇ ಕೆಲ ಕಾಲ ಸಾಗಿತು. ಕೊನೆಗೆ ಉದಯಪುರ ಸಂಸ್ಥಾನಕ್ಕೆ ಅಧಿಪತಿಯಾಗಿದ್ದ ರಾಣಾಮುಕುಲದೇವನು, ತನ್ನ ಮಗನಾದ ಯುವರಾಣಾಕುಂಭನಿಗೆ ಆಕೆಯನ್ನು ವಧುವಾಗಿ ಕೊಡಬೇಕೆಂದು ಯಾಚಿಸಿದನು. ಕರ್ಮಧರ್ಮಗಳ ಸಂಯೋಗವಾಗಿ ಕುಂಭನಿಗೆ ಮೀರೆಯು ಪತ್ನಿಯಾಗಬೇಕೆಂಬುದು ನಿಶ್ಚಯವಾಯಿತು.

ತನ್ನ ವಿವಾಹ ವಿಚಾರದಲ್ಲಿ ಪ್ರಯತ್ನಗಳು ನಡೆಯುತ್ತಿರುವ ವಿವರವು ಮೀರಾಬಾಯಿಗೆ ತಿಳಿಯಿತು. ಆಕೆಯು ಒಂದು ದಿನ ತನ್ನ ತಂದೆಯನ್ನು ಕುರಿತು, 'ತಂದೆಯೇ, ನಾನು ಈ ಮೊದಲೇ ನನ್ನ ಹೃದಯವನ್ನು ಶ್ರೀಕೃಷ್ಣ ಸ್ವಾಮಿಗೆ ಒಪ್ಪಿಸಿಬಿಟ್ಟಿದ್ದೇನೆ.—"ಈತನೇ ನಿನ್ನ ಮದುಮಗನು ಎಂದು ಈಗ ಎಂಟು ವರ್ಷಗಳ ಕೆಳಗೆ ಸ್ವಾಮಿಯನ್ನು ನನ್ನ ಕೈಗೆ-ಅಲ್ಲಲ್ಲ-ನನ್ನನ್ನು ಸ್ವಾಮಿಗೆ ಒಪ್ಪಿಸಿದುದನ್ನು ಮರೆತೆಯಾ!" ಎಂದಳು. ರಾಜಾಜಯಮಲ್ಲನಿಗೆ ಮಗಳ ಆ ಮಾತಿಗೆ ಏನು ಪ್ರತ್ಯುತ್ತರ ಕೊಡಬೇಕೆಂಬುದು ತೋರಲಿಲ್ಲ! ಆಟಕ್ಕಾಗಿ ಮದುಮಗನೆಂದು ಕೊಟ್ಟಿದ್ದ ಶ್ರೀಕೃಷ್ಣಸ್ವಾಮಿಯನ್ನು ತನ್ನ ಮಗಳು-ಸಾಕ್ಷಾತ್ ಮನುಷ್ಯನೋ ಎಂಬಂತೆ ಭಾವಿಸಿ, ಹೃದಯೇಶನನ್ನಾಗಿ ಕೈಕೊಂಡು ಬಿಡುವಳೆಂದು ಎಣಿಸಿರಲಿಲ್ಲ.—ಸ್ವಲ್ಪ ಹೊತ್ತು ಯೋಚಿಸುತ್ತಿದ್ದು ಆ ಮೇಲೆ—"ಅಮ್ಮಾ ನಿನಗೆ ತಿಳಿಯದು. ಶ್ರೀಕೃಷ್ಣಸ್ವಾಮಿಯಲ್ಲಿ ಭಕ್ತಿಯನ್ನಿಟ್ಟುಕೊಂಡಿರಬೇಕಾದುದು ಅತ್ಯಾವಶ್ಯಕವೇ ಆದರೂ, ಲೌಕಿಕವನ್ನು ಅನುಸರಿಸಿ ನಡೆಯಬೇಕಾದುದೂ ನಮ್ಮ ಕರ್ತವ್ಯವು. ಅದಕ್ಕಾಗಿ ನೀನು ಯಾವನಾದರೊಬ್ಬ ರಾಜಕುವರನನ್ನು ವರಿಸಿ ವಿವಾಹನಾಗಬೇಕಾದುದು ಆವಶ್ಯಕವು. ನಿನ್ನನ್ನು ಉದಯಪುರದ ಯುವರಾಣಾಕುಂಭನಿಗೆ ಕೊಟ್ಟು ವಿವಾಹ ಮಾಡಲು ಸಂಕಲ್ಪಿಸಿರುತ್ತೇನೆ. ನೀನೂ ಸಕಲ ಸದ್ಗುಣಯುತನೂ ಸೌಂದರ್ಯನಿಧಿಯೂ ಪರಾಕ್ರಮಿಯೂ ಆದ ಆ ರಾಜಕುವರನನ್ನು ಮದುವೆಯಾಗಿ ಪತಿಭಕ್ತಿಯುತಳಾಗಿ ಆತನಿಂದ ಧರ್ಮ ಅರ್ಥಕಾಮಗಳನ್ನು ಯುಕ್ತ ರೀತಿಯಿಂದ ಅನುಭವಿಸಿ, ಮುಂದೆ ನಿನ್ನ ಹೃದಯಾಂತರ್ವರ್ತಿಯಾದ ಶ್ರೀ ರುಕ್ಮಿಣೀಧವನ ಅನುಗ್ರಹದಿಂದ ಮೋಕ್ಷಸಾಮ್ರಾಜ್ಯ ಸುಖವನ್ನೂ ಹೊಂ

ದುವುದು ಶ್ರೇಯಸ್ಕರವು. ವಂಶಕ್ಕೂ ಭೂಷಣವು," ಎಂದು ಪ್ರತ್ಯುತ್ತರವನ್ನು ಕೊಟ್ಟನು.

ಮೀರಾಬಾಯಿಯು ತಂದೆಯ ಮಾತಿಗೆ ಎದುರು ಮಾತನಾಡಲಿಲ್ಲ. ಸುಮ್ಮನಿದ್ದಳು. ರಾಜನು ಆಕೆಯ ಮೌನವನ್ನು ಸಮ್ಮತಿಯೆಂದು ಭಾವಿಸಿ ಮುಂದೆ ನಗರ ಶೃಂಗಾರಕ್ಕೆ ಅಪ್ಪಣೆ ಕೊಟ್ಟನು. ಮೀರತ್ ರಾಜಧಾನಿಯು ಪರಿಪರಿಯಿಂದ ಸಿಂಗರಿಸಲ್ಪಟ್ಟಿತು. ಜಯಮಲ್ಲರಾಜನಿಂದ ಆಹ್ವಾನಿತರಾಗಿ ದೇಶದೇಶಗಳಿಂದ ಬಂದ ರಾಜಪುತ್ರರೂ ಬ್ರಾಹ್ಮಣರೂ ಶ್ರೀಮಂತರೂ ಚಿತ್ರವಿಚಿತ್ರ ರೀತಿಯಿಂದ ಅಲಂಕೃತವಾಗಿದ್ದ ಅತಿಥಿ ಬಿಡಾರಗಳಲ್ಲಿ ಇಳಿದುಕೊಂಡರು ನಗರವು ತಳಿರುತೋರಣ-ಧ್ವಜಪತಾಕೆಗಳಿಂದಲೂ, ಮನೆಗಳು ಸುಣ್ಣ ಕಾರಣೆ-ರಂಗವಲ್ಲಿಗಳಿಂದಲೂ ಶೃಂಗಾರವಾಗಿ ಎಲ್ಲಿ ನೋಡಿದರೂ ಜನಸಂದಣಿಯಿಂದ ಗಜಬಜಿಸಸಾಗಿತು ವರನ ಪಕ್ಷದ ರಾಣಾ ಮುಕುಲದೇವನು ವರನಾದ ತನ್ನ ಮಗನೊಂದಿಗೂ ಪರಿವಾರದೊಂದಿಗೂ ಅತ್ಯಂತ ವಿಜೃಂಭಣೆಯಿಂದ ಹೊರಟು ಬಂದು ಮೀರತ್ ನಗರವನ್ನು ಸೇರಿದನು. ಅವರನ್ನು ರಾಜನು ಯುಕ್ತಪರಿವಾರವನ್ನೊಡಗೊಂಡು ಸಂಧಿಸಿ ಕುಶಲಪ್ರಶ್ನೆಮಾಡಿ, ಯೋಗ್ಯಮರ್ಯಾದೆಯಿಂದ ಕರೆತಂದು ರಾಜೋಪಚಾರ-ವೈಭವಾದಿಗಳಿಗೆ ಕುಂದುಂಟಾಗದಂತೆ, ನೇತ್ರಾನಂದಕರವಾಗಿ ಸಿಂಗರಿಸಲ್ಪಟ್ಟಿದ್ದ ಬಿಡದಿಗಳಲ್ಲಿ ಇಳಿಸಿ ಆದರಿಸಿದನು. ವಿವಾಹ ಮುಹೂರ್ತದ ಶುಭದಿನವೂ ಪ್ರಾಪ್ತವಾಗಲು ಉಭಯರಾಜರೂ ತಮ್ಮ ತಮ್ಮ ಪತ್ನೀಪರಿವಾರಗಳೊಂದಿಗೆ ಎದಿರುಗೊಂಡರು ವರಪೂಜೆಯು ನಡೆಯಿತು. ನಾಂದೀಸ್ಥಾಪನೆ ಮುಂತಾದ ವಿವಾಹಾಂಗಗಳೆಲ್ಲವೂ ವಿಧ್ಯುಕ್ತವಾಗಿ ನಡೆದುವು. ರಾಜಾಜಯಮಲ್ಲನು, ಹರ್ಷಶೋಕಗಳ ಮಿಶ್ರಣದ ಜಲವು ಕಣ್ಣುಗಳಿಂದ ಧಾರಾಕಾರವಾಗಿ ಸುರಿಯುತ್ತಿರಲು, ತನ್ನ ಪ್ರೇಮ ಪುತ್ರಿಯ ಕರಗಳನ್ನು ವರನ ಹಸ್ತಗಳಲ್ಲಿಟ್ಟು ಕನ್ಯಾದಾನ ಮಾಡಿದನು ನೆರೆದ ಸಕಲ ಭೂಸುರರೂ, ಸಭಾಸದರೂ ಜಯಜಯವೆಂದರು ವಧೂವರರಿಗೆ ಸಕಲ ಶುಭಗಳೂ ಉಂಟಾಗಲೆಂದು ಹರಸಿದರು. ಉಭಯ ರಾಜರೂ ತಮ್ಮ ವೈಭವ-ಪದವಿಗಳಿಗೆ ಕುಂದಿಲ್ಲದಂತೆ ಅತಿಥಿ ಅಭ್ಯಾಗತರನ್ನೂ, ದೀನಾನಾಥರನ್ನೂ ದಕ್ಷಿಣೆ-ದಾನ ಊಟ ಉಪಚಾರ-ಉಡಿಗೆರೆ ಉತ್ಸವಾದಿಗಳಿಂದ ದಣಿಸಿದರು. ಸಕಲರೂ ಪರಮಾ

ನಂದಪಟ್ಟು, ಇಷ್ಟು ವೈಭವ ವಿಜೃಂಭಣೆಗಳಿಂದ ನಡೆದ ವಿವಾಹವನ್ನು ನೋಡಿದುದು ಇದೇ ಮೊದಲು ಎಂದುಕೊಂಡರು



## ಅಧ್ಯಾಯ ೪ "ಪತಿಗೃಹ"

ವಿವಾಹ ವೈಭವದ ಸಮಾರಂಭಗಳೆಲ್ಲವೂ ಮುಗಿದು ಅತಿಥಿ ಅಭ್ಯಾಗತರಾಗಿ ಬಂದಿದ್ದ ಸಕಲರೂ ತಮ್ಮ ತಮ್ಮ ದೇಶಗಳಿಗೆ ಹೊರಟು ನಡೆದರು. ಮಹಾರಾಣಾ ಮುಕುಲದೇವನೂ, ಬೀಗನಾದ ರಾಣಾಜಯಮಲ್ಲನಿಂದ ಕಳುಹಿಸಿಕೊಂಡು ಪತ್ನೀಪರಿವಾರಗಳೊಂದಿಗೂ ಮಗಸೊಸೆಯರೊಂದಿಗೂ ಕೂಡಿ ತನ್ನ ರಾಜ್ಯವಾದ ಉದಯಪುರವನ್ನು ಕುರಿತು ಪ್ರಯಾಣವಾಡಿದನು. ಮೀರಾಬಾಯಿಯು ತಾಯಿತಂದೆಗಳ ಪಾದಗಳಿಗೆ ನಮಸ್ಕರಿಸಿ ಅತ್ತೆಯ ಮನೆಗೆ ಹೊರಡಲು ಅನುಮತಿಸಬೇಕೆಂದು ಅವರ ಅಪ್ಪಣೆಯನ್ನು ಬೇಡಿದಳು. ಬಹು ಕಾಲಕ್ಕೆ ಅಪೂರ್ವವಾಗಿ ಪಡೆದು, ವಿಶೇಷ ಪ್ರೀತಿಯಿಂದ ಬೆಳೆಸಿದ್ದ ಏಕಮಾತ್ರ ಪುತ್ರಿಯನ್ನು ಅಗಲಬೇಕಾಗಿ ಬಂದುದಕ್ಕಾಗಿ, ಆಗ ಅವರಿಗುಂಟಾದ ಶೋಕಸಂತಾಪಗಳನ್ನು ಮಾತುಗಳಿಂದ ವರ್ಣಿಸುವುದು ಅಸದಳವು. ಸಂಸಾರಿಗಳಲ್ಲಿ ಪ್ರತಿಯೊಬ್ಬರಿಗೂ ಒಂದಿಲ್ಲೊಂದು ವೇಳೆ ಪ್ರಾಪ್ತವಾಗಿ ಅವರನ್ನು ಹಣ್ಣಾಗಿಸಿದ ಈ ಅನುಭವವನ್ನು ಪಡೆದ ದಂಪತಿಗಳು ಮಾತ್ರ ಆಗಿನ ಆ ರಾಜದಂಪತಿಗಳ ದುಃಖದ ಪರಮಾವಧಿಯ ಪ್ರಮಾಣವನ್ನು ಗ್ರಹಿಸಬಲ್ಲರು.

ಮೀರಾಬಾಯಿಯು ತನ್ನ ಪ್ರಾಣಮನೋಹರವಾದ ಶ್ರೀಕೃಷ್ಣವಿಗ್ರಹವನ್ನು ಮರೆಯದೆ ತೆಗೆದುಕೊಂಡು ಮೇನೆಯಲ್ಲಿ ಕುಳಿತಳು. ಪ್ರಯಾಣವು ದಿನದಿನಕ್ಕೆ ಸಾಗಿ, ಅವರು ಉದಯಪುರವನ್ನು ಸಮೀಪಿಸಿದರು. ಮೀರಾಬಾಯಿಯ ಮೇನೆಯು ಅರಮನೆಯ ಮುಂಭಾಗದಲ್ಲಿ ಇಳಿಯಿತು. ತಮ್ಮ ಯುವರಾಣಾನ ಪತ್ನಿಯು ನಗರಪ್ರವೇಶ ಮಾಡುವಳೆಂಬ ಸಂಭ್ರಮದಿಂದ ಆ ಉತ್ಸವದಲ್ಲಿ ಸಹಸ್ರಾರುಮಂದಿ ನೆರೆದಿದ್ದರು. ಮೀರಾಬಾಯಿಯು ಮೇನೆಯಿಂದ ಇಳಿದು ಬಂದು ಅತ್ತೆಗೆ ನಮಸ್ಕರಿಸಿ ತಲೆಯನ್ನು ತಗ್ಗಿಸಿ ನಮ್ರತೆಯಿಂದ ಸಮೀಪದಲ್ಲಿ ನಿಂತುಕೊಂಡಳು. ಆಕೆಯ ಕಂಕುಳಲ್ಲಿದ್ದ ಶ್ರೀಕೃಷ್ಣ

ವಿಗ್ರಹವು ಅತ್ತೆಯ ದೃಷ್ಟಿಗೆ ಗೋಚರವಾಯಿತು. ಒಡನೆ ಧೂರ್ತ ಸ್ವಭಾವದ ಆ ಸ್ತ್ರೀಯು—"ಅದೇನು ಕೈಯಲ್ಲಿ ಎತ್ತಿಕೊಂಡು, ನೀನು ಅಷ್ಟು ಜೋಪಾನವಾಗಿ ನೋಡಿಕೊಳ್ಳುತ್ತಿರುವುದು?" ಎಂದು ಪ್ರಶ್ನಿಸಿದಳು. ಅದನ್ನು ಕೇಳಿದ ನಮ್ಮ ಬಾಲಿಕೆಯು ನಮ್ರತೆಯಿಂದ "ತಾಯೇ, ಇದು ಬಾಲ್ಯದಿಂದಲೂ ನನ್ನೊಂದಿಗೆ ಇರುವ-ನನಗೆ ಪ್ರಾಣಗಳಿಗಿಂತಲೂ ಅಧಿಕ ಪ್ರಿಯವಸ್ತುವಾಗಿರುವ ಶ್ರೀಕೃಷ್ಣದೇವರ ವಿಗ್ರಹವು" ಎಂದಳು ಆ ಮಾತು ಕಿವಿಗೆ ಬಿದ್ದೊಡನೆಯೇ, ಅತ್ತೆಯು—"ಮೀರಾ, ನಾವು ಶಕ್ತಿಪೂಜಕರೆಂಬುದು ತಿಳಿಯದೋ! ನಮ್ಮ ಮನೆಯಲ್ಲಿ ಬೇರೆ ದೇವಮೂರ್ತಿಗಳ ಪ್ರವೇಶವಾಗಕೂಡದು ವೈಷ್ಣವರಿಗೆ ನಮ್ಮ ಹೊಸ್ತಿಲು ಮೆಟ್ಟಲೂ ಅಪ್ಪಣೆಯಿಲ್ಲ. ಈ ಕೂಡಲೇ, ಹೊರಕ್ಕೆ ಹೋಗಿ ಆ ಬೊಂಬೆಯನ್ನು ದೂರವಾಗಿ ಎಸೆದು ತರುವಾಯ ಒಳಕ್ಕೆ ಬಾ" ಎಂದು ನಿಷ್ಠುರವಾಗಿ ನುಡಿದಳು.

ತನ್ನ ಪ್ರಾಣಾಧಿಕವೆನಿಸಿದ್ದ ಶ್ರೀಕೃಷ್ಣವಿಗ್ರಹವನ್ನು ದೂರಕ್ಕೆ ಎಸೆದು ಬರಬೇಕೆಂಬ ಮಾತು ಮೀರಾಬಾಯಿಗೆ ರುಚಿಸಲಿಲ್ಲ—ಸಹನೆಯಾಗಲಿಲ್ಲ. ಆ ಮಾತಿಗಾಗಿ ಆ ನಿರ್ಮಲಾಂತಃಕರಣದ ಬಾಲೆಯು ಸಂತಾಪದಿಂದ ನೊಂದುಕೊಂಡು, ಪುನಃ ತಮ್ಮತ್ತೆಯನ್ನು ಕುರಿತು,—"ಅಮ್ಮಾ ಸರ್ವಾಂತರ್ಯಾಮಿಯಾದ ಭಗವಂತನನ್ನು ಭಕ್ತರು ತಮ್ಮ ಶ್ರದ್ಧಾನುಸಾರ ಯಾವ ರೂಪಿನಿಂದ ಪೂಜಿಸಿ ಧ್ಯಾನಿಸಿದರೆ ತಾನೇ ಅದರಲ್ಲಿ ಕೊರತೆಯೇನು? ನಾನು ನನ್ನ ಪ್ರಾಣಗಳನ್ನಾದರೂ ತ್ಯಜಿಸಬಲ್ಲೆನಲ್ಲದೆ, ಪ್ರಾಣಕ್ಕಿಂತಲೂ ಅತಿಶಯವಾಗಿರುವ ಶ್ರೀಕೃಷ್ಣಸ್ವಾಮಿಯ ಈ ಮೂರ್ತಿಯನ್ನು ಬಿಟ್ಟಿರಲಾರೆನು" ಎಂದು ಧೈರ್ಯವಾಗಿ ಪ್ರತ್ಯುತ್ತರವಿತ್ತಳು.

ನಿಷ್ಕಲ್ಮಷತೆಯಿಂದ ನುಡಿದ ಮೀರಾಬಾಯಿಯ ಪ್ರತ್ಯುತ್ತರವು ಆಕೆಗೆ ಅವಿಧೇಯತೆಯಿಂದ ನುಡಿದಂತೆ ಅರ್ಥವಾಗಿ ಅತ್ತೆಯ ಕೋಪವನ್ನು ನೆತ್ತಿಗೇರಿಸಿತು. ಇನ್ನೂ ಮನೆಯ ಹೊಸ್ತಿಲೊಳಗೆ ಕಾಲಿಟ್ಟು ಬರುವುದಕ್ಕೆ ಮುಂಚೆಯೇ ತನ್ನ ಸೊಸೆಯು, ತನ್ನ ಆಜ್ಞೆಗೆ ವಿರೋಧವಾಗಿ ನಡೆದು, ಧೈರ್ಯವಾಗಿ ಎದುರಿಗೆ ನಿಂತು ಪ್ರತ್ಯುತ್ತರವನ್ನು ಕೊಟ್ಟುದು, ಮಹಾ ಅಭಿಮಾನ ಶಾಲಿನಿಯಾದ ಆಕೆಗೆ ಸಹನೆಯಾಗಲಿಲ್ಲ. ಮುಂದೆ ಅವಿಧೇಯಳಾದ ಆ ತನ್ನ ಸೊಸೆಯೊಂದಿಗೆ ಮಾತನಾಡುವುದನ್ನು ಸಾಕುಮಾಡಿ, ಆ ಸ್ಥಳವನ್ನು ಬಿಟ್ಟು ಒಳಕ್ಕೆ

ಹೊರಟು ನಡೆದಳು. ಅರಮನೆಗೆ ಯಜಮಾನಿಯಾದ ಮಹಾರಾಣಿಯು ಆಜ್ಞೆಗೆ ವಿರುದ್ಧವಾಗಿ ಮೀರಾಬಾಯಿಯನ್ನು ಒಳಕ್ಕೆ ಬರುವಂತೆ ಕರೆದು ಆದರಿಸಲು ಮತ್ತಾರಿಗೆ ಧೈರ್ಯವಿದ್ದೀತು! ನೂತನ ವಧುವಾಗಿ ಮನೆಗೆ ಬಂದ ಆಕೆಯಾದರೂ ಕೇವಲ ಅಪರಿಚಿತವಾದ ಆ ಮನೆಗೆ ಕರೆಯದೆಯೇ ಹೇಗೆ ಪ್ರವೇಶಿಸುವಳು! ಅಷ್ಟರಲ್ಲಿ ಮಹಾರಾಣಿಯಿಂದ, ತಮ್ಮ ವಂಶಾಚಾರಕ್ಕೆ ವಿರುದ್ಧವಾದ ವೈಷ್ಣವ ಪೂಜೆಯಲ್ಲಿ ತೊಡಗಿರುವ ಅವಳನ್ನು ಅರಮನೆಯಲ್ಲಿ ಹೋಗಿಸದೆ ಬೇರೊಂದು ಮನೆಯಲ್ಲಿ ಇರಿಸಬೇಕೆಂದು ಆಜ್ಞೆ ಬಂತು ಅಂತೇ ಯುವರಾಣಿಯಾಗಿ ನಗರ ಪ್ರವೇಶ ಮಾಡಿದ ಮೀರಾಬಾಯಿಯು ಅತ್ತೆ ಯಿಂದ ಮೇಲ್ಕಂಡಂತೆ ತಿರಸ್ಕೃತಳಾಗಿ, ತನಗಾಗಿ ಬಿಡಿಸಿಕೊಟ್ಟ ಬೇರೊಂದು ಭವ್ಯಗೃಹದಲ್ಲಿ ವಾಸಿಸುತ್ತಾ, ಸದಾ ಶ್ರೀಕೃಷ್ಣ ಭಜನೆ, ಸೇವೆ, ಪೂಜೆ, ಕೀರ್ತನೆಗಳಲ್ಲಿ ಮಗ್ನಳಾಗಿದ್ದುಬಿಟ್ಟಳು

ಹೀಗೆ ಅತ್ತೆಸೊಸೆಯರು ಹೊರಬಾಗಿಲಲ್ಲೇ ಬೇರೆಯಾದುದರಿಂದ ಮುಂದೆ ಅವರವರ ಸ್ನೇಹಸೌಜನ್ಯಾದಿಗಳಾಗಲೀ, ಮೀರಾಬಾಯಿಯ ವಿಷಯ ದಲ್ಲಿ ಅತ್ತೆಯ ಮನೆಯವರ ಪ್ರೀತಿಪ್ರೇಮಗಳಾಗಲೀ ಎಷ್ಟರಮಟ್ಟಿಗೆ ಇದ್ದು ವೆಂಬುದನ್ನು ಹೇಳಬೇಕಾದುದಿಲ್ಲವಷ್ಟೆ! ಅರಮನೆಯಲ್ಲಿ ಆಕೆಯೊಂದಿಗೆ ಮಾತನಾಡಲು ಯಾರಿಗೂ ಧೈರ್ಯವಿಲ್ಲ. ಆಕೆಯ ಪತಿಯಾದ ಯುವರಾಣಾ ಕುಂಭನಿಗೂ, ಅನ್ಯಧರ್ಮದವಳಾದ ಅವಳನ್ನು ಸಮೀಪಿಸುವುದಂತಿರಲಿ, ನೋಡುವ ಸ್ವಾತಂತ್ರ್ಯವೂ ಇಲ್ಲವಾಯಿತು. ಮೀರಾಬಾಯಿಯ ಸೇವೆಗಿದ್ದ ಇಬ್ಬರು ದಾಸಿಯರು ಮತ್ತು ಆಕೆ ಇಷ್ಟು ಮಂದಿ ಮಾತ್ರ ಆ ಮನೆಯಲ್ಲಿ ವಾಸಿಸುವರು. ಎಂತಾದರಾಗಲಿ! ಆ ಪುಣ್ಯಾತ್ಮಳು ಅದಕ್ಕಾಗಿ ಮರುಗಲಿಲ್ಲ ವ್ಯಸನಕ್ಕೀಡಾಗಲಿಲ್ಲ. ತನ್ನನ್ನು ಹೀಗೆ ಅವಮಾನಗೊಳಿಸಿದರಲ್ಲಾ ಎಂದು ಹಲುಬಿಕೊಳ್ಳಲಿಲ್ಲ. ಈ ತೊಂದರೆಗಳೆಲ್ಲಾ ತಪ್ಪಿದುದು ಅವಳಿಗೆ ತನ್ನ ಪ್ರಾಣಮನೋಹರನಾದ ಶ್ರೀಕೃಷ್ಣಮೂರ್ತಿಯನ್ನು ನಿಶ್ಚಿಂತೆಯಿಂದ ಭಜಿಸಿ ಸೇವಿಸಲು ಹೆಚ್ಚು ಅವಕಾಶವನ್ನು ಕಲ್ಪಿಸಿಟ್ಟಿತು.

ಮೀರಾಬಾಯಿಯು ಯುವರಾಣಿಯಾದ ತನ್ನಲ್ಲಿಗೆ ಪತಿಯು ಬಂದು ತನ್ನೊಂದಿಗೆ ಸರಸಸಲ್ಲಾಪಗಳನ್ನಾಡಲಿಲ್ಲವೆಂದು ಕೊರಗಲಿಲ್ಲ-ಮರುಗಲಿಲ್ಲ. ತನ್ನ ಪ್ರಾಣಪತಿಯ ಉಪಭೋಗಕ್ಕೆ ಉಪಯೋಗವಾಗದ ತನ್ನ ಯೌವನವೂ

ಸೌಂದರ್ಯವೂ ಅರಣ್ಯದಲ್ಲಿ ಕಾಯ್ದ ಬೆಳದಿಂಗಳಂತೆ ನಿಷ್ಪ್ರಯೋಜನವಾದುವೆಂದು ಶೋಕಿಸಲಿಲ್ಲ. ಮತ್ತು ವಿರಹವ್ಯಥೆಯಿಂದ ಬಾಡಿ ಬಸವಳಿಯಲಿಲ್ಲ. ಈ ಬಗೆಯ ಕ್ಷುದ್ರ ಕಾಮ ವಿಕಾರಗಳು ಆಕೆಯ ಮನಸ್ಸಿನಲ್ಲಿ ಪ್ರವೇಶಗೊಳ್ಳಲೇ ಇಲ್ಲ. ತನ್ನ ಪ್ರಾಣಮನೋಹರನಾದ ಶ್ರೀಕೃಷ್ಣಮೂರ್ತಿಯ ದಿವ್ಯ ವಿಗ್ರಹವನ್ನು ಆ ಮನೆಯ ಒಂದು ಭಾಗದಲ್ಲಿ ಉನ್ನತ ಪೀಠದ ಮೇಲೆ ಕೂರಿಸಿ, ದಿವ್ಯ ವಸ್ತ್ರಾಭರಣಾದಿಗಳಿಂದ ಅಲಂಕರಿಸಿದಳು. ಪ್ರತಿದಿನವೂ ಉದ್ಯಾನದಲ್ಲಿನ ಜಾಜಿ, ಸಂಪಿಗೆ, ಶಾವಂತಿಗೆ, ಇರವಂತಿಗೆ ಮಲ್ಲಿಗೆ ಪಾದರಿ ಮುಂತಾದ ಪುಷ್ಪಗಳನ್ನೂ ಎಳೆಯ ತುಲಸೀದಳಗಳನ್ನೂ ತಾನೇ ಬಿಡಿಸಿ ತಂದು, ಬಗೆಬಗೆಯ ದಂಡೆಗಳನ್ನೂ ಪುಷ್ಪಗುಚ್ಛಗಳನ್ನೂ ಕಟ್ಟಿ ಮಾಲೆ ಹಾಕುವಳು ಪ್ರೇಮಭರದಿಂದ ಆಲಂಗಿಸುವಳು ಕೈಯಲ್ಲಿ ತಂಬೂರಿ ತಾಳಗಳನ್ನು ಹಿಡಿದು ಉಚ್ಚಸ್ವನದಿಂದ ಪದಗಳನ್ನು ಹಾಡಿ ಭಜನೆ ಮಾಡುವಳು. ದಿವ್ಯ ಫಲಗಳನ್ನೂ ಭಕ್ಷ್ಯಭೋಜ್ಯ ಪಾನೀಯಗಳನ್ನೂ ಸಮರ್ಪಿಸುವಳು ಆರತಿಗಳನ್ನೆತ್ತುವಳು. ತೂಗು ಮಂಚದ ಮೇಲೆ ಕೂಡಿಸಿ ತೂಗುವಳು. ಆಕೆಗೆ ಅದೊಂದು ವಿಗ್ರಹವೆಂಬ ಭಾವನೆಯೇ ಇರದೆ-ಚೈತನ್ಯಯುಕ್ತವಾದ ತನ್ನ ಹೃದಯಾಧಿದೇವತೆಯೆಂಬ ಭಾವನೆಯೇ ಸ್ಥಿರರೂಪದಿಂದ ನಿಂತುಹೋಯಿತು.

ಯುವರಾಜಕುಂಭನಿಗೆ ನವಯೌವನ-ಅಲೌಕಿಕ ಸೌಂದರ್ಯಶಾಲಿನಿಯಾದ ಪತ್ನಿ! ಗಂಧರ್ವ ಗಾನವನ್ನು ನಾಚಿಸುವ ಆಕೆಯ ಕಂಠಧ್ವನಿಯೂ, ಅಪ್ಸರಸೆಯರನ್ನು ವಿಡಂಬಿಸುವ ಆಕೆಯ ರೂಪಲಾವಣ್ಯಗಳೂ ಅವನನ್ನು ಮುಗ್ಧನನ್ನಾಗಿ ಮಾಡಿದ್ದುವು ಯೌವನ ವಯಸ್ಕರಾದ ದಂಪತಿಗಳು, ಅವರು ಸುರೂಪಿಗಳಾಗಿರಲಿ, ಅಥವ ಕುರೂಪಿಗಳಿರಲಿ-ಜೊತೆಗಿದ್ದು, ಪರಸ್ಪರ ಕುಡಿನೋಟಗಳಿಂದ-ಹುಸಿನಗೆಗಳಿಂದ-ಲಲ್ಲೆ ಮಾತುಗಳಿಂದ-ಪ್ರೇಮಪೂರ್ಣಹೃದಯದಿಂದ ಒಬ್ಬರೊಬ್ಬರನ್ನು ಪ್ರೀತಿಸಿ, ವಿಷಯಸುಖಗಳನ್ನು ಪಡೆಯಲಾಶಿಸುವುದು ಪ್ರಪಂಚ ಸಾಮಾನ್ಯವಲ್ಲವೆ? ಹಾಗಿರುವಲ್ಲಿ ಯುವರಾಜನಾದ ಕುಂಭನು ಲೋಕಮೋಹಕ ಸೌಂದರ್ಯಶಾಲಿನಿಯಾದ-ನವವಧುವಾದ ತನ್ನಾ ಪತ್ನಿಯನ್ನು ದರ್ಶಿಸಲೂ ಅನುಮತಿ ಸಿಕ್ಕದಿದ್ದರೆ ಅವನ ಜೀವಿತವು ಎಷ್ಟು ಭಾರವಾಗಿ ತೋರಿದ್ದೀತು? ಅವನು ಎಷ್ಟು ನಿಟ್ಟುಸಿರು ಬಿಟ್ಟಿದ್ದಾನು! ತನ್ನ ವಿಧಿಯನ್ನು ಎಷ್ಟು ಬಗೆಯಿಂದ ಶಪಿಸಿಕೊಂಡಿದ್ದಾನು! ಆದರೇನು, ಉಪಾಯ

ವಿಲ್ಲ. ತಾಯಿಯ ಆಜ್ಞೆಗೆ ವಿರೋಧವಾಗಿ, ಹೋಗಿ, ಪತ್ನಿಯನ್ನು ಮಾತ ನಾಡಿಸುವಂತಿಲ್ಲ! ಪ್ರಪಂಚದಲ್ಲಿ ಯಾವ ವಸ್ತುವಿಗಾದರೂ ಅದರ ಸಹಜ ಮಾರ್ಗದಲ್ಲಿ ತಡೆಯುಂಟಾಗುವವರೆಗೂ ಎಲ್ಲವೂ ಸುಲಲಿತವಾಗಿರುವುದು. ಅದನ್ನು ಉದ್ರೇಕಗೊಳಿಸುವುದಕ್ಕೆ ಅದರ ಸಹಜಮಾರ್ಗದಲ್ಲಿ ತಡೆಯನ್ನು ತಂದೊಡ್ಡುವುದೇ ಮುಖ್ಯ ಕಾರಣವಾಗಿರುವುದು. ಯುವರಾಣಾನು ಬಹು ದಿನಗಳವರೆಗೆ ಕಾದು ಕಾದು ಕೊನೆಗೊಂದು ದಿನ ಬೇಸತ್ತು,—"ಏನಾದ ರಾಗಲಿ! ಈ ದಿನ ನನ್ನಾ ಹೃದಯೇಶ್ವರಿಯನ್ನು ಕಂಡು, ಮಾತನಾಡಿಸಿ-ಹೃದ ಯದ ತಾಪವನ್ನು ತೀರಿಸಿಕೊಂಡು ಬರುವೆನು" ಎಂದುಕೊಂಡು ಹೊರಟನು.

ರಾತ್ರಿ ಹತ್ತುಹನ್ನೊಂದು ಗಂಟೆಗಳಿಗೆ ಮೇಲ್ಪಟ್ಟಿದೆ ಜಡಜಗತ್ತೆ ಲ್ಲವೂ ನಿದ್ರಾದೇವಿಯ ಮಡಲಲ್ಲಿ ಮಲಗಿ ಬಾಹ್ಯಜಗತ್ತಿನ ಪ್ರಜ್ಞೆಯೇ ಇಲ್ಲದೆ ಪರವಶವಾದಂತಿದೆ. ಯುವರಾಣಾನು ಕಳ್ಳತನದಿಂದಲೋ ಎಂಬಂತೆ ತನ್ನ ಅರಮನೆಯಿಂದ ಹೊರಟು, ಮೀರಾಬಾಯಿಯು ವಾಸಿಸಿದ್ದ ಮಹಲಿನ ಕಡೆಗೆ ಬರುತ್ತಿದ್ದಾನೆ. ಬರುತ್ತಿರುವಾಗ ಹರ್ಷ-ಭಯ-ನಾಚಿಕೆ ಮುಂತಾದ ಅನೇಕ ಬಗೆಯ ಮನೋಭಾವನೆಗಳಿಂದ ಅವನ ಹೃದಯವು ಪಸ್ಫುರಿತ ವಾಗುತ್ತಿದೆ ಹತ್ತಿರ ಹತ್ತಿರ ಬಂದಂತೆಲ್ಲಾ ಒಳಗೆ ಹಾಡುತ್ತಿದ್ದ ಗಾಯ ನವು ಅವನ ಕರ್ಣಗಳನ್ನು ಪ್ರವೇಶಿಸಿತು. ತಾಳಗಳ ಸದ್ದು ಕೇಳಿಸಿತು. ಘಲ್ಲುಘಲ್ಲೆಂಬ ಗೆಜ್ಜೆಗಳ ಶಬ್ದವು ಅಸ್ಪಷ್ಟವಾಗಿ ಕಿವಿಗೆ ಬಿತ್ತು. ಕರ್ಣಾನಂದ ಕರವಾದ ಆ ಗಾಯನವು ಆತನನ್ನು ಮುಗ್ಧನನ್ನಾಗಿ ಮಾಡಿತು. ಸ್ವಲ್ಪ ಹೊತ್ತು ನಿಂತು ಕೇಳಿದನು. ಗೆಜ್ಜೆಗಳ ಶಬ್ದದಿಂದ ಯಾರೋ ನಾಟ್ಯ ಮಾಡು ತ್ತಿದ್ದಾರೆಂದು ಬೋಧೆಯಾಗುತ್ತಿದ್ದಿತು. ಅವನು ಭ್ರಾಂತನಂತಾದನು. "ಇದೇನು ಈ ಮಧ್ಯರಾತ್ರಿಯಲ್ಲಿ-ನನ್ನ ಪತ್ನಿಯ ಅಂತಃಪುರದಲ್ಲಿ ನೃತ್ಯಗೀತ ಗಳಾಗಲು ಕಾರಣವೇನು? ಇದರ ವಿಚಾರ ಮಾಡಬೇಕು" ಎಂದುಕೊಂಡು, ಸ್ವಲ್ಪ ಹೊತ್ತು ತಡೆದು ಆಕೆಯು ಹಾಡುತ್ತಿದ್ದ ಗೀತವನ್ನು ಆಲಿಸುತ್ತಿದ್ದನು.

ಮಹಾಭಕ್ತಳಾದ ಮೀರಾಬಾಯಿಯು ತನ್ನ ನಿತ್ಯದ ಪದ್ಧತಿಯಂತೆ ಆ ದಿನವೂ ಪ್ರಾತಃಕಾಲದಿಂದಲೂ ಶ್ರವಣಕೀರ್ತನಸ್ಮರಣ ಪಾದಸೇವನ ಅರ್ಚನ ವಂದನ ದಾಸ್ಯಗಳಿಂದ ಸ್ವಾಮಿಯನ್ನು ತ್ರಿಕರಣಶುದ್ಧಿಯಾಗಿ ಆರಾಧಿ ಸುತ್ತಿದ್ದು, ತಾನು ಶ್ರೀಕೃಷ್ಣಪ್ರಿಯೆಯಾದ ರಾಧೆಯೆಂಬ ಭಾವವನ್ನು ವಹಿಸಿ,

ಸಾಯಿಕಾನಾಯಕರಲ್ಲಿ ಸಹಜವಾದ ಸಖ್ಯವನ್ನು ಕೋರಿ, ತನ್ನ ಹೃದಯೇಶ್ವರನಾದ ಶ್ರೀಕೃಷ್ಣಸ್ವಾಮಿಯನ್ನು ನೃತ್ಯಗೀತಾದಿಗಳಿಂದ ಆರಾಧಿಸತೊಡಗಿದ್ದಳು. ಹೊರಗೆ ಕುಂಭರಾಣಾನು ಕಿವಿಗೊಟ್ಟು ಕೇಳುತ್ತ ನಿಂತಿದ್ದಾಗ ಹಾಡುತ್ತಿದ್ದ ಪದದ ಭಾವಾರ್ಥವು ಹೀಗಿತ್ತು—"ಪ್ರಾಣಮನೋಹರ ನನ್ನ ಮೇಲೆ ಏಕಿಷ್ಟು ನಿರ್ದಯ! ಕರುಣಾಕಟಾಕ್ಷವಿಟ್ಟು ಏಕೆ ನನ್ನನ್ನು ನೋಡಲೊಲ್ಲೆ! ನಿನ್ನ ಪಾದಸೇವೆಯನ್ನು ಏಕೆ ದಯಪಾಲಿಸಲೊಲ್ಲೆ! ಹೃದಯೇಶ್ವರಾ, ಗಾಢಾಲಿಂಗನ ಸೌಖ್ಯವನ್ನಿತ್ತು ನನ್ನನ್ನು ಅನುಗ್ರಹಿಸಲಾಗದೇ? ಮನೋವಲ್ಲಭಾ, ದಯಾನಿಧಿಯಾದ ನೀನು ಕೃಪೆ ಮಾಡದಿದ್ದರೆ ದೀನಳಾದ ನನಗೆ ದಿಕ್ಕಾರು? ನಿನ್ನ ಕರುಣಾಪಾಂಗಕ್ಕೆ ಪಾತ್ರವಾಗದಿದ್ದ ಮೇಲೆ ಈ ದೇಹವೇಕೆ, ಈ ಜೀವಿತವೇಕೆ? ಈ ದೇಹದ ಪಂಚೇಂದ್ರಿಯಗಳನ್ನೂ ನನ್ನೀ ಪಂಚಪ್ರಾಣಗಳನ್ನೂ ನಿನ್ನ ಪಾದಗಳಿಗೊಪ್ಪಿಸಿಕೊಂಡು ನನ್ನನ್ನು ಉದ್ಧರಿಸು; ಪ್ರಭುವೇ!" ಎಂದು ಮುಂತಾಗಿ ಹಾಡಿಕೊಂಡು ತನ್ನ ಇಷ್ಟದೈವವನ್ನು ಪ್ರಾರ್ಥಿಸಿಕೊಳ್ಳುತ್ತಿದ್ದಳು.

ಹೊರಗೆ ನಿಂತು, ಒಳಗೆ ನಡೆಯುತ್ತಿದ್ದ ಸಂಗತಿಗಳನ್ನು ಕಣ್ಣಿಂದ ಕಾಣದೆ,-ನಡುರಾತ್ರೆಯ ಆಪ್ಪು ಹೊತ್ತಿನಲ್ಲಿ ಏಕಾಕಿನಿಯಾಗಿ ವಾಸಿಸುತ್ತಿದ್ದ ತನ್ನ ಪತ್ನಿಯ ಬಾಯಿಂದ ಬರುತ್ತಿದ್ದ ಆ ಮಾತುಗಳನ್ನು ಮಾತ್ರ ಕೇಳುತ್ತಿದ್ದುದರಿಂದ, ಅವು ಶೂಲಗಳಂತೆ ಕಿವಿಗಳಿಗೆ ನಾಟಿ, ಹೃದಯಭೇದಕಗಳಾಗಿ, ಯುವರಾಣಾ ಕುಂಭನ ತಲೆಯ ಮೇಲೆ ಏಕಕಾಲಕ್ಕೆ ಸಹಸ್ರ ಸಿಡಿಲುಗಳು ಬಿದ್ದಂತೆ ಯಾತನೆಯನ್ನುಂಟುಮಾಡಿದುವು. ಮೈಮೇಲಿನ ಕೂದಲುಗಳು ನೆಟ್ಟಗೆದ್ದು ನಿಂತುವು. ದೇಹದ ರಕ್ತವೆಲ್ಲವೂ ಏಕಕಾಲಕ್ಕೆ ತಲೆಗೇರಿದಂತಾಗಿ-ಎದೆಗೆ ಅಸಂಖ್ಯ ಶೂಲಗಳಿಂದ ತಿವಿದಂತೆ ಯಾತನೆಯಾಯಿತು. ಆಗ ಆ ಕೋಪದ ಭರದಲ್ಲಿ,—"ಎಲೆ ದುಷ್ಟೆ! ಗಂಡನ ಮನೆಯಲ್ಲಿ ಏಕಾಕಿನಿಯಾಗಿದ್ದೇನೆಂಬ ಲಜ್ಜೆ-ಅಂಜಿಕೆಗಳು ಲೇಶಮಾತ್ರವೂ ಇಲ್ಲದೆ, ಇವಳು ಈ ಮಧ್ಯರಾತ್ರೆಯಲ್ಲಿ ಯಾರನ್ನು 'ಪ್ರಾಣಮನೋಹರಾ-ಹೃದಯೇಶ್ವರಾ-ಮನೋವಲ್ಲಭಾ' ಎಂದು ಸಂಬೋಧಿಸುತ್ತಿರುವಳು! ಇದನ್ನು ಪರೀಕ್ಷಿಸುವೆನು" ಎಂದುಕೊಂಡು ಬಾಗಿಲಿನ ಬಳಿಗೆ ಹೋದನು. ದಾಸಿಯರು ಹೋಗುವಾಗ ಸುಮ್ಮನೆ ಮುಂದಕ್ಕೆ ಹಾಕಿಕೊಂಡು ಹೋಗಿದ್ದ ಬಾಗಿಲನ್ನು ಮುಚ್ಚಬೇಕೆಂಬ ಅರಿವು ಕೂಡ ಮೀರಾಬಾಯಿಗೆ ಬಂದಿರಲಿಲ್ಲ ಬಾಗಿಲು ತೆಗೆದಿದ್ದುದನ್ನು

ಕಂಡು, ಕುಂಭನು ಕೈಯಲ್ಲಿ ಕತ್ತಿಯನ್ನು ಹಿಡಿದುಕೊಂಡು ನೇರವಾಗಿ ನುಗ್ಗಿದನು. ಅಲ್ಲಿನ ದೃಶ್ಯವು ಅವನನ್ನು ಸ್ತಂಭೀಭೂತನನ್ನಾಗಿ ಮಾಡಿತು. ಮೀರಾಬಾಯಿಯು ಒಂದು ಕೈಯಲ್ಲಿ ತಂಬೂರಿಯನ್ನೂ ಮತ್ತೊಂದು ಕೈಯಲ್ಲಿ ಚಿಟ್ಟಿಗೆಯನ್ನೂ ಹಿಡಿದುಕೊಂಡು ಕಾಲಿಗೆ ಗೆಜ್ಜೆಗಳನ್ನು ಕಟ್ಟಿಕೊಂಡು ನಿಂತಿದ್ದಾಳೆ. ಎದುರಿಗೆ ಬಗೆಬಗೆಯಿಂದ ಅಲಂಕೃತವಾಗಿದ್ದ ಶ್ರೀಕೃಷ್ಣ ವಿಗ್ರಹವಿದೆ! ಅರೆದೆರೆದ ಕಣ್ಣುಗಳಿಂದ ಆ ವಿಗ್ರಹದ ಕಡೆಗೆ ನೋಡುತ್ತಾ,-ಆನಂದಬಾಷ್ಪವು ಸುರಿದು ಕೆನ್ನೆಗಳೂ ಹೃದಯಪ್ರದೇಶವೂ ನೆನೆದು ಹೋಗುತ್ತಿರಲು-ರೋಮಾಂಚನಗಳುಂಟಾಗುತ್ತಿರಲು ಆಕೆಯು ಉಚ್ಚಸ್ವರದಿಂದ ತನ್ನ ಜೀವಿತೇಶ್ವರನಾದ ಶ್ರೀಕೃಷ್ಣಸ್ವಾಮಿಯನ್ನು ಪ್ರಾರ್ಥಿಸುತ್ತಿದ್ದುದನ್ನು ಆತನು ಕಂಡನು.

ಕಾಮಾಂಧನಾಗಿ ತನ್ನ ಪತ್ನಿಯಲ್ಲಿ ಕಾಮಾಗ್ನಿಗೆ ಶಾಂತತೆಯನ್ನು ಪಡೆಯಬೇಕೆಂದು ಕಳ್ಳತನದಿಂದ ಬಂದ ರಾಣಾನಿಗೆ ಆಕೆಯು ಭಾವಸಾಮ್ರಾಜ್ಯದ ಸಿಂಹಾಸನದ ಮೇಲೆ ಕುಳಿತು ನಿಷ್ಕಲಂಕ ಭಕ್ತಿಭರದಿಂದ ಹೇಳಿಕೊಳ್ಳುತ್ತಿದ್ದ ಆ ಭಾವಗೀತೆಗಳ ಅರ್ಥವಾದರೂ ಹೇಗೆ ತಲೆಗೇರಬಲ್ಲುವು? ಅವಳು, ತನ್ನ (ರಾಣಾನ) ಕುಲವನ್ನೂ ಮಾನವನ್ನೂ ರಾಜ್ಯವನ್ನೂ ಜೀವಿತವನ್ನೂ ತನ್ನ (ಮೀರಾಬಾಯಿಯ) ಕಳಂಕ ಚರಿತ್ರೆಯಿಂದ ಭ್ರಷ್ಟಗೊಳಿಸಿದಳೆಂದೇ ಅವನ ಭಾವನೆಯಾಯಿತು. ಒಡನೆ ನೇರವಾಗಿ ನಡೆದು, ಆಕೆಯನ್ನು ಸಮೀಪಿಸಿ,-"ಎಲೇ ಕುಲಕಲಂಕಿನಿ, ಭ್ರಷ್ಟೆ, ನೀಚಳೆ, ಇದೇನು ನಿನ್ನೀ ಚರ್ಯೆಗಳು? ಕಾಲಿಗೆ ಕಟ್ಟಿರುವ ಗೆಜ್ಜೆಗಳೇನು? ಈ ಕುಣಿತವೇನು! ನಾನಾರು—ನನ್ನನ್ನು ತಂದವರಾರು—ನಾನೆಲ್ಲಿದ್ದೇನೆ ಎಂಬ ಪ್ರಜ್ಞೆಯು ನಿನಗಿದೆಯೇ?" ಎಂದು ನಿಷ್ಠುರತೆಯಿಂದ ಪ್ರಶ್ನೆ ಮಾಡಿದನು. ತನ್ನ ಪ್ರಾಣಮನೋಹರ ಮೂರ್ತಿಯನ್ನು ನೋಡಿಕೊಂಡು ಹಾಡಿಕೊಳ್ಳುತ್ತಾ ಅಂತರ್ಮುಖಳಂತಿದ್ದ ಮೀರಾಬಾಯಿಯು, ಅಕಸ್ಮಾತ್ತಾಗಿ ಕೇಳಿದ ಆ ಮಾತುಗಳ ಗದ್ದಲದಿಂದ ಬಹಿರ್ಮುಖಳಾಗಿ ಹಿಂದಿರುಗಿದಳು. ನೋಡಿದರೆ, ತನ್ನ ಪತಿ! ಒಡನೆ ಪಾದಾಭಿವಾದನ ಮಾಡಿದಳು. ರಾಣಾನು ರೋಷಾಕ್ರಾಂತನಾಗಿದ್ದಾನೆ. ಕೈಯಲ್ಲಿ ಹಿಡಿದ ಕತ್ತಿಯನ್ನು ಝಳಪಿಸುತ್ತಿದ್ದಾನೆ. ಕೋಪಾಧಿಕ್ಯತೆಯಿಂದ ಕೈಕಾಲುಗಳೂ ತುಟಿಯೂ ನಡುಗುತ್ತಿವೆ, "ಇದೇನು ಭ್ರಷ್ಟೆ, ನೀಚಳೆ, ಇದೇನು?" ಎಂದು ಪುನಃ ಪುನಃ ಗದ್ದರಿಸಿದನು.

ಅಕಸ್ಮಾತ್ತಾಗಿ ಪ್ರಾಪ್ತವಾದ ಆ ಸ್ಥಿತಿಗಾಗಿ ಮೀರಾಬಾಯಿಯು ಬೆದರಲಿಲ್ಲ. ಸಮಾಧಾನದಿಂದಲೇ—"ಮಹಾರಾಣಾರವರು ಶಾಂತರಾಗಬೇಕು.-ಮತ್ತಾರ ಸಂಗಡ ನನಗೆ ಸರಸ ಸಲ್ಲಾಪಗಳು ಬೇಕು-ನನ್ನ ಹೃದಯೇಶ್ವರನೊಂದಿಗಲ್ಲದೆ! ಆತನ ಪ್ರೀತಿಗಾಗಿಯೇ ನೃತ್ಯ ಗೀತಗಳು" ಎನ್ನುತ್ತಿದ್ದಳು. ಅಷ್ಟರಲ್ಲಿ ರಾಣಾನು ಜಡೆದು—"ಭ್ರಷ್ಟೆ, ಕುಲಕಲಂಕಿನಿ ನಿನ್ನನ್ನು ಮಾವಾರಕ್ಕೆ ತಂದ ನಾನು ಇಲ್ಲೇ ಇರುತ್ತಿರುವಲ್ಲಿ ನಿನ್ನಾ ಹೃದಯೇಶ್ವರನು ಮತ್ತಾವನವನು?" ಎಂದು ಕಣ್ಣುಗಳಲ್ಲಿ ಕಿಡಿಗಳನ್ನು ದುರಿಸುವವನಂತೆ-ಕಟಕಟನೆ ಹಲ್ಕಡಿಯುತ್ತಾ, ಕೈಯಲ್ಲಿದ್ದ ಆ ತೀಕ್ಷ್ಣ ಕೃಪಾಣವನ್ನು ಝುಳಪಿಸಿ ಮತ್ತೆ ಮತ್ತೆ ಅದನ್ನೂ ಆಕೆಯನ್ನೂ ದಿಟ್ಟಿಸುತ್ತಾ ಆ ಸಾಧ್ವಿಯನ್ನು ನುಂಗಿಬಿಡುವವನಂತೆ ನೋಡತೊಡಗಿದನು ಆಗಲಾ ಭಕ್ತಶ್ರೇಷ್ಠಳು, ಆ ನೋಟಕ್ಕಾಗಲಿ-ಹರಿತವಾದ ಕತ್ತಿಯ ಮೊನೆಗಾಗಲೀ-ನಿಷ್ಠುರವಾಗ್ಧಾರೆಗಳಿಗಾಗಲೀ ಬೆದರದೆ ಕೇವಲ ಶಾಂತಭಾವದಿಂದಲೇ—"ರಾಣಾರವರು ಶಾಂತರಾಗಬೇಕು. ತಾವು ಮೀರಾಬಾಯಿಯನ್ನು ಮಾವಾರಕ್ಕೆ ತಂದವರು ನಿಜ. ಮೀರೆಯ ರಕ್ತಮಾಂಸಮಯವಾದ ಈ ದೇಹಕ್ಕೆ ತಾವು ಒಡೆಯರೆಂಬುದಕ್ಕೆ ಸಂಶಯವಿಲ್ಲ! ಆದುದರಿಂದಲೇ ಹಡೆದ ತಂದೆತಾಯಿಗಳನ್ನು ಬಿಟ್ಟು ತಮ್ಮನ್ನು ನಂಬಿ ಬಂದ ಮೀರೆಯ ದೇಹವನ್ನು ಸಾಧ್ಯವಿದ್ದಷ್ಟು ಪರಿಯಿಂದ ನಿಕೃಷ್ಟವಾಗಿ ಕಂಡು, ಅವಮಾನಗೊಳಿಸಲು ತಮಗೆ ಸ್ವಾತಂತ್ರ್ಯವುಂಟಾಯಿತು. ಆದರೆ ಮೀರಾಬಾಯಿಯ ಆತ್ಮಕ್ಕೆ ಈ ಮಾನಾವಮಾನಗಳ ಗಣನೆಯಿಲ್ಲ! ಅವಳ ಹೃದಯೇಶನು ಮಾವಾರಾಧಿಪತಿಯು ಮಾತ್ರವಲ್ಲ! ಆತನು ಭೂವಲಯಕ್ಕೇ ಅಧಿಪತಿಯಾದ-ಇಗೋ ಇಲ್ಲಿರುವ ಶ್ರೀಕೃಷ್ಣಸ್ವಾಮಿಯು! ಮೀರಾಬಾಯಿಯ ಅಂತರಾತ್ಮವು ಜಗದೀಶ್ವರನಾದ ಈ ಕೃಷ್ಣಮೂರ್ತಿಯೊಂದಿಗೆ ಲಗ್ನವಾಗಿದೆ. ಆ ಹೃದಯೇಶ್ವರನ ಪ್ರೀತಿಗೋಸ್ಕರವಾಗಿಯೇ ಮೀರೆಯು ಗೀತೆಗಳನ್ನು ಹಾಡುವಳು. ನರ್ತನ ಮಾಡುವಳು. ಇದರಿಂದ ತಮ್ಮ ಕುಲಶೀಲಗಳ ಮರ್ಯಾದೆಯು ಕಳಂಕಿತವಾಗಿರುವುದಾದರೆ, ಈ ದೇಹವನ್ನು ಕತ್ತರಿಸಿ ಕೆಡಹಲು ತಮಗೆ ಸ್ವಾತಂತ್ರ್ಯವುಂಟು. ತಮ್ಮ ಕೈಕತ್ತಿಗೆ ಎದುರಿಲ್ಲ!" ಎಂದು ಧೈರ್ಯವಾಗಿ ಹೇಳಿದಳು.

ಮೀರಾಬಾಯಿಯು ಈ ಮಾತುಗಳು ರಾಜನನ್ನು ಆಶ್ಚರ್ಯಮಗ್ನನನ್ನಾಗಿ ಮಾಡಿದುವು. ಇನ್ನೂ ಹದಿನಾರು ಹದಿನೆಂಟು ವರ್ಷಗಳ ದಿವ್ಯ ಯೌವನದಲ್ಲಿ ಪ್ರಾಪಂಚಿಕ ಆಸೆ ಅಭಿಮಾನಗಳನ್ನು ಬಿಟ್ಟು-ದೇಹಮನೋಬುದ್ಧಿಗಳು ದೇವರಿಗೆ ಸೂರೆ ಹೋದವೋ ಎಂಬಷ್ಟುಮಟ್ಟಿನ ಪ್ರಾಪಂಚಿಕ ನಿರಭಿಮಾನವನ್ನು ಆತನು ಕಂಡುದು ಇದೇ ಮೊದಲು! ಮನುಷ್ಯ ಪ್ರಾಣಿಯಲ್ಲಿ ಕಾಮಮೂಲವಾದ ಪ್ರೇಮವಲ್ಲದೆ-ಪವಿತ್ರಪ್ರೇಮವು ಇರುವುದೂ ಸಾಧ್ಯವೆಂಬುದು ಆತನಿಗೆ ಈ ದಿನ ತಿಳಿಯಿತು ಮಹಾರಸಿಕನಾಗಿ-ರಸಿಕ ಕವಿತಾ ಪ್ರೌಢಿಮೆಯುಳ್ಳವನಾಗಿದ್ದ ಯುವರಾಜನು, ಕವಿತೆಯಲ್ಲಿ ಕೇವಲ ಶೃಂಗಾರಕ್ಕೆ ಮಾತ್ರವಲ್ಲದೆ, ಪವಿತ್ರ ಪ್ರೇಮಕ್ಕೂ ಸ್ಥಳವುಂಟೆಂಬುದನ್ನು ಈ ದಿನ ಕಂಡನು. ಅವಳು ನಿಷ್ಕಲ್ಮಷ ಚರಿತ್ರಳೆಂಬುದೂ ಅವಳಲ್ಲಿ ನಿಷ್ಕಾರಣವಾಗಿ ಸಂಶಯಪಡುವುದು ದೋಷಕ್ಕೆ ಕಾರಣವೆಂಬುದೂ ಮನವರಿಕೆಯಾಯಿತು. ಆದರೂ ಅವುಗಳಲ್ಲೊಂದನ್ನೂ ಬಾಯಿ ಬಿಟ್ಟು ಹೇಳದೆ, ಗಂಟು ಬಿದ್ದ ಹುಬ್ಬುಗಳೂ-ಹಿರಿದ ಕತ್ತಿಯೂ, ಹಾಗೆಯೇ ಇರಲು— "ರಾಜಗೃಹದಲ್ಲಿ, ಹೀಗೆ ಹೊತ್ತು ಗೊತ್ತೆನ್ನದೆ ನಾಟ್ಯಗೀತಾದಿಗಳು ನಡೆವುದು ಸಲ್ಲದು ಇದು ಮೇಳದ ಮನೆಯಲ್ಲ—ಇನ್ನು ಮುಂದೆ ನಿನ್ನಾ ಹೃದಯೇಶನ ಪೂಜೆಪುರಸ್ಕಾರಗಳು ಅರಮನೆಯ ಪ್ರಾಕಾರದ ಸಮೀಪದಲ್ಲಿರುವ ದೇವಸ್ಥಾನದಲ್ಲಿ ನಡೆಯಬಹುದು! ಮಾನುಷ ಪತಿಗಾಗಿ ಅಪೇಕ್ಷೆಪಡದ ನಿನಗೆ ಪತಿಗೃಹದಿಂದ ಆಗಬೇಕಾದುದಾದರೂ ಏನು?" ಎಂದು ರೋಷಭರದಲ್ಲಿ ನುಡಿದು ಒಡನೆ ಅಲ್ಲಿಂದ ಹೊರಟು ನಡೆದನು



## ಅಧ್ಯಾಯ ೫　　　　　　　　"ಕಪಟಸಾಧು"

ಪರಮೇಶ್ವರನು ಅವಾಙ್ಮಾನಸಗೋಚರನು.—ಎಂದರೆ ಮಾತುಗಳಿಂದ ವರ್ಣಿಸಲೂ, ಮನಸ್ಸಿನಿಂದ ಆತನ ಸ್ವರೂಪವೆಂಥದೆಂದು ನಿರ್ಧರಿಸಿ ತಿಳಿಯಲೂ ಸಾಧ್ಯನಲ್ಲದವನು. ಹಾಗೆ ವಾಕ್ಕಿಗೂ ಮನಸ್ಸಿಗೂ ಸಾಧ್ಯನಲ್ಲದ ಪರಮಾತ್ಮನ ಸಾನ್ನಿಧ್ಯವನ್ನು ಸೇರಬೇಕೆಂದು ಪ್ರಯತ್ನ ಮಾಡುವ ಹಲವು ಮಾರ್ಗಗಳೇ ಪ್ರಪಂಚದ ಹಲವು ಮತಗಳೆಂಬುವು! ಪ್ರತಿಯೊಂದು ಮತದ

ವರೂ ಆ ಮಾರ್ಗವನ್ನು ಸಾಧಿಸಲು, ನಾದ ರೂಪ ಕ್ರಿಯೆಗಳೆಂಬ ಮೂರು ಸಾಧನಗಳನ್ನು ಉಪಯೋಗಿಸುವರು. ಆದರೆ ಆ ಜಗದೀಶನು ನಾದ-ಬಿಂದು-ಕಲಾತೀತನಲ್ಲವೆ! ಶಬ್ದವು ಆತನನ್ನು ಹೊಗಳಲಾರದು, ಚಿತ್ರವು ಆತನನ್ನು ಚಿತ್ರಿಸಲಾರದು, ಶಬ್ದ ಮತ್ತು ಚಿತ್ರಗಳಿಂದ ವ್ಯಕ್ತವಾಗುವ ಕಲೆಯು ಆತನನ್ನು ಸಮೀಪಿಸಲಾರದು. ಆತನು ಇವುಗಳ ವ್ಯಾಪ್ತಿಗೆ ಮೀರಿರುವನು. ಆದರೂ ಮಕ್ಕಳು ಕೈಗೆ ಸಿಕ್ಕಿದುದನ್ನು ಲಕ್ಷ್ಯಮಾಡದೆ, ಸಿಕ್ಕದೆ ದೂರವಿರುವ ಆಟದ ವಸ್ತು-ತಿಂಡಿತೀರ್ಥಗಳನ್ನು ಪಡೆವದರಲ್ಲೇ ಹೆಚ್ಚು ಅಪೇಕ್ಷೆಯನ್ನು ತೋರಿಸುತ್ತಿರುವಂತೆ, ಮಾನವಸ್ವಭಾವವಾದರೂ ಲಭ್ಯವಾಗದುದನ್ನು ಲಭ್ಯಮಾಡಿಕೊಳ್ಳಬೇಕೆಂಬ ಅಪೇಕ್ಷೆಯನ್ನೇ ಎಲ್ಲೆಡೆ ಯಲ್ಲೂ ಪ್ರದರ್ಶಿಸುತ್ತಿದೆ. ತಾನು ಇದ್ದ ಸ್ಥಿತಿಯಲ್ಲೇ ತಾಟಸ್ಥ್ಯಭಾವ ವನ್ನು ವಹಿಸಿ ಸ್ಥಾಣುವಿನಂತೆ ಸುಮ್ಮನಿರದೆ, ಯಾವನು ಲಭ್ಯವಾಗದಿರುವ ವಸ್ತುಗಳನ್ನೂ ಪಡೆಯಬೇಕೆಂಬ ಪ್ರಯತ್ನದಲ್ಲಿ ತೊಡಗಿ, ಸದಾ ಮುಂದು ಮುಂದಕ್ಕೆ ಹೋಗುತ್ತಿರುವನೋ ಅವನ ಚೇತನವು ಜಾಗ್ರದವಸ್ಥೆಯಲ್ಲಿರುವು ದನ್ನಬಹುದು. ಹಾಗೆ ಪ್ರಯತ್ನಿಸಿ ಮುಂದುವರಿವವರಲ್ಲ ಅಲ್ಪಮತಿಗಳಾದ ಕೆಲವರು ನಾಲ್ಕೆಂಟು ಕಾಸುವೀಸಗಳನ್ನಾಗಲೀ-ಚೋಟುಗೇಣು ಭೂಮಿ ಯನ್ನಾಗಲೀ, ಎರಡು ಗುಂಜಿತೂಕ ಬಂಗಾರವನ್ನಾಗಲೀ ಅಥವ ಒಂದು ಹೆಣ್ಣನ್ನಾಗಲೀ ಗಳಿಸುವಲ್ಲಿ ತಮ್ಮ ಚೇತನದ ಅಮೋಘ ಶಕ್ತಿಯನ್ನು ಉಪ ಯೋಗಿಸಿ, ಅತ್ಯಂತ ಚಟುವಟಿಕೆಯಾಗಿರುವಂತೆ ಕಂಡುಬರುವರು. ಬುದ್ಧಿ ಶಾಲಿಗಳಾದರೋ ಚೈತನ್ಯದ ಅಮೌಲ್ಯ ಶಕ್ತಿಯನ್ನು, ಮಣ್ಣು ಹೆಂಟೆಯನ್ನು ಗಳಿಸುವ ಕಾರ್ಯದಲ್ಲಿ ಕಳೆಯಲಾಶಿಸುವದಿಲ್ಲ, ಅದನ್ನು ಲೋಕೇಶನಾದ ಪ್ರಭುವೆರ್ಯನನ್ನು ಸಾಧಿಸಿಕೊಳ್ಳಲು ವಿನಿಯೋಗಿಸುವರು —ಲೋಕಸೇವೆ ಗಾಗಿಯೂ-ಲೋಕಸಂಗ್ರಹಣ ಕಾರ್ಯಕ್ಕಾಗಿಯೂ ವಿನಿಯೋಗಿಸುವರು.— ಜನ್ಮಸಾರ್ಥಕ್ಯಕ್ಕಾಗಿ ಉಪಯೋಗ ಮಾಡಿಕೊಳ್ಳುವರು. ಶಬ್ದ-ಚಿತ್ರ-ಕಲೆ ಗಳು ಆ ಜಗತ್ಪತಿಯನ್ನು ಸಮೀಪಿಸಲಾರವಾದರೂ, ಮಾನವನ ಮನಸ್ಸು ಆತನಲ್ಲಿಗೇರಲು ಅವುಗಳಲ್ಲದೆ ಬೇರ ಸಾಧನವಿಲ್ಲ. ನಾದ ಬಿಂದು ಕಲೆಗಳನ್ನು ಆಧಾರ ಮಾಡಿಕೊಂಡೇ, ಮಾನವನ ಮನಸ್ಸು, ಏಣಿಯ ಮೆಟ್ಟಿಲುಗಳನ್ನಾ ಶ್ರಯಿಸಿ ಉನ್ನತ ಸ್ಥಳಕ್ಕೇರುವಂತೆ, ಆ ಜಗತ್ಪಿತನ ಸಮೀಪವನ್ನು ಸೇರಲು

ಏರತೊಡಗಬೇಕು. ಆದುದರಿಂದಲೇ ಪೂರ್ವಿಕ ಮಹನೀಯರು ಪ್ರತಿಯೊಂದು ಕಲೆಗೂ ಪರಮಪುರುಷನನ್ನೇ ಧ್ಯೇಯವನ್ನಾಗಿಟ್ಟಿರುವರು. ಸಂಗೀತ ಸಾಹಿತ್ಯ-ಕವಿತೆ ಕಲೆ ಮುಂತಾದ ಎಲ್ಲಕ್ಕೂ, ಭಾರತೀಯ ದೃಷ್ಟಿಯಲ್ಲಿ ಧ್ಯೇಯವು ಪರಮಾತ್ಮನೇ! ಆಧುನಿಕ ರೀತ್ಯಾ ಇವುಗಳೆಲ್ಲವೂ ಧನದೇವತೆಗೆ ಮಾರುಹೋಗಿವೆ ಒಂದೊಂದಕ್ಕೂ ಬೆಲೆಯು ನಿಷ್ಕರ್ಷಿಸಲ್ಪಡುತ್ತಿದೆ. ಜ್ಞಾನವೂ ಬೆಲೆಗೆ ನಿಂತಿದೆ-ಮತ್ತು ಮಾನವನು ಜ್ಞಾನಕ್ಕೆ ತನ್ನ ಸ್ವಾಮ್ಯ (Patent) ವನ್ನು ಸ್ಥಾಪಿಸಿಕೊಳ್ಳುತ್ತಿದ್ದಾನೆ. ಭಗವಂತನಿಂದ ಸೃಷ್ಟವಾಗಿರುವ ಒಂದು ಎಲೆ-ಒಂದು ಹಣ್ಣು, ಒಂದು ಚಿಕ್ಕ ಪ್ರಾಣಿ ಅಥವ ಒಂದು ರಾಗಿಯ-ಬತ್ತದ ಕಾಳು ಇವಕ್ಕೆ ಇಷ್ಟೇ ಬೆಲೆ ಎಂದು ಹೇಗೆ ನಿರ್ಧರಿಸುವುದು? ಅವಕ್ಕೆ ಬೆಲೆ ಏನು? ಹೇಗೆ? ಆದರೆ ಲೌಕಿಕವು ಸುಲಲಿತವಾಗಿ ಸಾಗುವುದಕ್ಕಾಗಿ, ಅವುಗಳಿಗೆ ಬೆಲೆಯು ಏರ್ಪಟ್ಟಿರುವುದು ಸಹಜವೆಂಬೋಣ! ಆದರೆ ಜ್ಞಾನಕ್ಕೂ ಬೆಲೆ ಕಟ್ಟುವುದೆಂದರೆ ಅರ್ಥವೇನು? ಅದು ಯಾರ ಸ್ವತ್ತು? * ಸದ್ಯಃಕಾಲದಲ್ಲಿ ಮಾನವನ ದೃಷ್ಟಿಯು ಅಧೋಮುಖವಾಗಿರುವುದರಿಂದ ನಮ್ಮ ಪೂರ್ವಿಕರು ಸಂಗೀತ ಸಾಹಿತ್ಯಗಳ-ಕಲೆಕವಿತೆಗಳ ವಿಷಯದಲ್ಲಿ ಇಟ್ಟುಕೊಂಡಿದ್ದ ಅಮೌಲ್ಯ ಧ್ಯೇಯಗಳು ತಲೆಕೆಳಗಾಗಿ ನಾವು ಅಧೋಗತಿಗಿಳಿದಿದ್ದೇವೆ ಪುನಃ ಎಂದಿಗೆ, ಪಾಶ್ಚಾತ್ಯ ಸಂಸರ್ಗದಿಂದ ನಮ್ಮಲ್ಲಿ ಬಂದು ನೆಲೆಸಿರುವ ಈ ವ್ಯಾಪಾರ ಭಾವನೆಯು ನಾಶವಾಗಿ ಜ್ಞಾನಕ್ಕೆ ಬೆಲೆ ಕಟ್ಟುವ (ವೇದವಿಕ್ರಯ ಮಾಡುವ) † ಈ ಬ್ರಹ್ಮಘಾತಕತನವು ನಮ್ಮಿಂದ ದೂರವಾಗುವುದೋ ಅಂದಿಗೆ ನಾವೂ ಮೇಲಕ್ಕೇಳತೊಡಗುವೆವು.—

---

* ಈ ಪವಿತ್ರ ಧ್ಯೇಯವನ್ನು ಅನುಸರಿಸಿಯೇ, ಜಗತ್ಪ್ರಸಿದ್ಧ ವಿಜ್ಞಾನ ಶಾಸ್ತ್ರವೇತ್ತರಾದ ಬಂಗಾಳದ ಮಾನನೀಯ ಜಗದೀಶ ಚಂದ್ರಬೋಸ್ ಬಾಬೂಗಳವರು ತಾವು ನಡೆಯಿಸಿರುವ ಅಮೌಲ್ಯ ವೈಜ್ಞಾನಿಕ ಶೋಧಗಳಿಗೂ-ರಚಿಸಿರುವ ಅದ್ವಿತೀಯ ಯಂತ್ರಗಳಿಗೂ ಸ್ವಾಮ್ಯ (Patent) ವನ್ನು ಸ್ಥಾಪಿಸಿಕೊಳ್ಳಲಿಲ್ಲ. ಪ್ರಪಂಚದ ಯಾವ ದೇಶದವರಾದರೂ ತಮ್ಮ (Temple of turth) "ಟೆಂಪಲ್ ಆಫ್ ಟ್ರೂತ್" ಎಂಬ ವಿಜ್ಞಾನ ಶಾಸ್ತ್ರ ಶೋಧನಾಲಯದಲ್ಲಿ ಉಚಿತವಾಗಿ ಜ್ಞಾನ ಭಿಕ್ಷೆಯನ್ನು ಪಡೆಯಬಹುದೆಂದು ಜಗತ್ತಿಗೇ ಸಾರಿರುವರು. ಧನ್ಯ ಭಾರತ ಮಾತೆ !

† ಪಙ್ಕ್ತಿ ಭೇದೀ ಪೃಥಕ್ಪಾಕೀ ನಿತ್ಯಂ ಬ್ರಾಹ್ಮಣನಿಂದಕಃ ||
ಆದೇಶೀ ವೇದವಿಕ್ರೇತಾ ಪಂಚೈತೇ ಬ್ರಹ್ಮಘಾತಕಾಃ ||

ನಮ್ಮ ಕಥಾನಾಯಿಕೆಯಲ್ಲಿ ಪ್ರಕಟವಾದ ಕವಿತೆಯೂ ಸಂಗೀತವೂ ಪರಮಪುರುಷನಿಗೆ ಸಮರ್ಪಿತವಾದುವು. ಜಗತ್ತನ್ನೇ ಆವರಿಸುವ ಆ ವಿಶ್ವ ಪ್ರೇಮ ರಸವನ್ನು ಧರಿಸಿದ್ದ ಮೀರಾಬಾಯಿಯು ದೇಹಪಾತ್ರೆಯು ಅಂತಃಪುರದ ಆ ನಿರ್ಬಂಧಕ್ಕೆ ಒಳಪಟ್ಟು ಆ ನಾಲ್ಕು ಗೋಡೆಗಳ ಆವರಣದಲ್ಲಡಗಿ ಎಷ್ಟು ದಿನಗಳನ್ನು ಕಳೆದೀತು? ಪೂರ್ವಾರ್ಧಾಧ್ಯಾಯದ ಅಂತ್ಯಭಾಗದಲ್ಲಿ ಕಂಡಂತೆ ರಾಣಾನಿಂದ ಆಜ್ಞೆ ಪ್ರಸಾದ-ಅಲ್ಲಲ್ಲ-ಲೋಕೋದ್ಧಾರಕ್ಕಾಗಿ ಕಠಿಣ ವಚನಗಳ ಮೂಲಕ ಆತನಿಂದ ಪ್ರಾರ್ಥಿತಳಾದ ಮೀರಾಬಾಯಿಯು ಮುಂದೆ ಆ ರಾಜ ಗೃಹವನ್ನು ಬಿಟ್ಟು ಪೂಜೆ ಪ್ರಾರ್ಥನೆ ಭಜನೆಗಳಿಗೆ ಆ ದೇವಾಲಯಕ್ಕೆ ಹೋಗ ತೊಡಗಿದಳು. ತನ್ನ ಹೃದಯೇಶ್ವರನಾದ ಶ್ರೀಕೃಷ್ಣನ ಆ ಮನೋಹರ ಮೂರ್ತಿಯನ್ನು ಅಲ್ಲೇ ಸ್ಥಾಪಿಸಿ ಎಂದಿನಂತೆ ಪೂಜೆ ಸ್ತೋತ್ರ ಪ್ರಾರ್ಥನೆ ಗಳಿಂದ ಸೇವಿಸಸಾಗಿದಳು. ಸುಮಧುರ ಕಂಠಧ್ವನಿಯಿಂದ ಭಗವಂತನ ಗುಣಮಹಿಮೆಗಳನ್ನು ಕೀರ್ತಿಸುತ್ತಿದ್ದ, ಲೋಕಮೋಹಕ ಸೌಂದರ್ಯಶಾಲಿನಿ ಯಾದ ಮೀರಾಬಾಯಿಯ ಗಾನವೈಭವವು ಸಕಲ ಜನಗಳನ್ನೂ ಮುಗ್ಧರ ನ್ನಾಗಿ ಮಾಡಿತು. ದಿನದಿನಕ್ಕೆ ಆಕೆಯ ನಿಷ್ಕಲಂಕ ಭಕ್ತಿಪಾರವಶ್ಯತೆಯ-ಗಾನಸೌಂದರ್ಯದ-ಕವಿತಾಲಾಲಿತ್ಯದ-ನಿಷ್ಕಲ್ಮಷ ಚಾರಿತ್ರ್ಯದ ಕಥೆಗಳು ದೇಶದೇಶಗಳಲ್ಲಿ ಬಣ್ಣಿಸಲ್ಪಡತೊಡಗಿದುವು ಆಕೆಯ ದರ್ಶನ ಮಾಡುವು ದೊಂದು ಸುಕೃತ ವಿಶೇಷ, ಕರ್ಣರಸಾಯನವಾದ ಆಕೆಯ ಮಧುರತರ ಗೀತೆಗಳನ್ನು ಕೇಳುವುದೊಂದು ಸೌಭಾಗ್ಯ ಎಂದು ಭಾವಿಸಿ ಹತ್ತಿರದ ದೂರದ ಭಕ್ತಭಾಗವತಜನರೂ ಸಾಧುಗಳೂ ತತ್ವಜ್ಞಾನಿಗಳೂ ಸ್ತ್ರೀಪುರುಷರೆಂಬ ಭೇದವಿಲ್ಲದೆ ಯಾತ್ರೆಗೋ ಎಂಬಂತೆ ಆಕೆಯಿದ್ದ ಆ ದೇವಾಲಯಕ್ಕೆ ಬರಲಾ ರಂಭಿಸಿದರು. ಆಕೆಯಿಂದ ರಚಿತವಾದ ಆ ಕೀರ್ತನಾರತ್ನಗಳನ್ನು ತಮ್ಮ ತಮ್ಮ ಯೋಗ್ಯತಾನುಸಾರ ಸಂಗ್ರಹಿಸಿಕೊಂಡು, ಭಕ್ತಿಸುಧಾ ರಸವನ್ನೂ ತಮ್ಮ ಪಾತ್ರಾನುಸಾರ ತುಂಬಿಕೊಂಡು, ಭಗವದ್ಭಕ್ತಿ ಸುಧಾಶರಧಿಯಾದ ಆ ದಿವ್ಯ ಮೂರ್ತಿಯನ್ನು ಬಿಡಲಾರದೆ ಬಿಟ್ಟು ತೆರಳುತ್ತಿರುವರು. ದೇಶದಲ್ಲಿ ಎಲ್ಲೆಲ್ಲೂ ಆ ಪುಣ್ಯಾತ್ಮಳಿಂದ ರಚಿತವಾದ ಭಕ್ತಿಪರ ಗೀತೆಗಳೇ ತುಂಬಿದುವು. ಬಡವ ಬಲ್ಲಿದ-ಭಿಕ್ಷುಕ ಭೂಪತಿ-ಬ್ರಾಹ್ಮಣ ಭೂಭುಜ ಎಂಬ ಭೇದವಿಲ್ಲದೆ ಸಕಲರೂ ಆ ಗೀತಾರತ್ನಗಳಿಂದ ತಮ್ಮ ಕಂಠಗಳನ್ನು ಅಲಂಕರಿಸಿಕೊಳ್ಳ

ತೊಡಗಿದರು. ಮೀರಾಬಾಯಿಯ ನಾಮಮಂತ್ರವು ಜನಜನಿತವಾಯಿತು-ಮನೆಯಮಾತಾಯಿತು.

ಕಸ್ತೂರಿಯ ಪರಿಮಳವು ವಾಯುವಿನ ಮೂಲಕ ಎಲ್ಲಾ ಸ್ಥಳಗಳನ್ನೂ ವ್ಯಾಪಿಸುವಂತೆ ಭಗವಂತನ ಮಹಿಮೆಯೂ ಭಕ್ತರ ಮೂಲಕವೇ ಜಗತ್ತಿನಲ್ಲಿ ಪ್ರಸಾರವಾಗುವುದು. ಉಷ್ಣತೆಯ ವ್ಯಾಪ್ತಿಯಿಲ್ಲದೆ ವಾಯುವಿಗೆ ಹೇಗೆ ಚಲನೆಯುಂಟಾಗಲಾರದೋ ಹಾಗೆಯೇ ಭಕ್ತರಿಗೂ ಕಷ್ಟತಾಪತ್ರಯಗಳೂ, ದುಃಖದುಸ್ಥಿತಿಗಳೂ, ದಾರಿದ್ರ್ಯದೈನ್ಯತೆಗಳೂ, ಅವಮಾನ ಅಪನಿಂದೆಗಳೂ ಉಂಟಾಗಿ ಅವರ ಚೇತನಕ್ಕೆ ತಳಮಳವುಂಟಾಗದಿದ್ದರೆ ಭಗವಂತನ ಮಹಿಮೆಯು ಅವರ ಮೂಲಕ ಪ್ರಕಟವಾಗಲರಿಯದು! ಜೀವನಲ್ಲಿ ಪ್ರಕೃತಿಯ ಸಂಬಂಧದಿಂದ ವ್ಯಾಪಿಸಿ ಹೆಪ್ಪುಗಟ್ಟಿಕೊಂಡಿರುವ ಕಾಮಕ್ರೋಧಾದಿಗಳೆಂಬ-ಈಷಣತ್ರಯಗಳೆಂಬ-ಸ್ವಾರ್ಥತೆಯೆಂಬ-ಅಭಿಮಾನ ಅಹಂಕಾರಗಳೆಂಬ ತುಪ್ಪವನ್ನು ಕರಗಿಸಿ, ಅವನ ಸ್ಥಿತಿಗೆ ಎಡೆಯಾಗಿರುವ, ದೇಹಪಾತ್ರೆಯಲ್ಲಿ ಭಕ್ತಿ ಜ್ಞಾನ ವೈರಾಗ್ಯಗಳ ಜ್ಯೋತಿಯನ್ನು ಪ್ರಕಾಶಮಾನವಾಗಿ ಉರಿಸಲು ಈ ಉಷ್ಣತೆಯು ಬೇಕೇಬೇಕು. ಅದೇ ಅಭಿವೃದ್ಧಿ ಸಾಧನವು ಆದರೆ ಜಳ್ಳಿದೆಯ ಕೆಲವರು ಪ್ರಾರಂಭದಲ್ಲೊದಗುವ ಅಲ್ಪ ಸ್ವಲ್ಪ ಶಾಖಕ್ಕೇ-ಕಷ್ಟನಷ್ಟಗಳಿಗೇ ಬೆದರಿ, ಕಾತರರಾಗಿ ಈ ಉನ್ನತಿಯ ಮಾರ್ಗವನ್ನು ಅಷ್ಟಕ್ಕೇ ಬಿಟ್ಟುಬಿಡುವರು. ಮತ್ತೆ ಕೆಲವರು, ಹೆಚ್ಚು ಕಷ್ಟಸಂಕಟಗಳಿಗೆ ಒಳಪಡಲು ಇಷ್ಟವಿಲ್ಲದೆ-ಧೈರ್ಯವಿಲ್ಲದೆ, ಸುಲಭ ಜೀವನದಲ್ಲೇ ಮಹತ್ಫಲವು ಲಭ್ಯವಾಗಬೇಕೆಂದು ಕೋರುವರು. ಆದರೆ ಸಮುದ್ರದ ಮೇಲ್ಭಾಗದಲ್ಲೇ ಹುಡುಕುತ್ತಿರುವವರಿಗೆ ಶಂಖ ಕಪ್ಪೆಯಚಿಪ್ಪುಗಳೂ ಗುಂಡುಕಲ್ಲುಗಳೂ ಮಾತ್ರವೇ ದೊರೆವುವೆಂಬುದನ್ನೂ ಬಹು ಬೆಲೆಯ ಮುತ್ತು ರತ್ನಗಳು ಬೇಕಾಗಿದ್ದರೆ ಬಿರುಗಾಳಿಗೂ ಘೋರವಾದ ಅಲೆಗಳಿಗೂ ಭಯಂಕರ ಜಲಜಂತುಗಳಿಗೂ ಬೆದರದೆ ಸಮುದ್ರದಲ್ಲಿ ಮುಳುಗಿ ಆಳಕ್ಕೆ ಹೋಗಬೇಕೆಂಬುದನ್ನೂ ಅವರು ಅರಿಯರು! ಹಾಗೆಯೇ ಭಕ್ತನು ಯಾವ ಬಗೆಯ ಮಹತ್ಕಷ್ಟಗಳಿಗೂ ಬೆದರದೆ ಈ ಕ್ಷೀರಶರಧಿಯ ಮಧ್ಯಭಾಗಕ್ಕೆ ನಡೆವರಲ್ಲದೆ ಶ್ರೀವಿಷ್ಣುಮೂರ್ತಿಯ ದರ್ಶನಭಾಗ್ಯವು ಲಭಿಸದು. ಶ್ರೀವಿಷ್ಣುಮೂರ್ತಿಯ ದರ್ಶನಕ್ಕೆ ಯೋಗ್ಯಪಾತ್ರಳಾದುದರಿಂದ ನಮ್ಮ ಕಥಾನಾಯಿಕೆಯಾದರೂ ಒಂದಾದ ಮೇಲೊಂದರಂತೆ ಅಂತಹ ಮಹತ್ಕಷ್ಟಗಳಿಗೆ ಒಳಪಡುತ್ತಿರುವಳು.—

ರಾಣಾನ ಆಜ್ಞೆಯಂತೆ ಅರಮನೆಯ ಪ್ರಾಕಾರದ ಬಳಿಯಿದ್ದ ದೇವ ಸ್ಥಾನಕ್ಕೆ ಬಂದು ತನ್ನ ಇಷ್ಟದೈವದ ಸೇವೆಯನ್ನು ಮಾಡಿಕೊಂಡಿದ್ದ ಮೀರಾ ಬಾಯಿಯ ಬಳಿಗೆ, ಅನೇಕ ಮಂದಿ ಭಕ್ತಾದಿಗಳೂ-ಸಾಧು ಜನಗಳೂ ಆಕರ್ಷಿ ಸಲ್ಪಡುತ್ತಿದ್ದರೆಂಬ ಅಂಶವು ತಿಳಿದಿದೆಯಲ್ಲವೆ! ಕೆಲದಿನಗಳಲ್ಲೇ ಒಂದು ದುರಂತ ಪ್ರಸಂಗವು ನಡೆಯಿತು. ಆಗ್ಗೆ ಮೊಗಲ್ ಸಾಮ್ರಾಟ್ ಅಕ್ಬರನು ಭಾರ ತೀಯ ರಾಜ್ಯಸೂತ್ರ ಚಾಲಕನಾಗಿ ದೆಹಲಿಯಲ್ಲಿ ಪದಾರೂಢನಾಗಿದ್ದನು. ಆತನು ರಸಜ್ಞನಾಗಿ, ಕವಿಗಳಿಗೂ ವಿದ್ವಾಂಸರಿಗೂ ಕಲಾಕುಶಲರಿಗೂ ಆಶ್ರಯಿಸೂತನಾಗಿದ್ದನು. ಅದರಲ್ಲೂ ಸಂಗೀತ-ಚಿತ್ರಕಲೆಗಳಲ್ಲಿ ಆತನ ಪ್ರೇಮಾಭಿಮಾನಗಳು ಹೆಚ್ಚು ಆತನ ಆಸ್ಥಾನದಲ್ಲಿ ತಾನಸೇನನೆಂಬ ಸುಪ್ರ ಸಿದ್ಧ ಹೈಂದವ ಗಾಯಕನು ಚಕ್ರವರ್ತಿಯ ಪ್ರೇಮಾದರಗಳಿಗೆ ಹೆಚ್ಚು ಪಾತ್ರನಾಗಿದ್ದನು ಪ್ರಬಲ ಭಾರತ ಸಾಮ್ರಾಟನ ಆಸ್ಥಾನದಲ್ಲಿ ಮಹಾ ಪಂಡಿತನೆನಿಸಿದ್ದ ಆ ಗಾಯಕ ಸಾರ್ವಭೌಮನೂ ಮಂಜುಭಾಷಿಣಿಯಾದ-ಭಕ್ತಾಗ್ರೇಸರಳಾದ ನಮ್ಮ ಕಥಾನಾಯಿಕೆಯ ಗೀತರತ್ನಗಳಿಗೆ ಮನಸೋತು, ಪ್ರಯತ್ನದಿಂದ ಅವುಗಳಲ್ಲಿ ಕೆಲವನ್ನು ಸಂಪಾದಿಸಿ, ತನ್ನ ಪಾಂಡಿತ್ಯ ವೈಭವ ದಿಂದ ಅವುಗಳ ಸೌಂದರ್ಯವನ್ನು ನೂರು ಮಡಿಯಾಗಿ ಹೆಚ್ಚಿಸಿ ಪಾಡುತ್ತಿ ರಲು, ಚಕ್ರವರ್ತಿ ಮೊದಲು ಜೋಪದಾರನವರೆಗಿನ ಸಮಸ್ತರೂ ಚಿತ್ರಪ್ರತಿ ಮೆಗಳಂತೆ ಕುಳಿತು ಅವುಗಳನ್ನು ಕೇಳುವರು, ಪುಳಕಗೊಳ್ಳುವರು-ರೋ ಮಾಂಚಿತರಾಗುವರು. ಭಕ್ತಿಯ ಕಡಲಲ್ಲಿ ಓಲಾಡುವರು. ಆ ಗೀತಗಳು ಪಾಂಡಿತ್ಯದ ಪ್ರಸಾದವಾಗಿ ಮಂಡೆಯನ್ನೊಡೆದುಕೊಂಡು ಹುಟ್ಟಿದುವುಗಳಾ ಗಿರದೆ, ಪ್ರೇಮರಸದೊಂದಿಗೆ ಮಿಶ್ರವಾಗಿ ಹೃದಯಮೂಲದಿಂದ ಬಂದುವುಗ ಳಾದುದರಿಂದ ಅವುಗಳನ್ನು ಕೇಳಿದವರೆಲ್ಲರೂ ಆಕರ್ಷಿತರಾಗಿ ತನ್ಮಯರಾ ಗುವರು. ಚಕ್ರವರ್ತಿಯಾದರೇನು, ಆತನೂ ಮೂಲತಃ ಮನುಷ್ಯನು ತಾನೆ! ಆತನೂ ಆಕರ್ಷಿತನಾದನು. ಅವುಗಳ ಸರಳತೆ ಶುದ್ಧತೆಗಳಿಗೆ ಚಕ್ರವರ್ತಿ ಯ ಹೃದಯವೂ ಸೂರೆಹೋಯಿತು. ತಾನು ಕೊಚ್ಚಿ ಹೋಗುತ್ತಿದ್ದ ಪ್ರೇಮ ಪ್ರವಾಹದ ಉಗಮಸ್ಥಾನವಾವುದೆಂಬುದನ್ನು ತಿಳಿಯಬೇಕೆಂಬ ಅಪೇಕ್ಷೆಯು ಆತನಲ್ಲಿ ಹೇಗೋ ಅಂಕುರಿಸಿ ದಿನದಿನಕ್ಕೆ ಬೆಳೆಯಸಾಗಿತು. ಆ ಅಪೇಕ್ಷೆ ಯನ್ನು ತೀರಿಸಿಕೊಳ್ಳದಿರುವುದು ಅಸಾಧ್ಯವೆನ್ನಿಸಿತು. ತನ್ನ ಮನವ

ಆ ಅಪೇಕ್ಷೆಯನ್ನು ಆಪ್ತಮಿತ್ರನಾದ ತಾನಸೇನನೊಂದಿಗೆ ಹೇಳಲು-ಆತನು ಅವುಗಳನ್ನು ಹಾಡಿದ ಪುಣ್ಯಶಾಲಿನಿಯು ಉದಯಪುರದ ಕುಂಭರಾಣಾನ ಪತ್ನಿಯೆಂದೂ ಮಹಾ ಭಕ್ತಿ ವೈರಾಗ್ಯ ಸಂಪನ್ನಳೆಂದೂ ಹೇಳಿದನು. ಆವರೆಗೆ ಉದಯಪುರವು ಮೊಗಲ್ ಸಾಮ್ರಾಜ್ಯದ ಅಧೀನಕ್ಕೆ ಬಂದಿರವಿಲ್ಲವಾದುದ ರಿಂದಲೂ, ತಾನು ತನ್ನ ಸಹಜರೂಪಿನಲ್ಲೇ ಹೋಗಿ ರಾಜಪತ್ನಿಯಾದ ಆ ಸಾಧ್ವಿಯನ್ನು ನೋಡಲಪೇಕ್ಷಿಸುವುದು ಲೌಕಿಕಕ್ಕೆ ಅಸಂಗತ ವ್ಯಾಪಾರ ವೆಂಬುದೂ ಆತನ ಗಮನಕ್ಕೆ ಬಂದಿತು. ಏನು ಮಾಡಬೇಕೆಂದು ಇಬ್ಬರೂ ಬಹು ದೂರ ಯೋಚಿಸಿದರು. ಕೊನೆಗೆ ತಾನಸೇನನಿಗೆ ಆಕೆಯ ದೇವಾಲ ಯಕ್ಕೆ ಮಿಕ್ಕ ಸಾಮಾನ್ಯರ ಪ್ರವೇಶಕ್ಕೆ ಆತಂಕವಿದ್ದರೂ ಬೈರಾಗಿಗಳ ಮತ್ತು ಸಾಧುಗಳ-ಭಕ್ತರ ಪ್ರವೇಶಕ್ಕೆ ಆತಂಕವಿಲ್ಲವೆಂಬ ಸಂಗತಿಯು ಜ್ಞಾಪಕಕ್ಕೆ ಬಂದಿತು. ಆ ವಿಷಯವನ್ನೇ ಚಕ್ರವರ್ತಿಗೆ ತಿಳಿಸಿದನು. ಚಕ್ರವರ್ತಿ-ತಾನಸೇನರು ಒಡನೆ ತ್ರಿಪುಂಡ್ರಗಳು ತುಲಸೀಮಾಲೆಗಳು ಕಾವಿಯ ವಸ್ತ್ರಗಳು ಇವುಗಳಿಂದ ಅಲಂಕೃತರಾಗಿ ಸಾಧುವೇಷವನ್ನು ಧರಿಸಿ ಯಾರಿಗೂ ತಿಳಿಯ ದಂತೆ ದೆಹಲಿ ರಾಜಧಾನಿಯಿಂದ ಮೀರತ್ ನಗರವನ್ನು ಕುರಿತು ಪ್ರಯಾಣ ಮಾಡಿದರು.

ಇಂದು ಭಕ್ತಾಗ್ರಗಣ್ಯಳಾದ ಮೀರಾಬಾಯಿಯು ಎಂದಿನಂತೆ ತನ್ನಾ ಹೃದಯೇಶ್ವರನ ಕೀರ್ತನಾ ಪ್ರಸಂಗದಲ್ಲಿ ತೊಡಗಿದ್ದಾಳೆ ಊರೂರುಗಳಿಂದ-ದೇಶದೇಶಗಳಿಂದ-ಸ್ಥಳಪರಸ್ಥಳಗಳಿಂದ ಬಂದ ಸಾಧುಸಂತರ ತಂಡವು ಗುಂಪು ಗುಂಪಾಗಿ ಕುಳಿತು ಭಕ್ತ್ಯುದ್ರೇಕದಿಂದ ಆಕೆಯ ಹೃದಯ ಪಾತ್ರೆಯಿಂದ ಹೊರಟು ಉಕ್ಕಿ ಉಕ್ಕಿ ಹರಿಯುತ್ತಿದ್ದ ಗಾನರಸಾಮೃತವನ್ನು ಕಿವಿಗಳಿಂದ ಕುಡಿದು ಪಾನಮಾಡುತ್ತಾ ಆ ಆನಂದದಿಂದ ಸೊಕ್ಕಿ ವೈಮರೆಯುತ್ತಿದ್ದಾರೆ. ಮೀರಾಬಾಯಿಯಂತೆಯೇ ಎಲ್ಲರ ಕಣ್ಣುಗಳಿಂದಲೂ ಆನಂದಬಾಷ್ಪವು ಸುರಿ ಯುತ್ತಿದೆ ಆ ಭಕ್ತರ ತಂಡವು ಪ್ರೇಮಪ್ರವಾಹದಲ್ಲಿ ತೇಲಾಡುತ್ತಾ ಒಡಲು ತಿಳಿಯದೆ-ತಮ್ಮನ್ನೇ ತಾವು ಮರೆತು ತನ್ಮಯರಾಗಿ ಕುಳಿತುಬಿಟ್ಟಿದ್ದಾರೆ.

ಆ ಗುಂಪಿನಲ್ಲೇ ವೇಷಧಾರಿಗಳಾಗಿ ಬಂದಿದ್ದ ಅಕ್ಬರನೂ ತಾನಸೇನನೂ ಇದ್ದರು. ಕೀರ್ತನೆಯು ಮುಗಿದು ಪರಸ್ಥಳೀಕರೆಲ್ಲರೂ ತಮ್ಮ ತಮ್ಮ ನಿವಾ ಸಗಳಿಗೆ ಸಾಗಿದ್ದರು. ಕೆಲವರು ಅಲ್ಲಲ್ಲೆ ತಂಗಿದ್ದರು. ಆಗ ಶ್ರಾಂತಳಾಗಿ-

ಕುಳಿತು ವಿಶ್ರಾಮ ಹೊಂದುತ್ತಿದ್ದ ಮೀರಾಬಾಯಿಯ ಸಮೀಪಕ್ಕೆ ಆ ವೇಷ ಧಾರಿ ಸಾಧುಗಳಿಬ್ಬರೂ ಬಂದು ದೀರ್ಘದಂಡ ನಮಸ್ಕಾರ ಮಾಡಿದರು. ಆ ಭಕ್ತೋತ್ತಮಳು, ಅವರ ನಮಸ್ಕಾರವು ಶ್ರೀಕೃಷ್ಣನಿಗೆ ಅರ್ಪಿತವಾಗಲೆಂಬ ಭಾವನೆಯಿಂದ 'ಶ್ರೀಕೃಷ್ಣ-ಮುರಲೀಧರ' ಎಂದು ನಾಮೋಚ್ಚಾರ ಮಾಡಿದಳು. ಮತ್ತು ಆ ಸಾಧು ವೇಷದ ವ್ಯಕ್ತಿಗಳನ್ನು ಕುರಿತು, "ಅಣ್ಣಗಳಿರ ನನಗೇಕೆ ವಂದಿಸುವಿರಿ! ಶ್ರೀಕೃಷ್ಣಸ್ವಾಮಿಯು ನಮಸ್ಕಾರಕ್ಕೆ ಪಾತ್ರನು" ಎಂದಳು. ಆ ಮಾತಿಗೆ ಕಪಟಸಾಧುವಿನ ವೇಷದಿಂದಿದ್ದ ಚಕ್ರವರ್ತಿಯು "ಭಕ್ತೋತ್ತಮಳೇ ಭವಾಗ್ನಿಯಲ್ಲಿ ಬೆಂದು ತಲ್ಲಣಿಸುತ್ತಿರುವ ಈ ದೀನರಿಗೆ ಪರಮಾರ್ಥ ಸಾಧನದ ಮಾರ್ಗವನ್ನು ತೋರಿಸಿ ಉದ್ಧರಿಸುವ ಮಹಾನುಭಾವಳು ನೀನೇ ಎಂದು ನೆರೆನಂಬಿ ಬಂದಿದ್ದೇವೆ, ನಮಗೆ ಮಾರ್ಗದರ್ಶಕಳಾಗಿ ಕಾಪಾಡು" ಎಂದು ನುಡಿದನು. ಆ ಮಾತನ್ನು ಕೇಳಿದ ಮೀರಾಬಾಯಿಯು ಸಾವಕಾಶವಿಲ್ಲದೆ—"ನಿರಂತರ ಅನನ್ಯ ಭಗವದ್ಭಕ್ತಿಯೇ ಪರಮಾರ್ಥಸಾಧನವು. ಭಗವಂತನು ಭಕ್ತಪರಾಧೀನನು" ಎಂದು ಪ್ರತ್ಯುತ್ತರವಿತ್ತಳು. ಅದನ್ನೇ ಉಪದೇಶವೆಂದು ಭಾವಿಸಿ-ಗ್ರಹಿಸಿದ ಪಾದುಷಾನು, ಪುನಃ ಎದ್ದು ನಮಸ್ಕರಿಸಿ ತನ್ನಲ್ಲಿ ಮರೆಸಿ ಇಟ್ಟುಕೊಂಡಿದ್ದ ಅಮೌಲ್ಯ ರತ್ನಮಾಲೆಯೊಂದನ್ನು ಗುರುದಕ್ಷಿಣೆಯೆಂದು ಆಕೆಗೆ ಸಮರ್ಪಿಸಹೋದನು. ಅದನ್ನು ಕಂಡ ಮೀರಾಬಾಯಿಯು:—"ಇದೇನು? ವೈರಾಗಿಯಾದ ನಿನಗೆ ಅಪೂರ್ವವಾದ ಈ ಅಮೌಲ್ಯ ರತ್ನಹಾರವು ದೊರೆತ ಬಗೆಯಾವುದು?" ಎಂದು ಪ್ರಶ್ನಿಸಿದಳು. ಆಗಲಾ ಕಪಟ ಸಾಧುವು "ಮಹಾತ್ಮಳೇ ನಾನೊಂದು ರಾಜಾಸ್ಥಾನದಲ್ಲಿ ಒಂದಾನೊಂದು ಅಪೂರ್ವ ಕಾರ್ಯವನ್ನು ಮಾಡಿ ಪ್ರಭುವನ್ನು ಮೆಚ್ಚಿಸಿದುದರಿಂದ ಆತನು ತೃಪ್ತನಾಗಿ ನನಗೆ ಈ ಮಾಲೆಯನ್ನು ಕೊಟ್ಟನು. ಅದನ್ನು ಗುರುಸ್ವರೂಪಳಾದ ನೀನು ಕಾಣಿಕೆಯಾಗಿ ಸ್ವೀಕರಿಸಿದರೆ ನನಗೆ ಸಂತೋಷವಾಗುವುದು" ಎಂದನು. ಮಹಾ ವಿರಾಗಿಣಿಯೂ ನಿಸ್ಪೃಹಳೂ ಆದ ಮೀರಾಬಾಯಿಯು ಆ ರತ್ನಹಾರ ಬಂಗಾರ ವಜ್ರಾದಿಗಳಿಂದ ತನಗೆ ಆಗಬೇಕಾದುದು ಏನೂ ಇಲ್ಲವೆಂದೂ ಆ ಸಂಬಂಧವು ತನಗೆ ಬೇಡವೆಂದೂ, ತಿರಸ್ಕರಿಸಿದುದರಿಂದ ಆ ಕಪಟಸಾಧುವು ಆ ಮಾಲೆಯನ್ನು ಅಲ್ಲೇ ಇದ್ದ ಶ್ರೀಕೃಷ್ಣವಿಗ್ರಹದ ಕೊರಳಿನಲ್ಲಿ ಸಮರ್ಪಿಸಿ, ಪುನಃ ಮೀರಾಬಾಯಿಗೆ ವಂದಿಸಿ ಅಲ್ಲಿಂದ ತನ್ನ ಜೊತೆಯಲ್ಲಿದ್ದ ತಾನಸೇನನೊಂದಿಗೆ ಹೊರಟು ನಡೆದನು.

**ಅಧ್ಯಾಯ ೬ "ದ್ವಾರಕಾ-ಬೃಂದಾವನ"**

ಕಾಲಕರ್ಮಗಳ ವೈಪರೀತ್ಯದಿಂದ ಒಂದೊಂದು ವೇಳೆ ಉತ್ತಮಾಭಿಪ್ರಾಯದಿಂದ ಮಾಡಿದ ಕಾರ್ಯಗಳೇ ಪ್ರಳಯಕಾರಿಗಳಾಗಿ ಪರಿಣಮಿಸುವುವು. ಅಪರಿಚಿತರಾದ ಸಾಧುಗಳಿಬ್ಬರು, ಮೀರಾಬಾಯಿಯ ಕೃಷ್ಣವಿಗ್ರಹಕ್ಕೆ ಅಮೌಲ್ಯ ರತ್ನಹಾರವನ್ನು ಅರ್ಪಿಸಿ ಹೋದರೆಂಬ ವಾರ್ತೆಯು ಒಡನೆ ಮೀರತ್ ರಾಜಧಾನಿಯಲ್ಲೆಲ್ಲ ವ್ಯಾಪಿಸಿತು. ಹಾದಿಬೀದಿಗಳಲ್ಲಿ ಹರಡಿದ್ದ ಮಾತು ಅರಮನೆಯವರೆಗೂ ಹೋಯಿತು. ಕುಂಭರಾಣಾನೂ ಅವನ ತಾಯಿಯೂ ಆ ವಿಚಾರವೇನೆಂಬುದನ್ನು ತಿಳಿವ ವಿಷಯದಲ್ಲಿ ಹೆಚ್ಚು ಆಸಕ್ತರಾದರು. ದೇವಾಲಯದಿಂದ ಆ ಹಾರವನ್ನು ತರಿಸಿ ರತ್ನಪರೀಕ್ಷಕರಲ್ಲಿ ಅದರ ಮೌಲ್ಯವೇನಾಗಬಹುದೆಂದು ವಿಚಾರಿಸಿದರು. ವರ್ತಕರಲ್ಲಿ ಅನೇಕರು ನೆರೆದು, ತಾವು ಎಂದೂ ಕಂಡಿರದ ಆ ಅಮೌಲ್ಯ ರತ್ನಗಳನ್ನು ಕಂಡು ಅವುಗಳ ಬೆಲೆಯೆಷ್ಟಾಗಬಹುದೆಂಬುದನ್ನು ನಿರ್ಧರಿಸಲಾರದೆ ಅದು ಚಕ್ರವರ್ತಿಗಳಲ್ಲಿರಲು ಮಾತ್ರ ತಕ್ಕುದೆಂದರು. ಅಷ್ಟರಲ್ಲಿ ಅಲ್ಲಿಗೆ ಬಂದ ಒಬ್ಬ ರತ್ನವ್ಯಾಪಾರಿಯು ತಾನು ಅದೇ ರತ್ನಹಾರವನ್ನು ದೆಹಲಿಯ ಚಕ್ರವರ್ತಿ ಅಕ್ಬರ್ ಪಾದಷಹಾನಿಗೆ ಐವತ್ತು ಲಕ್ಷ ವರಹಾಗಳಿಗೆ ಮಾರಿದ್ದೆನೆಂದೂ ಅದು ಚಕ್ರವರ್ತಿಯದೇ ಎಂದೂ ನಿರ್ಧರವಾಗಿ ಹೇಳಿದನು. ಆ ಮಾತೂ ಒಡನೆ ಊರಲ್ಲೆಲ್ಲ ಹಬ್ಬಿತು. ಅದನ್ನು ಕೇಳಿದ ಜನರು, ನಿಜ ನಿಜ ಇರಬಹುದು. ಹೊಸದಾಗಿ ಬಂದಿದ್ದ ಸಾಧುಗಳಲ್ಲಿ ಒಬ್ಬನು ಭವ್ಯಾಕೃತಿಯುವನಿದ್ದನು, ಆತನೇ ಚಕ್ರವರ್ತಿಯಿರಬಹುದು'' ಎಂದುಕೊಂಡರು. ಆ ಸಾಧು ಜನರು "ತಮ್ಮ ರಾಣಿಯ ಭಕ್ತಿ-ವೈರಾಗ್ಯಗಳಿಗೆ ಮೆಚ್ಚಿ ಚಕ್ರವರ್ತಿಯೇ ಬಂದನೆಂಬ ಸಹಜಭಾವದಿಂದ ನುಡಿದರಲ್ಲದೆ, ಅದರಿಂದ ಏನು ಪರಿಣಾಮವಾಗುವುದೆಂದು ತಿಳಿಯದಾದರು ತನ್ನ ಪತ್ನಿಯು ತುರುಷ್ಕನಾದ ದೆಹಲಿಯ ಪಾದಷಹಾನ ದೃಷ್ಟಿಗೋಚರಳಾಗಿ, ಅವಳ ಪಾತಿವ್ರತ್ಯದ ಪಾವಿತ್ರ್ಯತೆಯು ಅವನಿಂದ ಕಳಂಕಿತವಾಯಿತೆಂಬುದು ರಾಣಾನ ಭಾವನೆಯಾಯಿತು. ಆ ವಿಷಯವನ್ನು ಯಾರು ಎತ್ತಿದರೂ ಅವನಿಗೆ ಸಹಸ್ರ ಚೇಳುಗಳು ಏಕಕಾಲದಲ್ಲಿ ಕಡಿದಂತೆ ಯಾತನೆಯಾಗಹತ್ತಿತು ಆ ಬಾಧೆಯನ್ನೂ ಅವಮಾನವನ್ನೂ ಸಹಿಸಲಾರದೆ, ರಾಣಾನು ಅವುಗಳಿಗೆಲ್ಲ ಮೂಲಕಾರಣಳಾದ ಅವಳನ್ನೇ ತೀರಿಸಿಬಿಟ್ಟರೆ, ಎಲ್ಲಾ ಕಷ್ಟಗಳೂ

ಪರಿಹಾರವಾಗುವುದೆಂದು ಬಗೆದು, ಅವಳಲ್ಲಿಗೆ ಬಂದು,—"ಎಲೌ ನಿನ್ನ ಇರುವಿಕೆಯು ನನಗೆ ಸಾಕುಸಾಕಾಯಿತು. ಇನ್ನು ಭರಿಸಲಾರೆನು. ತೆಗೆದುಕೋ, ಇದನ್ನು ಸೇವಿಸಿ ಇನ್ನು ನಿನ್ನ ಜೀವಿತವನ್ನು ಸಾಕುಮಾಡು" ಎಂದು ವಿಷಭರಿತವಾದ ಒಂದು ಬಂಗಾರದ ಬಟ್ಟಲನ್ನು ಆಕೆಗೆ ಕೊಟ್ಟನು.

ಮೀರಾಬಾಯಿಯು, ಕೇವಲ ಶ್ರದ್ಧಾಭಕ್ತಿಯುತಳಾಗಿ ಅದನ್ನು ತೆಗೆದುಕೊಂಡು, ಮರುಗದೆ ಕಂಗೆಡದೆ ಬೆದರದೆ, ಎಲ್ಲವೂ ಶ್ರೀಕೃಷ್ಣಮೂರ್ತಿಗೇ ಅರ್ಪಿತವಾಗಲೆಂದು ನುಡಿದು, ಅದನ್ನು ಎತ್ತಿ ಒಂದೇ ಸಾರಿಗೆ ಕುಡಿದುಬಿಟ್ಟಳು. ಆಹಾ. ಇದೇನದ್ಭುತವು! ಕಾಲಕೂಟ ವಿಷವನ್ನು ಕುಡಿದರೂ ಆ ಭಕ್ತೋತ್ತಮಳು ಕೊರಗದೆ ಮರುಗದೆ ಹಸನ್ಮುಖದಿಂದಲೇ ಇದ್ದು ಭಗವದ್ಭಕ್ತಿಯ ದಿವ್ಯ ಶಕ್ತಿಯನ್ನು ಪ್ರದರ್ಶಿಸುತ್ತಿರುವಂತೆ ಹರಿಗುಣಗಳನ್ನು ಗಾಯನ ಮಾಡತೊಡಗಿದಳು ಅದನ್ನು ಕಂಡು ರಾಣಾನು ಸ್ತಂಭಿತನಾದನು. ಘೋರ ವಿಷವನ್ನೂ ಅಮೃತವೋ ಎಂಬಂತೆ ಕುಡಿದು ದೃಢಗಾತ್ರಳಾಗಿ ಸಜೀವಿಯಾಗಿರುವ ಅವಳು ಮೀರಿದ ಮಾಯಗಾತಿ ಎಂದು ಭಾವಿಸಿ ರಾಣಾನು ಅವಳನ್ನು ಶಿರಚ್ಛೇದನ ಮಾಡಿಬಿಡಿರೆಂದು ಭಟರಿಗೆ ಆಜ್ಞಾಪಿಸಿದನು.

ಆದರೆ ಏನನ್ಯಾಯ! ನಿರಪರಾಧಿನಿಯಾದ ಆ ಸಾಧ್ವೀಮಣಿಯನ್ನು ಕೊಲ್ಲುವಂತಹ ಪರಮನೀಚನಾರು! ಆ ದುಷ್ಕಾರ್ಯವನ್ನು ಮಾಡಲಾರೆವೆಂದು ಕೊಲೆಗಡಿಗರೇ ಹೇಳಿಬಿಟ್ಟರು. ಆಗ ರಾಣಾನು—"ಎಲೌ ನೀಚಳೆ, ಅಪವಾದ ಅಪಕೀರ್ತಿಗಳಿಗೆಡೆಯಾದ ನಿನ್ನೀ ದೇಹವನ್ನು ಸೋಕಲು ನನ್ನ ಭಟರ ಕತ್ತಿಗಳೂ ಹೇಸುವುವು ಆದುದರಿಂದ ಆತ್ಮಹತ್ಯ ಮಾಡಿಕೊಂಡು, ಈ ದೇಹವನ್ನು ನೀಗಿಸು" ಎಂಬ ಆಜ್ಞೆಯನ್ನು ಕಳುಹಿಸಿದನು ಮೀರಾಬಾಯಿಯು ದೇವಾಲಯದಿಂದ ಮನೆಗೆ ಬರುತ್ತಿದ್ದಾಗ, ಆ ಆಜ್ಞಾ ಪತ್ರವನ್ನು ಒಬ್ಬ ಮಂತ್ರಿಯು ಆಕೆಯ ಕೈಗಿತ್ತನು. ಅದನ್ನು ಓದಿಕೊಂಡ ಆ ಸಾಧ್ವಿಯು ಲೇಶಮಾತ್ರವೂ ಬೆದರದೆ-ಅಳುಕದೆ, ತನ್ನ ಭರ್ತನ ದರ್ಶನವು ಕೊನೆಯ ಒಂದು ಸಾರಿಯಾದರೂ ಆಗಲು ಸಾಧ್ಯವುಂಟೇ ಎಂದು ಆತನನ್ನು ಕೇಳಿದಳು. ಮಂತ್ರಿಯು ಅದು ಸಾಧ್ಯವಾಗದೆಂದು ನುಡಿಯಲು, ಆಕೆಯು ನೇರವಾಗಿ ತನ್ನ ಮನೆಗೆ ಬಂದು, ಆ ದಿನ ಸಾಯಂಕಾಲದವರೆಗೆ ಭಗವದ್ಭಜನೆಯಲ್ಲೇ ಕಾಲಯಾಪನೆ ಮಾಡಿದಳು; ಮತ್ತು ಅಲ್ಲಿದ್ದ ಸೇವಕರಿಂದ—

"ಮೀರೆಯು ಭಗವದೀಯ ಆಜ್ಞೆಯನ್ನು ಅಕ್ಷರಶಃ ಪಾಲಿಸಿದಳು" ಎಂಬ ವರ್ತಮಾನವನ್ನು ಕಳುಹಿಸಿ, ಆ ರಾತ್ರಿಯೇ ತಾನು ಧರಿಸಿದ್ದ ದಿವ್ಯ ವಸ್ತ್ರಾಭರಣಗಳನ್ನೆಲ್ಲಾ ಕಳೆದಿಟ್ಟು, ಒಂದು ಸಾಮಾನ್ಯ ಸೀರೆಯನ್ನುಟ್ಟು, ಸುಮಂಗಲೆಯರಿಗೆ ಮಹಾಭರಣಗಳಾದ ಮಾಂಗಲ್ಯ ಅರಿಸಿನ ಕುಂಕುಮಾದಿಗಳಿಂದ ಒಪ್ಪುತ್ತಾ, ತನ್ನ ಹೃದಯೇಶ್ವರನಾದ ದೇವ ಮೂರ್ತಿಯನ್ನು ಸಂಗಡಲೇ ತೆಗೆದುಕೊಂಡು, ಅರಮನೆಯಿಂದ ಹೊರಬಿದ್ದು ನಡೆದಳು.

ಘೋರಾಂಧಕಾರದಲ್ಲಿ ಹೊರ ಹೊರಟ ಮೀರಾಬಾಯಿಯು ನೇರವಾಗಿ ನಡೆದು ಒಂದು ನದಿಯ ಸಮೀಪವನ್ನು ಸೇರಿದಳು. ರಾಜಾಜ್ಞಾಪಾಲನೆಗಾಗಿ ನದಿಯಲ್ಲಿ ಧುಮುಕಿ ಪ್ರಾಣ ಬಿಡಬೇಕೆಂದು ಬಗೆದು, ತುಂಬಿ ಹರಿಯುತ್ತಿದ್ದ ಆ ನದಿಯಲ್ಲಿ ಹಾರಿಕೊಂಡಳು. ಒಡನೆ ದೇಹದ ಮೇಲೆ ಸ್ಮೃತಿ ತಪ್ಪಿತು ಆ ಸ್ಥಿತಿಯಲ್ಲಿದ್ದಾಗ ಒಂದು ಅಪೂರ್ವ ತೇಜವು ಆಕೆಗೆ ದೃಷ್ಟಿಗೋಚರವಾಗಿ–"ಸಾಧ್ವೀ–ಮೀರೇ ಬೆದರದಿರು. ನಿನಗಿನ್ನೂ ಆಯುಃ ಪರಿಮಿತಿಯು ತೀರಲಿಲ್ಲ ಇನ್ನೂ ನಿನ್ನಿಂದ ಆಗಬೇಕಾದ ಕಾರ್ಯವು ಬಹಳವಿದೆ." ಎಂದಂತಾಯಿತು. ಆ ಮಾತುಗಳನ್ನು ಕೇಳಿ ಆಕೆಯು ಕಣ್ಣು ಬಿಟ್ಟು ನೋಡಲಾಗಿ, ತಾನು ನದೀ ತೀರದ ಮರಳ ರಾಶಿಯ ಮೇಲೆ ಇದ್ದಂತೆ ತಿಳಿಯಿತು. ತರುವಾಯ ತಾನು ಆಗಲೇ ಪ್ರಾಣತ್ಯಾಗ ಮಾಡುವುದು ಭಗವದಿಷ್ಟಕ್ಕೆ ಬರಲಿಲ್ಲವೆಂದು ತಿಳಿದು, ಅಲ್ಲಿಂದೆದ್ದು ಶ್ರೀ ಕೃಷ್ಣನ ಸಂಚಾರದಿಂದ ಪರಮಪವಿತ್ರವೆನಿಸಿದ್ದ ಬೃಂದಾವನದ ಪುಣ್ಯಕ್ಷೇತ್ರಕ್ಕೆ ಹೋಗಬೇಕೆಂದು ಸಂಕಲ್ಪಿಸಿ ಹೊರಟಳು. ದಾರಿಯಲ್ಲಿ ಸಿಕ್ಕಿದ ಗೋಪಾಲಕರನ್ನು ಕುರಿತು,—"ಅಣ್ಣಗಳಿರಾ, ಬೃಂದಾವನಕ್ಕೆ ದಾರಿ ಯಾವುದು?" ಎಂದು ಪ್ರಶ್ನಿಸಿದಳು ಆಕೆಯ ದಿವ್ಯ ಮಂಗಳ ವಿಗ್ರಹವನ್ನೂ ದಿವ್ಯ ತೇಜೋವಿರಾಜಮಾನವಾದ ಆಕೆಯ ಮುಖಕಮಲವನ್ನೂ ಕಂಡು, ಬಾಯಿಂದ ಹೊರಡುತ್ತಿದ್ದ ಭಗವನ್ನಾಮ ಸಂಕೀರ್ತನೆಯ ಸುಧಾಧಾರೆಯನ್ನೂ ಕೇಳಿ ಅವರು ಆಕರ್ಷಿತರಾಗಿ, ಆಕೆಗೆ ಹಾಲುಹಣ್ಣುಗಳನ್ನು ಸಮರ್ಪಿಸಿದರು. ಅವರಲ್ಲಿ ಕೆಲವರು. ಆಕೆಗೆ ದಾರಿಯನ್ನು ತೋರಿಸುತ್ತಾ ಮುಂದೆ ನಡೆದರು. ಮುಂದೆ ಮಾರ್ಗವು ಸಾಗಿದಂತೆಲ್ಲಾ, ಮೀರಾಬಾಯಿಯು ಬೃಂದಾವನಕ್ಕೆ ಹೊರಟಿದ್ದಾಳೆಂಬ ವರ್ತಮಾನವು ಎಲ್ಲಾ ಸ್ಥಳಗಳಲ್ಲೂ ವ್ಯಾಪಿಸಿ ನೂರಾರು ಮಂದಿ ಭಕ್ತಾದಿಗಳೂ–ಸಾಧುಸಂತರೂ ಒಂದು

ಸೇರತೊಡಗಿದರು. ಮೀರಾಬಾಯಿಯ ಭಕ್ತಪರಿವಾರವು ದಿನದಿನಕ್ಕೆ ಬೆಳೆಯುತ್ತಿತ್ತು ಆ ಸಾಧ್ವಿಯು ಅವರೆಲ್ಲರೊಂದಿಗೆ ಶ್ರೀಕೃಷ್ಣಸ್ವಾಮಿಯ ಪಾದಾರವಿಂದ ಮಕರಂದವನ್ನು ಪಾನಮಾಡುತ್ತಾ ಬೃಂದಾವನಕ್ಕೆ ನಡೆದಳು. ಯಾವ ಆ ಕ್ಷೇತ್ರರಾಜವು ಶ್ರೀಕೃಷ್ಣಸ್ವಾಮಿಯ ಬಾಲ್ಯದ ಆಟಪಾಟಗಳಿಂದ-ವೇಣುಗಾನದಿಂದ-ಗೋಪಿಯರೊಂದಿಗಾಡಿದ ಜಲಕ್ರೀಡೆ ರಾಸಕ್ರೀಡೆಗಳಿಂದ ಪಾವನವೆನಿಸಿ ಶೋಭಿಸುತ್ತಿರುವುದೋ ಅಲ್ಲಿ ಭಕ್ತಾಗ್ರಗಣ್ಯಳಾದ ಆ ಸಾಧ್ವೀಮಣಿಯು ತನ್ನ ದಿವ್ಯ ಮಂಜುಳಸ್ವರದಿಂದ-ಅವ್ಯಾಜಪ್ರೇಮಭಾವದಿಂದ ಮುರಾರಿಯನ್ನು ಧ್ಯಾನಿಸುತ್ತಿರುವಳು. ಬೃಂದಾವನ ಪ್ರಾಂತದ ಊರುವನ-ನದೀನದ-ಗಿರಿಗುಹೆಗಳಲ್ಲೆಲ್ಲ ಮೀರಾಬಾಯಿಯ ಕೀರ್ತನೆಗಳ ಅಲೌಕಿಕ ಮಾಧುರ್ಯವು ಪ್ರತಿಧ್ವನಿತವಾಗುತ್ತಿರುವುದು. ಆ ಕೀರ್ತನೆಗಳನ್ನು ಶ್ರವಣ ಮಾಡಿದವರ ಕಷ್ಟ ಕಾರ್ಪಣ್ಯಗಳು, ತೊಂದರೆ ತಾಪತ್ರಯಗಳು, ಮೋಹ-ಮದ-ಮಾತ್ಸರ್ಯಗಳು, ಬೇನೆ ಬೇಸರಿಕೆಗಳು ಎಲ್ಲವೂ ನಿರ್ನಾಮವಾಗುತ್ತಿರುವುವು. ಆಕೆಯ ದರ್ಶನ ಭಾಗ್ಯವನ್ನು ಸಂಪಾದಿಸುವುದೇ ಜನ್ಮದಲ್ಲೊಂದು ಮಹತ್ಕಾರ್ಯ ಸಾಧನೆಯೆಂದು ಭಾವಿಸಿ, ಅನೇಕಾನೇಕ ಮಂದಿ ಭಾವುಕರು ದೇಶದೇಶಗಳಿಂದಲೂ ಬಂದು ಬೃಂದಾವನದಲ್ಲಿ ಸೇರಿದರು.

ಆ ಬೃಂದಾವನ ಪ್ರಾಂತದಲ್ಲೇ ಜೀವಗೋಸಾಯಿ ಯೆಂಬೊಬ್ಬ ಮಹಾ ಕೃಷ್ಣ ಭಕ್ತನು ಇದ್ದಾನೆಂಬ ಸಂಗತಿಯು ಮೀರಾಬಾಯಿಗೆ ತಿಳಿಯಿತು. ಒಡನೆ ಆ ಸಾಧ್ವಿಯು ಆತನನ್ನು ದರ್ಶನ ಮಾಡಬೇಕೆಂದು ಹೊರಟಳು. ಆತನು ಜನ್ಮ ಸಾರ್ಥಕ್ಯಕ್ಕೆ ಕಾಮಿನೀ ಕಾಂಚನಗಳನ್ನು ತ್ಯಜಿಸುವುದು ಮಾತ್ರವಲ್ಲದೆ, ಅವುಗಳನ್ನು ಕಣ್ಣಿನಿಂದಲೂ ನೋಡದೆ ಸರ್ವದಾ ಭಗವಧ್ಯಾನ ಪರಾಯಣರಾಗಿರಬೇಕೆಂದು ತನ್ನ ಶಿಷ್ಯರಿಗೆ ಬೋಧಿಸಿ, ತಾನೂ ಸ್ತ್ರೀ ಮುಖವನ್ನು ದರ್ಶನ ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದನು. ಮೀರಾಬಾಯಿಗೆ ಆ ವೃತ್ತಾಂತವು ತಿಳಿಯಲು, ಆ ಸಾಧುಶೀಲಳು, "ಭಕ್ತವರಾ, ಲೋಕದಲ್ಲಿ ಶ್ರೀಕೃಷ್ಣಮೂರ್ತಿಯೊಬ್ಬನೇ ಪುರುಷನು; ಭಕ್ತರೆಲ್ಲರೂ, ಪತಿಯನ್ನು ಅನನ್ಯಭಕ್ತಿಯಿಂದ ಸೇವಿಸುವ ಪತ್ನಿಯರಂತೆ, ಆತನನ್ನು ಸೇವಿಸತಕ್ಕವರಾದುದರಿಂದ ಅವರು ಪುರುಷರಾಗಿದ್ದರೂ-ಸ್ತ್ರೀಯರಾಗಿದ್ದರೂ ಸ್ತ್ರೀಯರೇ ಎಂದು ನನ್ನ ಅಭಿಪ್ರಾಯವು. ಹೀಗೆ ಭಕ್ತರೆಲ್ಲರೂ ಸಮಾನರಾಗಿರುವಾಗ ನಾವು

ಪುರುಷರೆಂದು ಗರ್ವಿಸುವುದು ಹಾಸ್ಯಾಸ್ಪದವಲ್ಲವೆ! ನಿಮಗೆ ನಾವು ಪುರುಷರೆಂಬ ಅಹಂಭಾವವಿರುವುದಾದರೆ ನೀವು ಭಕ್ತರೆನಿಸಲಾರಿರಿ. ನೀವು ಹಾಗೆ ಭಕ್ತರೇ ಆಗಿರುವ ಪಕ್ಷದಲ್ಲಿ ಇತರ ಭಕ್ತರನ್ನು ಕಾಣುವ ವಿಷಯದಲ್ಲಿ ಅಭ್ಯಂತರವೇನಿದೆ?" ಎಂಬ ಸಂದೇಶವನ್ನು ಕಳುಹಿಸಿದಳು. ಆ ಮಾತನ್ನು ಕೇಳಿದೊಡನೆಯೇ ಜೀವಗೋಸಾಯಿಯು ಯುಕ್ತವೆಂದು ಭಾವಿಸಿ, ತನ್ನ ಪ್ರತಿಜ್ಞೆಯನ್ನು ಬಿಟ್ಟು ಹೊರಟು, ಆಕೆಯಿದ್ದೆಡೆಗೆ ಬಂದು, ಸಾಷ್ಟಾಂಗ ನಮಸ್ಕಾರ ಮಾಡಿ, ಆಕೆಯನ್ನು ತನ್ನ ಗುರುವೆಂದು ಭಾವಿಸಿದನು

ಮುಂದೆ ಭಕ್ತಿರಸಾಮೃತವನ್ನು ಸುರಿಸುತ್ತಿದ್ದ ಆಕೆಯ ಗೀತೆಗಳನ್ನು ಶ್ರವಣ ಮಾಡಲು ಮೀರಾಬಾಯಿಯ ಬಳಿಗೆ ಅನೇಕ ಮಂದಿ ಭಕ್ತಾದಿಗಳು ಬಂದು ಸೇರಿದರು. ಆಕೆಯ ಕೀರ್ತಿ ಪರಿಮಳವು ಅಖಂಡ-ಆದ್ಯಂತ ಭಾರತ ದೇಶದ ಮೂಲೆ ಮೂಲೆಗಳಲ್ಲೂ ವ್ಯಾಪಿಸಿತು ಉದಯಪುರದಲ್ಲಿ ಕೇಳುವುದೇನು! ರಾಣಾಕುಂಭನು ದೇವಾಸ್ಥಾನಕ್ಕೆ-ರಾಜಾಸ್ಥಾನಕ್ಕೆ-ವಿಹಾರದ ಉಪವನಕ್ಕೆ-ಬೇಟೆಗೆಂದು ಕಾಡಿಗೆ-ಕೆರೆ ಭಾವಿಗಳಿಗೆ ಹೀಗೆ ಎಲ್ಲಿಗೆ ಹೋದರೆ ಅಲ್ಲೆಲ್ಲ ಭಕ್ತರು, ಗಾಯಕರು, ನಟವಿಟರು, ಬೇಡರು, ವಿರಾಗಿಗಳು, ಸ್ತ್ರೀಯರು, ಹೆಚ್ಚೇನು ಸಮಸ್ತರೂ ಆಕೆಯಿಂದ ರಚಿತವಾದ ಗೀತಾರತ್ನಗಳನ್ನೇ ಕಂಠಾಭರಣವಾಗಿ ಅಲಂಕರಿಸಿಕೊಂಡು ಪಾಡುತ್ತಿದ್ದುದನ್ನೇ ಕೇಳುವನು. ಎಲ್ಲೆಲ್ಲಿಯೂ ಆಕೆಯ ನಿಷ್ಕಲ್ಮಷ ಚಾರಿತ್ರ್ಯವರ್ಣನೆಯೇ, ಎಲ್ಲೆಲ್ಲಿಯೂ ಆಕೆಯ ಸದ್ಗುಣ ಸಚ್ಚಾರಿತ್ರ್ಯಗಳ ಕೀರ್ತನೆಯೇ! ಅಹರ್ನಿಶಿ ಅವುಗಳನ್ನು ಕೇಳುತ್ತಿದ್ದ ರಾಣಾನಿಗೆ ತಾನು ಆ ಭಕ್ತಾಗ್ರಗಣ್ಯಳ ವಿಷಯದಲ್ಲಿ ಅಗಾಧ ಪಾಪ ಕಾರ್ಯ ಮಾಡಿದ್ದೇನೆಂಬ ಅರಿವು ಉಂಟಾಯಿತು ಆ ಸಾಧ್ವಿಗೆ ನಿಷ್ಕಾರಣವಾಗಿ ಮೇಲೆ ಮೇಲೆ ವಿಚಿತ್ರ ದುಃಖಗಳನ್ನುಂಟು ಮಾಡಿದುದಕ್ಕಾಗಿ ಮನಸ್ಸಿನಲ್ಲಿ ಅಸಹನೀಯ ವ್ಯಥೆಯಾಯಿತು ಒಡನೆ ಆಕೆಯ ಪಾದಗಳನ್ನು ಹಿಡಿದಾದರೂ ಕ್ಷಮಾಪಣೆ ಬೇಡಿ, ಪುನಃ ರಾಜಧಾನಿಗೆ ಕರೆತರಬೇಕೆಂದು ನಿರ್ಧರಿಸಿ, ಸಕಲ ರಾಜವೈಭವಗಳಿಂದಲೂ ಹೊರಟನು.

ಇಂದು ಶ್ರೀಕೃಷ್ಣ ಜನ್ಮಾಷ್ಟಮಿ. ಮೀರಾಬಾಯಿಯು ಬೃಂದಾವನದಿಂದ ದ್ವಾರಕೆಗೆ ಬಂದು ಅಲ್ಲಿಯ ಶ್ರೀಕೃಷ್ಣಮಂದಿರದಲ್ಲಿ ಕೀರ್ತನೆ ಮಾಡುತ್ತಿದ್ದಾಳೆ, ಅಸಂಖ್ಯ ಭಕ್ತ ಬೃಂದವು ನೆರೆದು, ಗಾನರಸಾ ಸುಧೆಯನ್ನು ಪಾನ ಮಾಡುತ್ತಾ

ಪರಮಾನಂದ ಪ್ರವಾಹದಲ್ಲಿ ತೇಲಿ ಹೋಗುತ್ತಿದ್ದಾರೆ. ಮೀರಾಬಾಯಿಯು ಮಂದಹಾಸವನ್ನು ಸೂಚಿಸುವ ಮುಖಾರವಿಂದ-ಶಾಂತಿಮಯ ದೃಷ್ಟಿಗಳಿಂದ ಸಕಲರನ್ನೂ ಆದರಿಸುತ್ತ ಭಗವತ್ಕೀರ್ತನಾ ಪ್ರಸಂಗದಲ್ಲಿ ತೊಡಗಿದ್ದಾಳೆ.

ದೂರದಲ್ಲಿ ಆನೆ ಕುದುರೆಗಳೂ ರಾಜಾರ್ಹವಾದ ಮೇನೆಗಳೂ ಬಿರುದು ಪತಾಕೆಗಳನ್ನು ಹಿಡಿದ ರಾಜಭಟರೂ ಕಾಣಿಸಿದರು. ಎಲ್ಲರೂ ಅದಕ್ಕೆ ಅರ್ಥವೇನೆಂದು ಕೌತುಕಗೊಂಡು ನೋಡುತ್ತಿರಲು ಉದಯಪುರದ ಧ್ವಜವು ಕಾಣಿಸಿತು. ಸ್ವಲ್ಪ ಹೊತ್ತಿನಲ್ಲೇ ರಾಣಾಕುಂಭನು ದೂರದಿಂದಲೇ ಮೇನೆಯಿಂದಿಳಿದು ಪಾದಚಾರಿಯಾಗಿ ನಡೆದು ಬರುತ್ತಿದ್ದುದನ್ನು ಮೀರಾಬಾಯಿಯು ಕಂಡಳು! ಎಲ್ಲರೂ ತಾಟಸ್ಥ್ಯಭಾವವನ್ನು ವಹಿಸಿ ಆಶ್ಚರ್ಯ-ಕೌತುಕಗಳಿಂದ ನೋಡುತ್ತಿರಲು, ರಾಜನು ನೇರವಾಗಿ ಬಂದು ಪ್ರಸಂಗಾಂಗಣವನ್ನು ಪ್ರವೇಶಿಸಿದನು. ಒಡನೆ ಮೀರಾಬಾಯಿಯು ಪತಿಪಾದಗಳಿಗೆ ನಮಸ್ಕರಿಸಿ, ಆತನ ಪಾದಧೂಳಿಯನ್ನು ಶಿರಸ್ಸಿನಲ್ಲಿ ಧಾರಣ ಮಾಡಿದಳು ರಾಣಾನು ತನ್ನ ಸಮಸ್ತ ಅಪರಾಧಗಳನ್ನೂ-ಲೋಪಗಳನ್ನೂ ಮರೆತು ಉದಯಪುರಕ್ಕೆ ದಯೆಮಾಡಿ, ತನ್ನ ಗೃಹವನ್ನು ಪವಿತ್ರಗೊಳಿಸಬೇಕೆಂದೂ ಭಜನೆ ಕೀರ್ತನೆಗಳನ್ನು ಅಲ್ಲೇ ಮನಸದಣಿಯೆ ಮಾಡಿಕೊಳ್ಳಬಹುದೆಂದೂ ಪ್ರಾರ್ಥಿಸಿದನು. ಆಕೆಯೂ ಒಪ್ಪಿದಳು. ಇಂತು ಪವಿತ್ರಪ್ರೇಮದಿಂದ ಒಂದಾದ ಸತಿಪತಿಗಳಿಬ್ಬರೂ, ಪುನಃ ಬೃಂದಾವನವನ್ನು ಸಂದರ್ಶಿಸಿ, ಸ್ವಾಮಿಯನ್ನು ಸೇವಿಸಿದರು. ತರುವಾಯ ರಾಣಾನು, ಮೀರಾಬಾಯಿಯನ್ನು ಪರಮಸಂತೋಷದಿಂದ ಕರೆದೊಯ್ದು, ಮಹದ್ವೈಭವದಿಂದ ನಗರಪ್ರವೇಶಗೊಳಿಸಿ ಆದರಿಸಿದನು. ಪಟ್ಟಣಿಗರ ಆನಂದಾಶ್ಚರ್ಯಗಳಿಗೆ ಮೇರೆಯಿಲ್ಲವಾಯಿತು!



## ಉ ಪ ಸಂ ಹಾ ರ

ಮುಂದೆ ಮೀರಾಬಾಯಿಯು, ತಾನು ಉದಯಪುರದ ಅರಮನೆಯ ಪ್ರಾಕಾರದ ಸಮೀಪದಲ್ಲಿ ಭಜನೆ ಮಾಡುತ್ತಿದ್ದ ದೇವಾಲಯದಲ್ಲೇ ಶ್ರೀಕೃಷ್ಣ ಮೂರ್ತಿಯ ವಿಗ್ರಹವೊಂದನ್ನು ಸ್ಥಾಪಿಸಿ, ಅನನ್ಯ ಭಕ್ತಿಭಾವಗಳಿಂದ ನಿರತ

ಶಂಕರನಾಗಿ ಸೇವಿಸತೊಡಗಿದಳು. ಈಗ, ಆಕೆಯು ಬೇಕಾದಾಗ ದೇವಸ್ಥಾನಕ್ಕಾಗಲೀ ಬೃಂದಾವನಕ್ಕಾಗಲೀ ದ್ವಾರಕೆಗಾಗಲೀ ಹೋಗಲು ಆಕ್ಷೇಪವಿಲ್ಲ. ಆಕೆಯೂ ರಾಜ್ಯಕ್ಕೆ ಬಾಧ್ಯಸ್ಥನಾದ ಸಂತತಿಯಿರಬೇಕಾದುದರ ಔಚಿತ್ಯವನ್ನರಿತು ರಾಣಾನ ಮನಸ್ಸನ್ನೊಪ್ಪಿಸಿ, ಆತನಿಗೆ ಬೇರೊಬ್ಬ ಅನುರೂಪ ರಾಜಪುತ್ರಿಯೊಂದಿಗೆ ವಿವಾಹ ಮಾಡಿಸಿದಳು. ಆ ನೂತನ ವಧುವು ತನ್ನ ಪತಿಯೊಂದಿಗೆ ಲೌಕಿಕವನ್ನು ಸಾಗಿಸುವುದನ್ನು ಕಂಡು ಅಲೌಕಿಕ ಸ್ತ್ರೀಶಿರೋಮಣಿಯಾದ ನಮ್ಮ ಮೀರಾಬಾಯಿಯು ಪರಮಸಂತುಷ್ಟಳಾದಳು.

ಹೀಗೆ ನಮ್ಮ ಕಥಾನಾಯಿಕೆಯು ಸಕಲರಿಂದಲೂ ಸನ್ಮಾನನೀಯಳಾಗಿ ಬಹು ಕಾಲ ಜೀವಿಸಿದ್ದು, ಭಗವದ್ಭಕ್ತಿ ಸಾಮ್ರಾಜ್ಯವನ್ನು ಲೋಕದಲ್ಲಿ ಸ್ಥಾಪಿಸಿದಳು. ಒಂದಾನೊಂದು ಸಾರಿ ಬೃಂದಾವನದಲ್ಲಿ ಸ್ವಾಮಿಸಾನ್ನಿಧ್ಯದಲ್ಲಿ ಧ್ಯಾನಮಗ್ನಳಾಗಿದ್ದಾಗ, ತಾನು ಚಿಕ್ಕಂದಿನಿಂದಲೂ ಮದುಮಗನೆಂದು ಇಟ್ಟುಕೊಂಡು ಸೇವಿಸುತ್ತಿದ್ದ ಶ್ರೀಕೃಷ್ಣವಿಗ್ರಹದಲ್ಲೇ ಐಕ್ಯಳಾಗಿ ಮುಕ್ತಿಸಾಮ್ರಾಜ್ಯವನ್ನೂ ಸೂರೆಗೊಂಡಳೆಂದು ಐತಿಹ್ಯವಿದೆ.

ಸಾಧುವರ್ಯಳಾದ ಯಾವ ಮೀರಾಬಾಯಿಯು ಭಗವದ್ಭಕ್ತಿಯೊಂದಿಗೆ ರಾಜ್ಯೈಶ್ವರ್ಯ ಭೋಗಭಾಗ್ಯಗಳಲ್ಲೊಂದೂ ಸಂಗಟ್ಟಲಾರವೆಂದು ತುಚ್ಛೀಕರಿಸಿ, ನಿತ್ಯಬ್ರಹ್ಮಚರ್ಯವ್ರತವನ್ನಾಶ್ರಯಿಸಿ, ಅನನ್ಯಭಕ್ತಿಯಿಂದ ಶ್ರೀಕೃಷ್ಣಮೂರ್ತಿಯನ್ನು ತನ್ನ ಅಲೌಕಿಕ ಪ್ರೇಮಸಂಪತ್ತಿನಿಂದ ವಶಪಡಿಸಿಕೊಂಡಳೋ, ಆಕೆಯ ಈ ಪಾವನ ಚರಿತ್ರೆಯು, ಶ್ರದ್ಧಾಭಕ್ತಿವಿಹೀನರಾಗಿ ದುರ್ಗತಿಗಿಳಿದಿರುವ ಭಾರತೀಯರ-ಕರ್ಣಾಟಕರ ಪ್ರಕೃತ ದುರವಸ್ಥೆಯಲ್ಲಿ ಅವರಿಗೆ ಮಾರ್ಗದರ್ಶಕವಾಗಿ, ಭಕ್ತಿ ಜ್ಞಾನ ವೈರಾಗ್ಯಗಳನ್ನೂ ನಿಷ್ಕಾಮ ಸೇವಾತತ್ಪರತೆಯನ್ನೂ ಇಂದ್ರಿಯ ನಿಗ್ರಹಾದಿ ಉದ್ಧಾರಕ ಮಾರ್ಗಗಳನ್ನೂ ಅವರಲ್ಲಿ ಉಂಟುಮಾಡಲಿ! ದೇಶಸೇವೆ ಈಶಸೇವೆಗಳಿಗಾಗಿ ತನುಮನ ಧನಗಳನ್ನೊಪ್ಪಿಸಲು ಅವರನ್ನು ಸಿದ್ಧಗೊಳಿಸಲಿ! ಭಕ್ತಾಗ್ರಗಣ್ಯಳಾದ ಶ್ರೀ ಮೀರಾಬಾಯಿಯ ಹೃದಯಾಂತರ್ವರ್ತಿಯಾಗಿದ್ದ ಶ್ರೀ ಬಾಲಕೃಷ್ಣ ಮೂರ್ತಿಯು ನಮ್ಮ ಈ ಪ್ರಾರ್ಥನೆಯನ್ನು ಅನುಗ್ರಹಿಸಿ ರಕ್ಷಿಸಲಿ.

ತಥಾಸ್ತು.

